# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :
ಕೆ. ಶಾಮರಾವ್

**

ಸಹಸಂಪಾದಕ :
ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :
ಯಕ್ಷಪ್ರಶ್ನೆ!

**

ಛಾಯಾಚಿತ್ರ :
ಎಮ್. ಎಸ್. ಗೌರೀಶಂಕರ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI, January 1987

# ಬೆಳಕಿಂಡಿ

ಮನುಷ್ಯನಿಂದ ಮನುಷ್ಯನನ್ನು ಬೇರ್ಪ-ಡಿಸುವುದು ಅಣುವಿಭಜನೆಗಿಂತ ಭಯಂಕರ ವಿನಾಶವನ್ನು ತಂದೊಡ್ಡಬಲ್ಲದು.

—ಲೂಯಿ ಗಿನ್ಸ್‌ಬರ್ಗ್

•

ಸೂರ್ಯ ಅದೆಷ್ಟು ದೊಡ್ಡ ಗ್ರಹವೆಂದರೆ ಒಂದು ವೇಳೆ ಅದು ಪೊಳ್ಳಾಗಿದ್ದಿದ್ದರೆ ಅದರಲ್ಲಿ ನಮ್ಮ ಭೂಮಿಯಂಥ ಹತ್ತು ಲಕ್ಷ ಜಗತ್ತು-ಗಳು ಹಿಡಿಸಬಹುದು. ಇಂಥ ೫೦ ಕೋಟಿ ಸೂರ್ಯರನ್ನು ಹಿಡಿಸಬಲ್ಲ ಅಳತೆಯ ನಕ್ಷತ್ರಗಳೂ, ಒಂದು ಆಕಾಶ ಗಂಗೆಯಲ್ಲಿ ಇಂಥ ೧೦೦ ಕೋಟಿ ನಕ್ಷತ್ರಗಳೂ ಇವೆಯಂತೆ. ಅಂದಮೇಲೆ ಈ ಜಗತ್ತು ಸಣ್ಣದೆಂದು ಹೇಳಿದವರಾರು?

—ಮಾರಿಸ್ ಮಾಂಡೆಲ್

•

ವಯಸ್ಸಾಯಿತು ಎನ್ನುವ ಮಾತೇ ಬಲು ಮೂರ್ಖತನದ್ದು. ನಾನು ಒಂದು ವರ್ಷ ಹಳಬನಾದಾಗ ಇತರರೂ ಹಾಗೆಯೆ ಆಗಿ-ರುತ್ತಾರೆ.

—ಗ್ಲೋರಿಯಾ ಸ್ವಾನ್ಸನ್

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

ಡಿಸೆಂಬರ್ ೧೯೮೭ರ 'ಕಸ್ತೂರಿ'ಯಲ್ಲಿ ಅಚ್ಚಾದ 'ಅಹೋಬಲ ಶಂಕರರೊಂದಿಗೆ' ಒಂದು ಸಂದರ್ಶನ ಜೀವನಾನುಭವದಾಳಕ್ಕಿಳಿದು ಧರ್ಮ, ದೇವರು, ಭಾಷೆ, ಸಾಹಿತ್ಯ ಜೀವನೋದ್ದೇಶ-ಗಳನ್ನು ಜೀವಂತವಾಗಿ ಚಿತ್ರಿಸಿದೆ.

ಗುಳಿಗೇನಹಳ್ಳಿ -ಜಿ. ಕೆ. ನಾಗಲಿಂಗಪ್ಪ

ಕನ್ನಡದ ಇಂದಿನ 'ವಾಙ್ಮಯ'ಗಳು ಭಾರತದ ಅನ್ಯಭಾಷಾ 'ವಾಙ್ಮಯ'ಗಳಿಗಿಂತ ಯಾವ ದೃಷ್ಟಿಯಲ್ಲೂ ಕಡಿಮೆಯಲ್ಲ ಎಂಬುದಕ್ಕೆ ಕನ್ನಡ ಸಾಹಿತ್ಯ ಕೃತಿಗಳಿಗೆ ಈ ವರೆಗೆ ಲಭ್ಯವಾಗಿರುವ ಅಂತಾರಾಷ್ಟ್ರೀಯ ಖ್ಯಾತಿಯ ಜ್ಞಾನಪೀಠ ಪ್ರಶಸ್ತಿಗಳು ಯೋಗ್ಯ ನಿದರ್ಶನವಾಗಿವೆ. ಅನ್ಯ ಯಾವ ಪ್ರದೇಶಿಕ ಭಾಷಾ ಸಾಹಿತ್ಯಕ್ಕೂ ಲಭ್ಯವಿಲ್ಲದಷ್ಟು 'ಜ್ಞಾನಪೀಠ ಪ್ರಶಸ್ತಿ'ಗಳು ಕನ್ನಡ ಸಾಹಿತ್ಯಕ್ಕೆ ಲಭ್ಯವಾಗಿವೆ! ಇಂದು ಸಮಗ್ರ ದೇಶವೇ ಕನ್ನಡ ಸಾಹಿತಿ–ಸಾಹಿತ್ಯ 'ಕೃತಿಗಳತ್ತ' ಕುತೂಹಲದ ದೃಷ್ಟಿ ಬೀರತೊಡ-ಗಿದೆ!" ಹೀಗಿದ್ದೂ ಅಹೋಬಲ ಶಂಕರರು (ಡಿಸೆಂಬರ್ ೮೭: ಕಸ್ತೂರಿ) ತಮ್ಮ ಸಂದರ್ಶನದಲ್ಲಿ: "ಅನ್ಯ ಭಾಷಾ ಸಾಹಿತಿ-ಸಾಹಿತ್ಯ ಕೃತಿಗಳೊಂದಿಗೆ ತುಲನೆ ಮಾಡಿದರೆ ಕನ್ನಡ ಸಾಹಿತ್ಯ ಪ್ರಗತಿ ಏನೂ ಸಾಲದು! ಕೈಲಾಸಂ, ಬೇಂದ್ರೆ ಮತ್ತು ಶಿವರಾಮ ಕಾರಂತ"ರನ್ನು ಹೊರತುಪಡಿಸಿದರೆ ಕನ್ನಡದಲ್ಲಿ ಅನ್ಯ ಸಾಹಿತಿಗಳೇ ಇಲ್ಲ ಎನ್ನುವ ಅರ್ಥದಲ್ಲಿ ಹೇಳಿರುವ ಹೇಳಿಕೆ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪಮಾನವಾಗಿದೆ

ಬರೋಡಾ -ಎಸ್ಕೆ ಹಳೆಯಂಗಡಿ

[ವಿಶ್ವ ಸಾಹಿತ್ಯದ ಮಟ್ಟಕ್ಕೇರಬಲ್ಲ ಕೃತಿಗಳು ಕನ್ನಡದಲ್ಲಿ ಇವೆಯೋ ಹೇಗೆಂಬ ಪ್ರಶ್ನೆಗೆ ಉತ್ತರ ಅಭಿಪ್ರಾಯದ ಪ್ರಶ್ನೆ. ಈ ಬಗ್ಗೆ ಅಹೋಬಲ ಶಂಕರರ ಅಭಿಪ್ರಾಯ ಸ್ವಾತಂತ್ರ್ಯವನ್ನು ಯಾರೂ ಕಸಿಯಲಾರರು; ಅಲ್ಲವೆ?

–ಸಂ.]

**ಔಚಿತ್ಯಪೂರ್ಣ**

ಡಿಸೆಂಬರ್ ಸಂಚಿಕೆಯ ಮುಖಚಿತ್ರದ ಆಯ್ಕೆ ಔಚಿತ್ಯಪೂರ್ಣವಾಗಿದೆ. ಶ್ರೀ ಸೀತಾರಾಮ ಮನ ಸೆಳೆಯುವಂತೆ ಸೆರೆ ಹಿಡಿದಿದ್ದಾರೆ. ನಿಮ್ಮ ಮುಖಪುಟವನ್ನು ಆರ್ಟ್ ಕಾಗದದ ಮೇಲೆ ಮುದ್ರಿಸಿದ್ದರೆ ಈ ಚಿತ್ರಗಳ ಸೌಂದರ್ಯ ಇನ್ನೂ ಸ್ಫುಟವಾಗಿ ಗೋಚರಿಸಬಹುದಿತ್ತು.

ಹುಬ್ಬಳ್ಳಿ –ಕೃಷ್ಣಮೂರ್ತಿ ಡಬೀರ

**'ಕೈ'**

ಡಿಸೆಂಬರ್ 'ಕಸ್ತೂರಿ'ಯಲ್ಲಿ ಖಜಾನೆ ಕೃಷ್ಣಮೂರ್ತಿಯವರ 'ಕೈ' ಕುರಿತ ಲೇಖನ ಸ್ವಾರಸ್ಯಕರ.

'ಕೈ'ರವರ ಹುಟ್ಟೂರು ಬೆಂಗಳೂರು ಹಾಗೂ ಜನನ ೨೯–೭–೧೮೮೪ ಎಂದಿರುವುದು ಸರಿಯಷ್ಟೆ. ಆದರೆ ಅವರ ಜನನ ಕುರಿತಂತೆ ದಿನ ಹಾಗೂ ಮಾಹೆಯ ಬಗ್ಗೆ ತುಸು ಒಮ್ಮತವಿದ್ದರೂ ವರುಷದ ಬಗ್ಗೆ ಮಾತ್ರ ಇನ್ನೂ ಜಿಜ್ಞಾಸೆ ಇರುವುದು ದಿಟ. ದಿ. ಅ. ನ. ಕೃ. ಹಾಗೂ ಕೀರ್ತಿಶೇಷ ಕಂದಾಡೆ ಕೃಷ್ಣಯ್ಯಂ-ಗಾರ್ಯರ ಪ್ರಕಾರ ಬೆಂಗಳೂರು ತಾರಾಮಂಡಲ ಪೇಟೆಯಲ್ಲಿ ೧೮೮೫ರಲ್ಲಿ ಜನಿಸಿದರು ಎನ್ನಲಾಗಿದೆ. ಸಿ. ಕೆ. ನಾಗರಾಜರಾಯರು ಹತ್ತಾರು ವರುಷಗಳ ಪಂಚಾಂಗವನ್ನು ಪರಿಶೋಧಿಸಿ ಆದ್ರ್ರಾ ನಕ್ಷತ್ರ ೧೮೮೬ ಎಂದಿದ್ದಾರೆ. 'ಕೈ'ರ ಅಚ್ಚುಮೆಚ್ಚಿನ ಶ್ರೀಮತಿ ಭವಾನಿ (ಡಿಂಕಿ)ಯವರ ಬಳಿ ದೊರೆತ ಡೈರಿಯಲ್ಲಿ ಹಾಗೂ ಅವರು ಸರಕಾರಿ ಉದ್ಯೋಗದಲ್ಲಿದ್ದ ಜಿಯೋಲಜಿ ಇಲಾಖೆಯಲ್ಲಿಯೂ ೧೮೮೬ ಎಂದು ನಮೂದಾಗಿದೆ. ವಿ. ಜಿ. ಕೃಷ್ಣಮೂರ್ತಿಯವರ ಇತ್ತೀಚಿನ ಸಂಶೋಧನೆಯಂತೆ 'ಕೈ'ರವರ ಭಾವಮೈದುನರಾದ ದಿ. ಆರ್. ಎಸ್. ವೆಂಕಟರಾಮ ಅಯ್ಯರ್ ಹಾಗೂ ಆರ್. ಎಸ್. ಚಂದ್ರಶೇಖರರಲ್ಲಿನ 'ಋಷಿಯೂರು ವಂಶದೀಪಿಕೆ'ಯ ಉಲ್ಲೇಖವು ಹುಟ್ಟೂರು ಮೈಸೂರಿನ ಅವರ ತಾಯಿಯ ಮನೆ–ಮಾತಾಮಹ ಎಡೆಯೂತಮಂಗಳಂ ನಾರಾಯಣಶಾಸ್ತ್ರಿಗಳ ಮನೆಯಲ್ಲಿ ಆದ್ರ್ರಾ ನಕ್ಷತ್ರ ಬೀಳುವ ೧೭-೮-೧೮೮೪ ಭಾನುವಾರ ಎಂದು ತಿಳಿಯಲಾಗಿದೆ. ಕೆ. ವೆಂಕಟರೆಡ್ಡಿ ಮತ್ತು ಅ. ರಾ. ಮಿತ್ರರೂ ೧೮೮೪ ಎಂದೆನ್ನುತ್ತಾರೆ.

ಒಟ್ಟಿನಲ್ಲಿ ಆಕರ್ಷಕ ವ್ಯಕ್ತಿತ್ವದ ನಮ್ಮ 'ಕೈ'ರವರ ಜನ್ಮ ದಿನಾಂಕವು ಅವರ ಬದುಕಿನ ಹಲವು ನಿಗೂಢತೆ, ವಿಚಿತ್ರಗಳಂತೆಯೇ ಇರುವುದೂ ಒಂದು ವಿಪರ್ಯಾಸವೇ ಸರಿ.

ಹಂಬ್ಬಳ್ಳಿ —ಡಾ. ಹೆಚ್. ಎ. ಪಾರ್ಶ್ವನಾಥ

**ಮಲೆಯಾಳಿಯಲ್ಲ**

'ಕಸ್ತೂರಿ'ಯ ಡಿಸೆಂಬರ್ ಸಂಚಿಕೆಯಲ್ಲಿ 'ಶವ' ಎಂಬ 'ಮಲೆಯಾಳಿ' ಕಥೆಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದನ್ನು ಕಂಡೆ. ಕೇರಳದ ಜನರು ಆಡುವ ಭಾಷೆಯ ಸರಿಯಾದ ಹೆಸರು 'ಮಲಯಾಳಂ'; 'ಮಲೆಯಾಳಿ' ಪದಕ್ಕೆ ಅರ್ಥ ಕೇರಳದವನು ಎಂದಾಗಿದೆ.

ಬೆಂಗಳೂರು —ಕೆ. ಸಿ. ಕೆ. ರಾಜಾ

[ನಿಮ್ಮ ಸಲಹೆ ಸೂಕ್ತವಾಗಿದೆ. ಸ್ವತಃ ಅನುವಾದಕರೂ ಈ ವಿಷಯವನ್ನು ನಮ್ಮ ಗಮನಕ್ಕೆ ತಂದಿದ್ದಾರೆ. ದೋಷಕ್ಕಾಗಿ ವಿಷಾದಿಸುತ್ತೇವೆ. —ಸಂ.]

**'ಪುಣ್ಯಶೀಲರು'**

ಪುನಃ ಡಿಸೆಂಬರ್ ೮೬ರ 'ಕಸ್ತೂರಿ'ಯಲ್ಲಿ ಗೀತಾ ೯-೩೨ ಕುರಿತು ನನ್ನ ಮಾತೇ ಕೊನೆಯದಾಗಬೇಕೆಂಬ ಆಗ್ರಹದಿಂದ ನಾನಿದನ್ನು ಬರೆಯುತ್ತಿಲ್ಲ. ಈ ವಾದವನ್ನು ಹುಟ್ಟು ಹಾಕಿದವನೂ ನಾನಲ್ಲ. "ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್" ಎಂಬ ಗೀತಾ ವಾಕ್ಯವನ್ನು ಪಾ. ವೆಂ. ಅವರ ಸ್ಮರಣೆಗೆ ತರುತ್ತೇನೆ. ನಮ್ಮ ಭಕ್ತಿಪಂಥ ವರ್ಣಾಶ್ರಮಗಳಿಂದ ಸೀಮಿತವಾಗಿಲ್ಲ ಎನ್ನುವುದರಲ್ಲಿ ತಥ್ಯವೂ ಇದೆ, ಸೌಮನಸ್ಯವೂ ಇದೆ. ಅಲ್ಲಿಯೂ ಬ್ರಾಹ್ಮಣರ ಶಾಠ್ಯವಿದೆ ಎನ್ನುವುದರಲ್ಲಿ ತಥ್ಯವಿಲ್ಲ, ವೈಮನಸ್ಯವಿದೆ. ಈ ಬುದ್ಧಿಭೇದವನ್ನು ಅಲ್ಲಗಳೆಯುವುದು ತಿಳಿದವರ ಕರ್ತವ್ಯ.

"ಕಿಂ ಪುನಃ ಬ್ರಾಹ್ಮಣಾಃ ಪುಣ್ಯಾಃ" ಎಂಬಲ್ಲಿ "ಪಾಪಯೋನಯಃ" ಎಂಬುದಕ್ಕೆ ಸಮನಾಗಿ "ಪುಣ್ಯಯೋನಯಃ" ಎಂಬ ಅರ್ಥ ಹೇಗೆ ಹೊರಟೀತು? "ಪುಣ್ಯಾಃ" ಎಂದರೆ ಸರಳವಾದ ಅರ್ಥ "ಪುಣ್ಯಶೀಲಾಃ" ಅಂದರೆ ಬ್ರಾಹ್ಮಣ ಯೋನಿಯಲ್ಲಿ ಜನ್ಮ ಮಾತ್ರ ಸಾಲದು, ಅವನು ಪುಣ್ಯಶೀಲನೂ ಆಗಿರಬೇಕು. ವರ್ಣಾಶ್ರಮದ ವ್ಯವಸ್ಥೆಯಲ್ಲಿ ಎಲ್ಲಿ ನೋಡಿದರೂ ಆಚಾರದಲ್ಲಿ ಬ್ರಾಹ್ಮಣ ಯೋನಿಯಲ್ಲಿ ಜನಿಸಿದವರ ಮೇಲೆ ನಿರ್ಬಂಧಗಳು ಹೆಚ್ಚು. ಆ ನಿರ್ಬಂಧಗಳನ್ನವರು ಪಾಲಿಸದಿದ್ದರೆ ಪತಿತರಾಗುತ್ತಾರೆ. ಆದ್ದರಿಂದ "ಪುಣ್ಯಾಃ" ಎನ್ನುವುದು ಒಂದು ನಿರ್ಬಂಧ. "ಎಲ್ಲಾ ಬ್ರಾಹ್ಮಣರಲ್ಲ! ಪುಣ್ಯಶೀಲರಾದ ಬ್ರಾಹ್ಮಣರು ಮಾತ್ರ" ಎಂಬುದು "ಪುಣ್ಯಾಃ" ಎಂಬುದಕ್ಕೆ ಸರಿಯಾದ ಅರ್ಥ.

ಬೆಂಗಳೂರು —ಪಿ. ವಿ. ಜೋಶಿ

**ಮೂಢ ನಂಬಿಕೆ**

ಡಿಸೆಂಬರ್ 'ಕಸ್ತೂರಿ'ಯಲ್ಲಿ ಅ. ವೆಂ. ಗುಂಡುರಾಯ ಅವರು ಬರೆದ 'ರತ್ನಗಳು-ನವರತ್ನ'ಗಳು ಕೊನೆಯಲ್ಲಿ (ಪುಟ ೩೫) ರತ್ನಗಳ ಗುಣದೋಷಗಳನ್ನು ವಿವರಿಸುವಾಗ ದೋಷಯುಕ್ತ ಆಭರಣಗಳನ್ನು ಧರಿಸಿದರೆ ಅನೇಕ ತೊಂದರೆಗಳಿಗೆ ಸಿಲುಕುವರೆಂದು ಎಚ್ಚರಿಸಿದ್ದಾರೆ.

ಜೀವನ ವಿಚಾರಗಳಲ್ಲಿರುವಂತೆ ನವರತ್ನಗಳ ಬಗ್ಗೆಯೂ ಎಷ್ಟೋ ಮೂಢ ನಂಬಿಕೆಗಳು ಜನರಲ್ಲಿವೆ. ನವರತ್ನಗಳ ಬಗ್ಗೆ ಮೇಲೆ ತಿಳಿಸಿದ ವಿವರಗಳು ಮೂಢ ನಂಬಿಕೆಯೇ ಹೊರತು ಬೇರೇನಲ್ಲ. ರತ್ನಗಳಲ್ಲಿರಬಹುದಾದ ಮಬ್ಬು ಮತ್ತು ಇತರ ನ್ಯೂನತೆಗಳು ಅವುಗಳೊಳಗಿರುವ ಅತಿ ಸೂಕ್ಷ್ಮ ಬಿರುಕು ರಂಧ್ರಗಳಿಂದಲೂ ಮತ್ತು ಒಳಗೊಂಡಿರುವ ಇತರ ಸೂಕ್ಷ್ಮ ವಸ್ತುಗಳಿಂದಲೂ ಉಂಟಾಗುವುವು. ಈ ದೋಷಗಳು ರತ್ನ ಖನಿಜಗಳ ಸ್ಫುಟಿಕೀಕರಣ ಸಮಯದಲ್ಲಿ ಉಂಟಾದವು. ಅವು ಎಂದಿಗೂ ನಾಶವಾಗುವುದಿಲ್ಲ. ಆದ್ದರಿಂದ ರತ್ನಗಳು ಮತ್ತು ನವರತ್ನಗಳ ಬಗ್ಗೆ ಇರುವ ತಪ್ಪು ಕಲ್ಪನೆಯನ್ನು ತೊಡೆದು ಹಾಕಿ ಅವುಗಳ ಗುಣಮಟ್ಟವನ್ನು ಅರಿತು ಅವರಿಗೆ ಇಷ್ಟವಾದುದನ್ನು ಯಾವ ಸಮಯದಲ್ಲಿಯಾದರೂ ಬಳಸಬಹುದು.

ಸೊಂಡೂರು —ಪುರುಷೋತ್ತಮ ರೆಡ್ಡಿ ಆರ್.

# ಕಸ್ತೂರಿ

ವರ್ಷ : ೩೧ | ಜನೆವರಿ, ೧೯೮೭ | ಸಂಚಿಕೆ : ೫



## ಹೊಸ ವರುಷದ ಹಾಡು: ೧೯೮೭



ಅವಕಾಶವಿಲ್ಲದ್ದಕ್ಕೆ ಅನುಪಮ ಅರಳಿಕೊಂಡಿಲ್ಲ
ಅನ್ನುವದೆಲ್ಲ
ಅಯೋಗ್ಯನ ಅಪ್ರಲಾಪ ಮಾತ್ರ.

ಇದ್ದ ಸಾಧ್ಯಗಳನ್ನೇ ಉಜ್ಜಿ
ತನ್ನತನ ತಿದ್ದಿದ್ದಷ್ಟು, ಉದ್ದಗಲ ಹಬ್ಬಿದ್ದಷ್ಟು
ಎಂಬುದಷ್ಟೇ ಬದುಕಿನವಕಾಶದರ್ಥ.

ಹತ್ತು ಹಿಮಾಲಯಗಳ ಕಲ್ಲು ಬೆಟ್ಟ ಕತ್ತರಿಸಿ
ಹರಿದೇ ಇವೆ ಹೊಳೆ ಸಾವಿರ
ಹಿಗ್ಗಿಸಿಕೊಂಡು ತಮ್ಮ ಪಾತ್ರ.

ಕೆಂಡ ಕೆಳಗಿನ ಮರುಭೂಮಿ ಮಧ್ಯ
ಕೊರಳೆತ್ತಿ ಅರಳಿ ನಿಲ್ಲುವುದೊಂದೇ
ಕ್ಯಾಕ್ಟಸ್ ಕೊಡುವ ಕೊನೆಯ ಪಾಠ.

ಬೇರು ಬಿಟ್ಟಷ್ಟೂ ಭೂಮಿ, ಬೆಳೆದು ನಿಂತಷ್ಟೂ ಬಾನು,
ಹಸಿರು ಹರಡಿದಷ್ಟೂ ಉಸಿರು, ಹೃದಯ ಹಿಡಿಸಿದಷ್ಟೂ ಬದುಕು;

ತೆರೆದೇ ಇವೆ ತಬ್ಬಲು
ತೆಕ್ಕೆ ತಣಿಯುವಷ್ಟು.

**ದೇಶಪಾಂಡೆ ಸುಬ್ಬರಾಯ**



# ಬಿಂಬ ಪ್ರತಿಬಿಂಬ

ಶ್ರೀನಿವಾಸ ತೋಷಖಾನೆ

---

ವಿಶ್ವದಲ್ಲಿಯೇ ಪ್ರಾಚೀನತಮವೆಂದು ವಿಖ್ಯಾತವಾದ ಸಂಸ್ಕೃತ ವಾಙ್ಮಯ ತನ್ನದೇ ಆದ ವೈಶಾಲ್ಯ-ವೈವಿಧ್ಯ-ವೈಶಿಷ್ಟ್ಯಗಳಿಂದ ವಿದ್ವಾಂಸರ ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿದೆ. ತಮ್ಮ ಅಮೂಲ್ಯವಾದ ಕೊಡುಗೆಗಳನ್ನು ನೀಡಿ ಅದರ ಸಂಪದಭಿವೃದ್ಧಿಗೆ ಕಾರಣರಾದ ಕಾಳಿದಾಸಾದಿ ಕವಿಗಳ ಕೃತಿಗಳಲ್ಲಿ ಒಡೆದು ಕಾಣುವಂತಹ ಕೆಲವೊಂದು ಶ್ಲೋಕಗಳು ಕಲಾತ್ಮಕವಾದ ಸುಂದರ ಶಬ್ದ ಚಿತ್ರಗಳಾಗಿವೆ. 'ಕಿರಿದರೊಳ್ ಪಿರಿದರ್ಥಮಂ' ಎಂದೆನ್ನುವಂತೆ ನಾಲ್ಕು ಚರಣಗಳ ಅಲ್ಪ ಗಾತ್ರದಲ್ಲಿ ಅವು ಒಳಗೊಳ್ಳುವ ಭಾಷೆ-ಭಾವಗಳ ಸೊಬಗು-ಸೊಗಸುಗಳು ಇನ್ನು ಬೇರೆಲ್ಲೂ ಕಾಣದಂತಹವು. ಆಂಗ್ಲ ಕಾವ್ಯದ ಹದಿನಾಲ್ಕು ಸಾಲುಗಳ 'ಸಾನೆಟ್' (ಅಷ್ಟ ಷಟ್ಪದಿ) ಒಳಗೊಳ್ಳಲಾರದಷ್ಟು ವಿಷಯ ಅವುಗಳಲ್ಲಿ ಅಡಕವಾಗಿದೆ ಎಂದು ಡಾ. ಎ. ಬಿ. ಕೀಥ್ ಮೊದಲಾದ ವಿಮರ್ಶಕರ ಅಭಿಮತ. ಇಂತಹ ಅನರ್ಘ್ಯ ರತ್ನಗಳಲ್ಲಿ ಕೆಲವೊಂದನ್ನು ಆಯ್ದುಕೊಂಡು ಕನ್ನಡಕ್ಕೆ ಅನುವಾದಿಸುವ ಪ್ರಯತ್ನ ಇಲ್ಲಿ. "ಅವಳ ತೊಡೆಗೆ ಇವಳಿಗಿಟ್ಟು ನೋಡಬಯಸಿದೆ" ಎಂದು ಮೊದಲಾಗಿ ಹಾಡಿದ ಬಿ. ಎಂ. ಶ್ರೀ ಅವರು ಅಂದು ಆಂಗ್ಲ ಪುಷ್ಪಗಳ ಪರಿಮಳವನ್ನು ಕನ್ನಡದ ಕುಸುಮಗಳು ಬೀರುವಂತಾಗಲೆಂದು ಬಯಸಿದಂತೆಯೆ, ಸಂಸ್ಕೃತ ಸುಮಗಳ ಚೆಲುವು-ನಿಲುವು ಕನ್ನಡದ ಹೂವುಗಳು ತಳೆಯುವಂತಾಗಲೆಂಬ ವಿನಮ್ರ ಭಾವ ಪ್ರಸ್ತುತ ಅನುವಾದಕನದು. ಸಹೃದಯಿಗಳಾದ ಓದುಗರು ಇದನ್ನು ಮೆಚ್ಚಿಕೊಂಡರೆ ಇದಕ್ಕಿಂತ ಹೆಚ್ಚಿನದು ಇನ್ನಾವುದು?

---

ಶ್ರದ್ಧಾಭಕ್ತಿಗಳಿಂದ ನಾವು ನಿತ್ಯವೂ ಆರಾಧಿಸುವ ದೇವತೆಗಳ ಸುತ್ತ ಮೋಜಿನ ಸನ್ನಿವೇಶವೊಂದನ್ನು ಕಲ್ಪಿಸಿ ಬಣ್ಣಿಸುವುದು, ಅಂತಹ ದೇವತೆಗಳ ಅನುಗ್ರಹವನ್ನು ಕೋರುವುದು ನಮ್ಮ ಪ್ರಾಚೀನರು ತಮ್ಮ ದೇವನಿಷ್ಠೆಯನ್ನು ವ್ಯಕ್ತಪಡಿಸುವ ಒಂದು ವಿಧಾನ, ಇಂತಹ ತಮಾಷೆಯ ಪ್ರಸಂಗವೊಂದನ್ನು ದಿಗಂಬರನೆಂದು ವಿಖ್ಯಾತನಾದ ಶಿವನನ್ನು ಕುರಿತು ಓರ್ವ ಸಂಸ್ಕೃತ ಕವಿ ಚಿತ್ರಿಸಿದ್ದಾನೆ. ಗರುಡಾರೂಢನಾಗಿ ಹರಿಯು ಹರನನ್ನು ಕಾಣಲು ಬಂದಾಗ ಅತಿಥಿಯನ್ನು ಬರಮಾಡಿಕೊಳ್ಳಲು ಹೊರಟ ಶಿವನು ಪಟ್ಟ ಫಜೀತಿ ಇಲ್ಲಿ ಮನೋಜ್ಞವಾಗಿ ಮೂಡಿಬಂದಿದೆ. ಮೂಲ ಪದ್ಯ ಇಂತಿದೆ:

**ವಿಷ್ಣೋರೀಶ್ಯಾಗಮನಂ ನಿಶಮ್ಯ ಸಹಸಾ**
**ಕೃತ್ವಾ ಫಣೀಂದ್ರಂ ಗುಣಂ**
**ಕೌಪೀನಂ ಪರಿಧಾಯ ಚರ್ಮ ಕರಿಣಃ ಶಂಭೌ**
**ಪುರೋ ಧಾವತಿ।**
**ದೃಷ್ಟ್ವಾ ವಿಷ್ಣುರಥಂ ಸಕಂಪಹೃದಯಃ**
**ಸರ್ಪೋಽಪತದ್ ಭೂತಲೇ**
**ಕೃತ್ತಿರ್ವಿಸ್ಖಲಿತಾ ಹ್ರಿಯಾನತ ಮುಖೋ**
**ನಗ್ನೋ ಹರಃ ಪಾತು ವಃ॥**

*

**ಕನ್ನಡ ಭಾವಾನುವಾದ :**

**ಶ್ರೀ ವಿಷ್ಣುವು ಬರುತಿರುವನು—ಎಂಬ**
**ವಾರ್ತೆ ಕೇಳುತ**
**ಕೊರಳ ಹಾವ ಶಂಭುವು ಉಡುದಾರವೆಂದು**
**ಕಟ್ಟುತ**
**ಗಜಚರ್ಮವೆ ಕೌಪೀನವು ಎಂದು ಬಿಗಿದು**
**ಕೊಳ್ಳುತ**



**ಧಾವಿಸುವನು ಮುಂದಕೆ ಸ್ವಾಗತವ ಹರಿಗೆ**
**ಹೇಳುತ**
**ಗರುಡನ ಕಂಡೊಡೆ ಸರ್ಪವು ನಡುಗಿತು;**
**ಎದೆಯೊಡೆಯಿತು;**
**ನೆಲದ ಮೇಲೆ ಅದು ಬಿದ್ದಿತು; ಆನೆದೊಗಲು**
**ಕಳಚಿತು!**
**ನಾಚಿ ಮುಖವ ತಗ್ಗಿಸಿ ಶಿವ ಅತಿಥಿಯೆದುರು**
**ನಿಲ್ಲುವ**
**ಒಳಿತು ಮಾಡಿ, ಕೆಡುಕು ಮಾಡಿ ಅವನೆ ಜಗವ**
**ಸಲುಹುವ!**



# ಶತಮಾನದ ಕೃತಿನೂರು

## ಪ್ರಹಾರ/ಜಗುರು

**ದೇಶಪಾಂಡೆ ಸುಬ್ಬರಾಯ**

## ೨೧

## ಲಾಂಗೂಲಾಚಾರ್ಯ/ಪ್ರಹಾರ

ಲಾಂಗೂಲಾಚಾರ್ಯರು, ಎಂದರೆ, ಪಾಡಿಗಾರು ವೆಂಕಟರಮಣಾಚಾರ್ಯರು ಸ್ವಭಾವತಃ ಒಬ್ಬ ಪ್ರತಿಭಾವಂತ ಕವಿಗಳು. ವಾಸ್ತವವಾಗಿ ಈ ಮಾಲಿಕೆಯಲ್ಲಿ ಅವರ ಒಂದು ಕವನ ಸಂಗ್ರಹವನ್ನು ಆಯ್ದುಕೊಳ್ಳುವುದೇ ಹೆಚ್ಚು ಯೋಗ್ಯವಾಗಿತ್ತು. ಆದರೆ ಹಲವಾರು ಕಾರಣಗಳಿಂದ (ಆಚಾರ್ಯರ 'ವ್ಯಕ್ತಿತ್ವ'ವನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ ನೋಡಿದರೆ, ಆಚಾರ್ಯರ ಪ್ರಬಲ ಪ್ರತಿಸ್ಪರ್ಧಿ ಸ್ವತಃ ಆಚಾರ್ಯರೇ ಆಗಿರುವಂತೆ) ಅವರ ಪದ್ಯಗಳಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿ ನಿಂತ ಈ ಗದ್ಯ ಬರಹವನ್ನೇ ನಾನು ಇಲ್ಲಿ ಅನಿವಾರ್ಯವಾಗಿ ಆಯ್ದುಕೊಳ್ಳಬೇಕಾಯಿತು. *

ಹಾಗೆಂದು, ಆಚಾರ್ಯರ ಕಾವ್ಯ ಬರಹಗಳನ್ನು ನಾನು ಇಲ್ಲಿ ಎತ್ತಿಕೊಂಡಿಲ್ಲವಾದರೂ, ಇಲ್ಲಿ ಸಾಗಿರುವದು ಮಾತ್ರ, ಒಂದರ್ಥದಲ್ಲಿ, 'ಇಷ್ಟದೇವತಾವಿಗ್ರಹಕ್ಕೆ [illegible]ಸುವ ಅಸಲು ಕಸಬಿನ ಕೆಲಸ'ವೇ. ಸಮಾಜದ ಸಾವಿರ ಮುಖಗಳಿಗೆ ತಾಳಿದ ಕಲೆಗಳನ್ನು ಕಿತ್ತಿ, ಊನಗಳನ್ನು ಮತ್ತು ಅಂತಿಮವಾಗಿ ಉತ್ತಮಕ್ಕೇರಿಸುವ ವಿಧಾಯಕ ಕಾರ್ಯ. ಎಂತಲೇ, ಅಭಿವ್ಯಕ್ತಗೊಳ್ಳುತ್ತ ಹೋದಂತೆ, ಒಂದು ಉತ್ತಮ ಕವಿತೆ, ಆರಂಭದಲ್ಲಿ, ಕವಿ ಅಂದುಕೊಂಡಂತಹ ಆಶಯವನ್ನು ಮತ್ತು ಕಾವ್ಯದ ಶರೀರವನ್ನು ಮಿಕ್ಕಿ ಇನ್ನೂ ಎತ್ತರಕ್ಕೆ ಬೆಳೆಯುವಂತೆ, ಒಂದು ಉತ್ತಮ ಹರಟೆ ಕೂಡ, ತನ್ನ ಹಾಸಿಗಿಂತ ಹೆಚ್ಚಿನದನ್ನೂ ಸಾಧಿಸಬಲ್ಲದು ಎಂಬುದನ್ನು ಸಿದ್ಧಪಡಿಸಿದ ಸಾರ್ಥಕತೆ 'ಪ್ರಹಾರ'ಕ್ಕಿದೆ.

ಆದರೆ ಗಮನಿಸಬೇಕಾದ ಅಂಶವೆಂದರೆ, ಈ ಸಾರ್ಥಕತೆಗೆ ಹೊಳಪು ಬಂದದ್ದು ಇಲ್ಲಿಯ ಹಾಸ್ಯ ಪ್ರಜ್ಞೆಯಿಂದಾಗಿ. ಎಂದರೆ, ಗಂಭೀರ ಚಿಂತನಶೀಲನೊಬ್ಬನಿಗೆ, ಹಾಸ್ಯಪಜ್ಞೆ ಇದ್ದರೆ, ಆತನ ಹರಟೆಯ ಮಾಧ್ಯಮ ಮುಖೇನ, ಆತನ ಹಾಸ್ಯಪ್ರಜ್ಞೆಯ ಒಡಲಲ್ಲೇ ಆತನ ಗಾಂಭೀರ್ಯಕ್ಕೊಂದು ಹೊಸ ನಿಶಿತತೆಯೇ ಪ್ರಾಪ್ತವಾಗಿಬಿಡಬಲ್ಲದು ಎಂಬುದಕ್ಕೆ ಒಂದು ಉತ್ತಮ ಉದಾಹರಣೆಯೂ ಹೌದು ಈ ಕೃತಿ.

ಚೋದ್ಯವೆಂದರೆ, ಒಂದು ಹಾಸ್ಯ ಪ್ರಜ್ಞೆಯ ಭಿತ್ತಿಯನ್ನು ಹೊಂದಿದ ಹರಟೆಯ ಮುಖೇನ,

---

ಕಳೆದ ಫೆಬ್ರುವರಿಯಲ್ಲಿ ನಿಮ್ಮೆದುರು 'ಶತಮಾನದ ಕೃತಿನೂರು' ಎಂಬ ಮೌಲ್ಯ ವಿವೇಚನ ಮಾಲೆಯ ಭವ್ಯ ಯೋಜನೆಯನ್ನು ಉದ್ಘಾಟಿಸಿ ನಿಮ್ಮ ನಿರೀಕ್ಷೆಗೇ ಸವಾಲೆಸೆದಂತಾಗಿತ್ತು. ಮುಂದೆ ಅಕ್ಟೋಬರ್ ಸಂಚಿಕೆಯ ವರೆಗೆ (ವಿಶೇಷ ಸಂಚಿಕೆಯೊಂದನ್ನು ಹೊರತು ಪಡಿಸಿ) ಪ್ರತಿ ಸಂಚಿಕೆಯಲ್ಲಿ ನಮ್ಮ ಮಾತನ್ನು ನಡೆಸಿಕೊಂಡೇ ಬಂದಿದ್ದೆವು. ಆದರೆ ನವೆಂಬರ್ ಡಿಸೆಂಬರ್ ಎರಡು ತಿಂಗಳಲ್ಲಿ ಮಾತ್ರ ನಮ್ಮ ಈ ಯೋಜನೆ ಪ್ರಾರಂಭಶೂರತ್ವಕ್ಕೊಂದು ಉದಾಹರಣೆಯಾಗಿ ನಿಲ್ಲಬಹುದೇನೋ ಎಂಬ ಭಯ ಹುಟ್ಟಿಸಿತ್ತು. ಆದರೆ ಈಗ ಲೇಖಕರು ಇನ್ನು ಮುಂದಿನ ಒಂದೂ ಸಂಚಿಕೆಗೂ ತಪ್ಪದಂತೆ 'ಅಭಯ' ನೀಡಿದ್ದಾರಾದ್ದರಿಂದ ೧೯೮೭ರ ಹೊಸ ವರ್ಷದಿಂದಾರಂಭಿಸಿ ಪ್ರತಿ ತಿಂಗಳೂ ನಿಮಗೆ ಈ ಜ್ಞಾನರಸದ ಊಟಣ ತಪ್ಪದೆಂದು ಆಶ್ವಾಸನವೀಯುತ್ತೇವೆ.

—ಸಂಪಾದಕ

---

* ಪದ್ಯಕ್ಕಿಂತ 'ಪ್ರಹಾರ'ದತ್ತಲೇ ಆದ್ಯಗಮನವಿತ್ತು 'ಪುರಸ್ಕರಿಸು'ವುದು ಯಾವತ್ತೂ 'ಜಾಣ'ರ ಲಕ್ಷಣ!

ಮನುಷ್ಯನ ನೋವು, ದುರಂತ, ವಿಷಾದಗಳನ್ನು ಕೂಡ ಎಷ್ಟು ಆಳವಾಗಿ, ಸಮರ್ಥವಾಗಿ ಮತ್ತು ಸ್ವಾಭಾವಿಕವಾಗಿ ತೋರಿಸಬಹುದು ಎಂಬುದನ್ನು ಅಭಿವ್ಯಕ್ತಿಸಿದ, ಆವಿಷ್ಕರಿಸಿದ ಇಲ್ಲಿಯ ವಿಸ್ಮಯ ಕರ ವೈಶಿಷ್ಟ್ಯ. 'ಸ್ವಲ್ಪ ಅವಿವೇಕವಿರಲಿ' ಎಂಬ ಬರಹದಲ್ಲಿ, ಒಂದು ಬಗೆಯ ವಿಷಾದದ ಧ್ವನಿ ಯಲ್ಲಿ, ಒಂದು ಅತ್ಯಂತ ವಿವೇಕದ ಮಾತನ್ನು ಹೇಳುತ್ತಾರೆ ಆಚಾರ್ಯರು: "ರಾಷ್ಟ್ರಗಳು ಜಾಗ ತಿಕ ಯುದ್ಧಗಳನ್ನು ಸಾರುವ ಬದಲು ಜಾಗತಿಕ ಉತ್ಸವಗಳನ್ನು ಸಾರಿದರೆ ಎಷ್ಟು ಚೆನ್ನಾಗಿರು ತ್ತಿತ್ತು!"

ಮನುಷ್ಯನ ಕ್ರೌರ್ಯಕ್ಕೆ ಕಬಂಧ ಬಾಹುಗಳಿವೆ. ಮತ್ತು ಇವು ಸದಾ ಕ್ರಿಯಾಶೀಲವಾಗಿದ್ದು ಕತ್ತು ಹಿಚುಕುವ ಕಾರ್ಯದಲ್ಲಿ ಸದಾ ನಿಮಗ್ನವಾಗಿಯೇ ಇರುತ್ತವೆ. ಎಂತಲೇ, ಕಾಲಕಾಲಕ್ಕೆ, ಈ ಕ್ರೌರ್ಯಕ್ಕೆ ತಕ್ಕ ಗ್ರಾಸವನ್ನೊದಗಿಸುವ ಕರ್ತ ವ್ಯದಲ್ಲಿ ಮನುಷ್ಯ ಸದಾನಿರತನಾಗಿಯೇ ಇರು ತ್ತಾನೆ. ಎಷ್ಟೋ ಸಲ, ಏನೂ ಸಿಕ್ಕದಿದ್ದಾಗ, ಇದ್ದುದನ್ನೇ ತಕ್ಕದ್ದೆಂದು ತರ್ಕ ಮುಖೇನ ಪ್ರತಿ ಪಾದಿಸಿ ಪಾತಾಳಕಟ್ಟುತ್ತಾನೆ, ಪಾಶವೀಯತೆ ಯನ್ನು ತೃಪ್ತಿಗೊಳಿಸಿಕೊಳ್ಳುತ್ತಾನೆ. ಮನುಷ್ಯನ ಈ ಬರ್ಬರ ಪ್ರವೃತ್ತಿಯನ್ನು, ಈ ಪ್ರವೃತ್ತಿಯ ಹಿಂದಿರುವ ಪಾಶವೀಯತೆಯನ್ನು ವಿವರಿಸುತ್ತ, ತುಂಬ ಮಾರ್ಮಿಕವಾಗಿ ಹೇಳುತ್ತಾರೆ ಆಚಾ ರ್ಯರು, "ಚರ್ಚಿಲ್ಲರು ಯುದ್ಧ ಕಾಲದಲ್ಲಿ ಯಾವಾಗಲೂ ಜರ್ಮನರನ್ನು 'ಹೂಣ'ರೆಂದು ಕರೆಯುತ್ತಿದ್ದರು. ಒಬ್ಬನನ್ನು ಹೂಣನೆಂದು ಕರೆದ ಮೇಲೆ ಅಮಾನುಷವಾಗಿ ಕ್ರೂರವಾಗಿ ನಡೆಸಿಕೊಳ್ಳುವದು ಅತ್ಯಂತ ಮಾನವೀಯ- ವಾಗುತ್ತದೆ."

ತನ್ನ ಮೂಗಿನ ನೇರಕ್ಕೇ ನಡೆದುಕೊಳ್ಳುವ ಮನುಷ್ಯನ ಇನ್ನೊಂದು ಬಗೆಯ ತರ್ಕಕ್ಕೆ ಮತ್ತೊಂದು ಕಟಕಿ ಕನ್ನಡಿಯನ್ನು ಹಿಡಿದು ಹೇಳುತ್ತಾರೆ: "ನರಕಾಸುರನಿಗೆ ತನ್ನಲ್ಲಿಯ ಹೆಂಗ ಸರನ್ನು ಹೇಗೆ ನಡೆಯಿಸಿಕೊಳ್ಳಬೇಕೆಂದು ಗೊತ್ತಿಲ್ಲ ದಿದ್ದರೆ, ಅವರನ್ನು ಕೃಷ್ಣ ತನ್ನ ಜನಾನಾಖಾನೆಗೆ ಸೇರಿಸಿಕೊಳ್ಳುವುದು ಅತ್ಯಂತ ಕ್ರಮಪ್ರಾಪ್ತ ವಾಗುತ್ತದೆ."

ಬದುಕಿನ ವಿಭಿನ್ನ ಹಂತಗಳನ್ನು ವಿಶ್ಲೇಷಿಸಿ ನೋಡಿದಾಗ, ವಿವಿಧ ಕ್ರಿಯೆ ಪ್ರಕ್ರಿಯೆಗಳನ್ನು, ವಿಚಾರ ವಿವೇಚನೆಗಳನ್ನು, ಜೀವಿಸುವ ವಿಭಿನ್ನ ಪರಿಕ್ರಮಗಳನ್ನು ವಿಶ್ಲೇಷಿಸಿ ನೋಡಿದಾಗ; ನಿಜ, ಮನುಷ್ಯನ ಬದುಕೇ ಅಸಂಗತವಾದದ್ದು, ಅಸಂಬದ್ಧವಾದದ್ದು. ಅನೇಕ ಬಗೆಯ ವೈಷಮ್ಯ ಗಳಿಂದ ಕೂಡಿದ್ದು, ಕಗ್ಗಂಟುಗಳಿಂದ ಹೊಸೆ- ಯಲ್ಪಟ್ಟದ್ದು ಎನಿಸುತ್ತದೆ. ಎಂತಲೇ ಹೊರ ನೋಟಕ್ಕೆ ದುಃಸಹವೆನಿಸುತ್ತದೆ. ಸುಸಂಬದ್ಧ- ವಾಗಿ ಜೀವಿಸುವದೇ ಅತೀತವೆನಿಸುತ್ತದೆ. ಆದರೆ, ಈ ಹಂತದಲ್ಲಿಯೇ, ಇವೆಲ್ಲದರ ಮಧ್ಯದಿಂದ ಆಚಾರ್ಯರು ಹೊರಡಿಸುವ ವಿಶಿಷ್ಟ ಧ್ವನಿ ಪ್ರಶ್ನೆಯೊಂದನ್ನು, ಸಾರ್ವಕಾಲಿಕ ವೈಚಿತ್ರ್ಯ ವೊಂದನ್ನು ಮುಂದಿಡುತ್ತದೆ: "ನಮ್ಮ ಜೀವನ- ದಲ್ಲಿಯ ಅಸಂಬದ್ಧತೆಗಳೇ ಅಲ್ಲವೇ ಅದನ್ನು ಜೀವಿಸಲು ಯೋಗ್ಯವಾಗಿ ಮಾಡಿರುವುದು?"

ಆಚಾರ್ಯರ ಪ್ರತಿಭೆ ಕೆಲವು ಸಲ, ಕೆಲವು ವಿಲಕ್ಷಣ ಸತ್ಯಗಳನ್ನು ಪ್ರಕಟಿಸುತ್ತದೆ. ಉದಾ: "ಕೆಲವೊಂದು ಪ್ರಸಂಗಗಳಲ್ಲಿ ಹೇಡಿಯಷ್ಟು ಧೈರ್ಯಶಾಲಿ ಯಾರೂ ಇರುವದಿಲ್ಲ. ಅವನು ತಾನು ಹೇಡಿ ಎಂದು ತೋರಿಸಿಕೊಳ್ಳಲಾರದಷ್ಟು ಹೇಡಿಯಾಗಿರುತ್ತಾನೆ." ಪುಕ್ಕಲುತನವನ್ನು ಪ್ರಕಟಿಸಿಕೊಳ್ಳದಂತೆಯೂ ಇರಲು ಧೈರ್ಯ ಬೇಕು ಎನ್ನುವುದು ಎಂತಹ ವಿಪರೀತ ವಿಪರ್ಯಾಸದ, ಆದರೆ ಸತ್ಯದ ತರ್ಕ! ತತ್‌ಕ್ಷಣವೇ ಎದುರಾದ ಹಾವಿನ ಮೂತಿ- ಯನ್ನು ಮುಖಾಮುಖಿ ನೋಡುತ್ತ, ಓಡಿ ಹೋಗದೇ, ನಿಂತಲ್ಲಿ ನಿಂತೇ ಬಿಡುವಂತಹ ಕಪ್ಪೆಯ ಸ್ಥಿತಿ ಇದು.

ಇದಕ್ಕೆ ಕಾರಣವಿಷ್ಟೆ. ಗಾಬರಿ ಮನುಷ್ಯನ ಬಹು ದೊಡ್ಡ ಶತ್ರು. ವಿಪತ್ತು ತರುವುದಕ್ಕಿಂತ ಎಷ್ಟೋ ಮುಂಚೆಯೇ ಗಾಬರಿ ಮರಣದ ಭಾಸವನ್ನಂತೂ ತಂದೇ ಬಿಡುತ್ತದೆ. ಮರಣದ ಮತ್ತು ಎಲ್ಲ ಮತ್ತುಗಳಿಗಿಂತಲೂ ಹೆಚ್ಚು ಗಾಢ ವಾದದ್ದು. ಒಮ್ಮೆ ಈ ಮತ್ತಿನ ಭಾವಜಗತ್ತನ್ನು ಹೊಕ್ಕ ಮನುಷ್ಯ ತಿರುಗಿ ಬರುವುದು ತೀರ ಕಷ್ಟ ಸಾಧ್ಯ.

'ಬಫೆಲೋಲ್ಯಾಂಡ್' ಇಲ್ಲಿಯ ಒಂದು ಅತ್ಯು

ತ್ರಮ ವಿಡಂಬನಾತ್ಮಕ ಬರಹ. ಜಾತಿಯ ಹೆಸರಿನಲ್ಲಿ ನಡೆಯುವ ಸಕಲ ಮೂರ್ಖತನ, ಧೂರ್ತತನ, ಕ್ರೌರ್ಯ, ಸಣ್ಣತನ, ರಂಪರಾಜಕೀಯ ಇವೆಲ್ಲವುಗಳಿಗೂ ಬಿಡಿಸಿ ಸೂಕ್ಷ್ಮ, ಆದರೆ ಅಷ್ಟೇ ದಿಟ್ಟವಾದ ಕನ್ನಡಿಯಾಗಿದೆ ಈ ಬರಹ. ಎಲ್ಲ ಜನರನ್ನು ಎಲ್ಲ ಕಾಲಕ್ಕೂ ಮೂರ್ಖರನ್ನಾಗಿಸಲು ಯಾರಿಂದಲೂ ಸಾಧ್ಯವಾಗಿಲ್ಲ. ನಿಜ. ಆದರೆ ಕಾಲಕ್ಕೆ ತಕ್ಕ ಹಾಗೆ, ಕೆಲವೇ ಜನರನ್ನು ಮತ್ತೆ ಮತ್ತೆ ಮೆಟ್ಟಿ ಹಾಕುತ್ತ, ಹೆಚ್ಚು ಜನರನ್ನು ಯಾವ ಕಾಲಕ್ಕೂ ಸಂತೃಪ್ತರನ್ನಾಗಿರಿಸಲು (ಕನಿಷ್ಠ ಪಕ್ಷ ಸುಮ್ಮನಾಗಿರಿಸಲು) ಸಾಧ್ಯ ಎಂಬುದನ್ನು ನಮ್ಮ ರಾಜಕಾರಣಿಗಳು ಈ ಜಾತೀಯತೆಯ ಹಿನ್ನಲೆಯಲ್ಲಿ ಅರ್ಥ ಮಾಡಿಕೊಂಡಿದ್ದಾರೆ. ಎಂತಲೇ, ಇಂತಹ ಆಟಗಳನ್ನು ಮತ್ತೆ ಮತ್ತೆ ಆಡಿಕೊಳ್ಳುತ್ತಲೇ ಬಂದಿದ್ದಾರೆ.

ಜನತೆಯ ಮೌಢ್ಯ ಮತ್ತು ರಾಜಕಾರಣಿಗಳ ಸಮಯಸಾಧಕತೆ ಇವೆರಡೂ ಈಯಬಹುದಾದ ಮತ್ತು ಈಯುತ್ತಿರುವ ನಮ್ಮ ಪ್ರಸ್ತುತ ಸಂದರ್ಭದ ಒಂದು ಕಟುಸತ್ಯದ ಚಿತ್ರಣ, 'ಬಫೆಲೋಲ್ಯಾಂಡ್.'

ತನ್ನ ಎರಡೂ ಕಣ್ಣು ಹೋದರೂ ಅಡ್ಡಿ ಇಲ್ಲ, ಇನ್ನೊಬ್ಬನ ಒಂದಾದರೂ ಕಣ್ಣು ಹೋಗಲಿ ಎನ್ನುವುದು 'ಜಾತಿವಾದಿ'ಯಲ್ಲಿ ತೀರ ಸಾಮಾನ್ಯವಾಗಿ ಕಂಡುಬರುವ ಒಂದು ಜಾಡ್ಯ. ಇದನ್ನೇ ಆಚಾರ್ಯರು ತೀರ ಕಟುವಾದ ಮಾತಿನಲ್ಲಿ ಹೇಳುತ್ತಾರೆ: "ಈ ನಾಡಿನಲ್ಲಿ ಜನರು ಸುಖಿಗಳಾಗಿದ್ದಾರೆಯೆ ಎಂದು ನೀವು ಕೇಳುತ್ತೀರಿ. ನಿಸ್ಸಂಶಯವಾಗಿಯೂ ಹೌದು. ತಮ್ಮ ಜಾತಿಗೆ ಮುಂದೆ ಹೋಗಲು ಸಾಧ್ಯವಿಲ್ಲದಿದ್ದರೆ ಆಚೆ ಜಾತಿಯವರಿಗೂ ಸಾಧ್ಯವಿಲ್ಲವಲ್ಲ. ಇದಕ್ಕಿಂತ ಹೆಚ್ಚಿನ ಸುಖ ಅವರಿಗೆ ಬೇಕಾಗಿಲ್ಲ."

ಬಫೆಲೋಲ್ಯಾಂಡಿನಂತಹ ಬರಹಗಳನ್ನು ಗಮನಿಸಿದಾಗ ನನಗನಿಸಿದ ಒಂದು ಮಾತನ್ನು ಇಲ್ಲಿ ಒತ್ತಿ ಹೇಳಬಯಸುತ್ತೇನೆ. ತಮ್ಮ ಎಲ್ಲ ವಿಶಿಷ್ಟತೆ ಮತ್ತು ಪ್ರತಿಭೆಗಳೊಂದಿಗೆ ಕೊಂಚ ಜಿಗುಟುತನ ಮತ್ತು ಪರಿಶ್ರಮಗಳನ್ನು ಈ ದಿಸೆಯತ್ತಲೇ ಪಟ್ಟಾಗಿ ಕೇಂದ್ರೀಕರಿಸಿದ್ದರೆ, ಬಹುಶಃ ಕನ್ನಡ ಸಾಹಿತ್ಯದಲ್ಲಿ ಈಗಲೂ ಅಭಾವವಿರುವ, Jonathan Swiftನಂತಹ ಅಪೂರ್ವ ಬರಹಗಳನ್ನು ಆಚಾರ್ಯರು ಕನ್ನಡಕ್ಕೆ ನೀಡಬಹುದಾಗಿತ್ತೇನೋ. *

ಹೀಗೆ ದೇವರು ದೇವತೆಗಳಿಂದ ಮೊದಲ್ಗೊಂಡು, ಗೌಳಿಗಳು, ರಮಣಿಯರು, ಪೂಜಾರಿಗಳು, ಜ್ಯೋತಿಷಿಗಳು, ಮಾಸ್ತರರು, ಯುದ್ಧಾಸಕ್ತರು ಆದಿಯಾಗಿ ಕವಿಗಳು ಮತ್ತು ಕತ್ತೆಗಳವರೆಗೂ, ಮತ್ತು ಆ ಮುಖಾಂತರ ನಿರಂತರ ಸಾಗಿದೆ, ಅಪಾರ 'ಪ್ರಹಾರ'.

ಆದರೆ ಗೇಲಿ, ವಿಡಂಬನೆ: ಕಟಕಿ, ಕೊಂಕು; ಹಾಸ್ಯ, ಚಾಟೂಕ್ತಿಗಳ ಸುತ್ತಿಗೆಯನ್ನೆತ್ತಿಕೊಂಡು ಸಾಗುವ ಇಲ್ಲಿಯ ಪ್ರಹಾರ, 'ಉಳಿಯ ಕಂಠದಿ ಶಿಲಾಪತ್ರವನು ನಾಂಟಿಸುತ, ಕಲ್ಲು ಕೆತ್ತಿ ವಿಗ್ರಹ ಒಡ ಮೂಡಿಸುವ ಸಾರ್ಥಕ ಸೃಜನ ಕಾರ್ಯ ಮಾತ್ರ.

* ಆಚಾರ್ಯರ ಗಮನಕ್ಕೆ:
ಆಹ್ವಾನ ಇನ್ನೂ ತೆರೆದೇ ಇದೆ.

## ೨೨

## ಗೌರಮ್ಮ (ಮಿಸೆಸ್ ಬಿ. ಟಿ. ಜಿ. ಕೃಷ್ಣ)/ಚಿಗುರು

ಪತ್ರಿಕೆ; 'ಹರಿಜನ'; ಸಂಚಿಕೆ, ಮಾರ್ಚ್ ೨, ೧೯೩೪; ಒಂದು ವರದಿಯ ಸಾರಾಂಶ: ನಾಡಸಂಚಾರಕ್ಕೆ ನಡೆದ ಗಾಂಧೀಜಿ ಅಂದು ತಂಗಿದ್ದ ಊರು ಕೊಡಗಿನ ಗುಂಡುಕುಟ್ಟಿ. ಊರಲ್ಲೊಂದು ಮನೆ. ಮನೆಯಲ್ಲೊಂದು ಹುಡುಗಿ. ವಯಸ್ಸು ೨೧. ಬೆಳಗಿನಿಂದ ಆಕೆಯ ಉಪವಾಸ ಸತ್ಯಾಗ್ರಹ. ಕಾರಣ: ಗಾಂಧೀಜಿ ಸ್ವತಃ ತನ್ನ ಮನೆಗೇ ಬಂದು ತನ್ನ ಆಭರಣಗಳನ್ನು ಒಯ್ಯಬೇಕು. ಗಾಂಧೀಜಿಗೆ ಗೊತ್ತಾಯಿತು. (ತಮ್ಮ ಉಪವಾಸಗಳಿಂದ ನಾಡನ್ನೂ ಮಣಿಸಿದ್ದ ಗಾಂಧೀಜಿ ಈ ಹುಡುಗಿಯ ಉಪವಾಸಕ್ಕೆ ಮಣಿದರು.) ಆಕೆಯ ಮನೆಗೆ ತೆರಳಿದರು. ಆಭರಣ ಸ್ವೀಕರಿಸಿದರು. ಆಕೆಗೂ ಆಕೆಯ ಗಂಡನಿಗೂ ಸರಳವಾದ ಮಿತ ಜೀವನ

ಉಪದೇಶಿಸಿ ನಡೆದರು. ಆ ಹಟದ ಹುಡುಗಿಯೇ ಗೌರಿ ಊರ್ಫ ಗೌರಮ್ಮ ಊರ್ಫ ಮಿಸೆಸ್ ಬಿ. ಟಿ. ಜಿ. ಕೃಷ್ಣ, ಎಂದರೆ ನಮ್ಮ ಆಧುನಿಕ ಕನ್ನಡ ಸಾಹಿತ್ಯದ ಆದ್ಯ ಕಥೆಗಾರ್ತಿ.

೧೯೩೧ರಲ್ಲಿ, ಎಂದರೆ ತನ್ನ ವಯಸ್ಸಿನ ಹದಿನೆಂಟರಲ್ಲಿ ತನ್ನ ಮೊದಲ ಕಥೆ 'ಪುನರ್ವಿವಾಹ'ವನ್ನು ಬರೆದಳು ಗೌರಮ್ಮ. ಮುಂದೆ ಹಿಂತಿರುಗಿ ನೋಡದಂತೆ ಒಂದು ದಶಕಕ್ಕೂ ಕಡಿಮೆ ಅವಧಿಯುದ್ದಕ್ಕೂ ಬರೆಯುತ್ತಲೇ ಹೋದಳು. ಹೊಸ ಪ್ರಯೋಗಗಳು, ಹೊಸ ದೃಷ್ಟಿಕೋನಗಳು, ಹೊಸ ಕಥೆಗಳು ಮೂಡಿಕೊಳ್ಳುತ್ತಲೇ ಬಂದವು. ಮುಂದೆ ಒಂದು ದಿನ ಒಂದು ಕಥೆಯನ್ನು ಬರೆದಳು. ಕಥೆ ಪೂರ್ತಿಯಾಗಿತ್ತೋ ಇಲ್ಲವೋ ಗೊತ್ತಿಲ್ಲ. ಕಥೆಯ ಕೊನೆಯಲ್ಲಿ ಇದು ದ್ವಿತೀಯಾಂಕ ಎಂದಿದ್ದು, ಅದಕ್ಕಿನ್ನೂ ಮುಂದೆ ಅಂಕಗಳಿದ್ದವೋ, ಇದ್ದರೆ ಅವನ್ನಿನ್ನೂ ಗೌರಮ್ಮ ಬರೆಯಬೇಕಾಗಿತ್ತೋ ಗೊತ್ತಿಲ್ಲ. ಏಕೆಂದರೆ, ಅದಕ್ಕೂ ಮುಂಚೆ ಗೌರಮ್ಮನೇ ತನ್ನ ಬದುಕಿನ ಕೊನೆಯ ಅಂಕವನ್ನು ಮುಗಿಸಿಬಿಟ್ಟಳು. ಕೊನೆಯ ಕಥೆಯನ್ನು ಬರೆದ ಮರುದಿನವೇ ಆಕೆ ಹೊಳೆಗೆ ಈಜುವದಕ್ಕೆ ಹೋದಳು. ತಿರುಗಿ ಬರಲಿಲ್ಲ. ಇಲ್ಲ, ಇನ್ನೂ ಮೂವತ್ತನ್ನು ಮುಟ್ಟಿರಲಿಲ್ಲ ಆಕೆ. ಇದು ಸಾರಾಂಶದಲ್ಲಿ ಗೌರಮ್ಮನ ಬದುಕು-ಬರಹದ ನೋಟ.

ನಮ್ಮ ಪ್ರಾತಃಸ್ಮರಣೀಯ ಬರಹಗಾರರನೇಕರು ಇನ್ನೂ ಪ್ರವರ್ಧಮಾನಕ್ಕೆ ಬರುತ್ತಿರುವ ಸಂದರ್ಭದಲ್ಲಿಯೇ ತಮ್ಮ ಬರವಣಿಗೆಯ ಬದುಕನ್ನೂ ಆರಂಭಿಸಿ, ಎಳವೆಯಲ್ಲಿ ಅದನ್ನು ಮುಗಿಸಿಯೂ ಬಿಟ್ಟ ಗೌರಮ್ಮ ಬರೆದ ಒಟ್ಟು ಕಥೆಗಳು ೨೧. ಪ್ರಕಟವಾದ ಸಂಕಲನಗಳು ಎರಡು. ಒಂದು; 'ಕಂಬನಿ', ಇನ್ನೊಂದು 'ಚಿಗುರು'.

೧೯೪೨ರ ಜೂನ್‌ನಲ್ಲಿ ಮೊದಲ ಬಾರಿ ಪ್ರಕಟವಾದ ಸಂಕಲನ 'ಚಿಗುರು'ವಿನಲ್ಲಿ ಒಟ್ಟು ಒಂಬತ್ತು ಕಥೆಗಳಿವೆ. ವೈಶಿಷ್ಟ್ಯವೆಂದರೆ ಅವರ ಕಟ್ಟಕಡೆಯ ಕಥೆ 'ಮುನ್ನಾದಿನ' ಪ್ರಕಟವಾಗಿರುವಂತೆ ಈ ಸಂಕಲನದಲ್ಲಿ, ಅವರ ಮೊಟ್ಟ ಮೊದಲ ಕಥೆ 'ಪುನರ್ವಿವಾಹ' ಕೂಡ ಪ್ರಕಟವಾಗಿದೆ. ಹೀಗಾಗಿ ಅವರ ಬರಹದ ಎಲ್ಲ ಮೆಟ್ಟಿಲುಗಳನ್ನೂ ಸಾಧನೆಗಳನ್ನೂ ಗುರುತಿಸಲು ಈ ಸಂಕಲನ ಪ್ರಾತಿನಿಧಿಕವಾಗಿದೆ.

ದ. ರಾ. ಬೇಂದ್ರೆಯವರು ಹೇಳುವಂತೆ (೧೮-೬-೪೨) "ಚಿಗುರಿನೊಳಗಿನ ಎಲ್ಲ ಕಥೆಯ ವಸ್ತು ಚಿರಂತನವಾದ ವಸ್ತು. ಅದು ಗಂಡು ಹೆಣ್ಣಿನೊಳಗಿನ ಪರಸ್ಪರ ಆಕರ್ಷಣೆ, ಒಲವು, ದಾಂಪತ್ಯ... ಅದರ ಆಗು ಹೋಗು, ಅದರ ಸರಸ ವಿರಸ, ಅದರ ವಿಧಿವಿಲಾಸ, ದೈವ ದುರ್ವಿಪಾಕ. ತಂಗಿ ಗೌರಮ್ಮನವರ ಹೆಣ್ಣು ಹೃದಯ ಈ ವಸ್ತುವನ್ನೇ ಮುಗ್ಧ ಅಪೇಕ್ಷೆಯಿಂದ, ಪ್ರೌಢ ವಿವೇಕದಿಂದ, ಸುಧಾರಕ ದೃಷ್ಟಿಯಿಂದ, ಅವರಿಗೆ ಸಹಜವಾದ ಬೆಳೆಯುತ್ತಿರುವ ಸಮತೂಕದಿಂದ, ನೀತಿಯ ಗರ್ಭದಲ್ಲಿಯೂ ರಸಪಾಕಗೊಳಿಸುವ ಜಾಣ್ಮೆಯಿಂದ ವಿವಿಧ ಕಥೆಗಳಲ್ಲಿ ವಿಸ್ತರಿಸಿದೆ." ಹೀಗೆ ಆವೃತಗೊಂಡ ವಿಷಯಗಳ ಸೀಮಿತತೆಗಳ ಮಧ್ಯದಲ್ಲೇ ಗೌರಮ್ಮನವರು ತಾಳುವ ದೃಷ್ಟಿಯ ಹೊಸತನ ಮಾತ್ರ ನಿಜಕ್ಕೂ ಗಮನ ಸೆಳೆಯುವಂತಹದು. ಉದಾಹರಣೆಯಾಗಿ, ಇಲ್ಲಿಯ ಒಂದು ಕಥೆ, 'ಒಂದು ಚಿತ್ರ'ವನ್ನೂ ನೋಡಬಹುದು.

ಈಗಾಗಲೇ ಮದುವೆಯಾದ ಒಬ್ಬ ಹುಡುಗಿ ಹರೆಯದ ಹುಡುಗಿ, ಈವರೆಗೆ ಗಂಡನ ಮನೆಗೆ ಒಂದು ಸಲವೂ ಹೋಗಿರದ, ಆದರೆ ಯಾವ ದಿನವೂ ಆ ಗಂಡನ ಬರವನ್ನೂ ಎದುರು ನೋಡಿಕೊಂಡಿರಬೇಕಾಗಿದ್ದ ಒಬ್ಬ ಹುಡುಗಿ, ಈ ನಡುವೆ, ಗಂಡನಲ್ಲದ ಇನ್ನೊಬ್ಬ ಯುವಕನೊಂದಿಗೆ ತನ್ನ ಹೃದಯ ಹಂಚಿಕೊಂಡ ಸಂದರ್ಭವನ್ನು, ಈ ಲೇಖಕಿ ನೋಡಿದ ರೀತಿ, ಚಿತ್ರಿಸಿದ ರೀತಿ, ಅದರ ಹಿಂದಿರುವ ಒಂದು ಅದ್ಭುತವೆನಿಸುವ ಅತ್ಯಂತ ಆರೋಗ್ಯಕರ ದೃಷ್ಟಿಕೋನದ ನಿಶಿತತೆ, ನನಗಂತೂ ಆಘಾತವೆನಿಸುವಷ್ಟು ಆಶ್ಚರ್ಯ ಮತ್ತು ಸಂತೋಷ ತಂದಿವೆ. ಇಂದಿನ 'ಬಂಡಾಯ'ದ ದಿನಗಳಲ್ಲೂ ಕಾಣಸಿಗಲು ದುರ್ಲಭವೆನಿಸುವ ಇಂತಹ ದೃಷ್ಟಿಕೋನವನ್ನು, ಮೂವತ್ತರ ದಶಕದಷ್ಟು ಹಿಂದೆಯೇ ಸಂಪಾದಿಸಿಕೊಂಡ ಈ ಕನ್ನಡದ

ಪ್ರಥಮ ಕಥೆಗಾರ್ತಿಯ ನಿಲುವಿಗೆ, ಇದೊಂದು ದಿಟ್ಟವಾದ ಚಿತ್ರಣ ಎಂದು ಪ್ರತ್ಯೇಕವಾಗಿ ಹೇಳಲಾಗದಷ್ಟು ಸರಳ ಸ್ವಾಭಾವಿಕವಾಗಿ ಮೂಡಿ ಬಂದ ನಿಲುವಿಗೆ ಅಭಿನಂದನೆ ಹೊರತು ಇನ್ನೇನು ಹೇಳಬಹುದು?

(ಒಂದು ಮಾತು: ಕತೆಯಲ್ಲಿ, ಮುಂದೆ, ಆ ಹೊಸ ಯುವಕ ಬೇರಾರೂ ಆಗಿರದೇ ಆಕೆಗೆ ಸರಿಯಾಗಿ ಪಂಚಯುವೇ ಆಗಿರದಿದ್ದ ಆಕೆಯ [illegible] ಚಿತ್ರಿಸುವ 'ಜಮಾ[illegible] ಲೇಖಕಿ ಹಾಗೆ ಚಿತ್ರಿಸಿರಬಹುದೆಂಬ ಒಂದು ವಾದವನ್ನು ನಾನೊಪ್ಪುವುದಾದರೂ, ನಾನು ವಿವರಿಸಿದ ಲೇಖಕಿಯ ದೃಷ್ಟಿಕೋನಕ್ಕೆ ಪೂರಕವಾಗಿ, ಅನೇಕ ಅಂಶಗಳು, ಇನ್ನಿತರ ಕೆಲವಾದರೂ ಕಥೆಗಳಲ್ಲಿ [ಉದಾ: 'ಕೆಲವು ಕಾಗದಗಳು'] ಸ್ಪಷ್ಟವಾಗಿ ಬರುವುದರಿಂದ ನನ್ನ ವಿಶ್ಲೇಷಣೆ ಸರಿಯಾದದ್ದು.)

ಗೌರಮ್ಮ, ತಾವು ಸಾಯುವ ದಿನದ 'ಮುನ್ನಾ ದಿನ' ಬರೆದ ಕಥೆ, ಅನೇಕ ದೃಷ್ಟಿಗಳಿಂದ ಒಂದು ಗಮನಾರ್ಹವಾದ ಕಥೆಯೇ ಆಗಿದೆ. ಸಹಜ ಸ್ವಾಭಾವಿಕವಾಗಿ ಬದುಕಬೇಕಾದ ಮನುಷ್ಯನ, ಅಷ್ಟೇ ಸಹಜ ಸ್ವಾಭಾವಿಕವಾದ ನಿಸರ್ಗಸಹಜ ಸಾಮಾನ್ಯ ಬೇಡಿಕೆಗಳೆದುರು ಜಾತಿ ಮತಗಳು ಮಾತ್ರ ಎಷ್ಟು ಸಣ್ಣದು ಮತ್ತು ಎಷ್ಟು ಸಹಜವಾಗಿ ಕಳಚಲರ್ಹವಾದುದು ಎಂಬುದನ್ನು ಗೌರಮ್ಮ ತಮ್ಮ ಈ 'ಮುನ್ನಾ ದಿನ' ಕಥೆಯಲ್ಲಿ ಹೇಳಿದ್ದಾರೆ.

ಹೊಟ್ಟೆಯ ಹಸಿವಿಗಾಗಿ ಹಿಂದೂವಾಗಿದ್ದ ಕಾಡ, ಕ್ರಿಶ್ಚಿಯನ್ ಆಗಿ ಜೋಸೆಫ್ ಕಾಡನಾದರೆ, ಹೃದಯದ ಹಸಿವಿಗಾಗಿ ಅದೇ ಕಾಡ ಮುಸಲ್ಮಾನನಾಗಿ ಇಸ್ಮಾಯಿಲ್ ಕಾಡ ಸಾಬನಾದ ಕಥೆ ಇದು.

ವಾಸ್ತವವಾಗಿ, ಇಲ್ಲಿಯ ಕಾಡ ಎನ್ನುವವ, ತನ್ನ ಅಷ್ಟೇ ವಾಸ್ತವದ ಕಥೆಯೊಂದಿಗೆ, ಗೌರಮ್ಮನವರ ಮಾವನವರಲ್ಲಿ ಮೇಸ್ತ್ರಿಯಾಗಿ ಕೆಲಸಕ್ಕೆ ಇದ್ದವನು ಎಂದು ತಿಳಿದಾಗ ಈ ಇಡಿಯ ಕಥೆಗೆ ಒಂದು ವಾಸ್ತವವಾದ ಗಟ್ಟಿ ತಳಪಾಯವನ್ನೇ ಒದಗಿಸುತ್ತದೆ. ಹಾಗಿದ್ದರೆ, ಇದೊಂದು, ವಾಸ್ತವದ ಘಟನೆಯನ್ನಾಧರಿಸಿದ ಕಥೆ ಎಂದು ಈ ಕಥೆಯ ಮಟ್ಟಿಗೆ ಅಂದು ಕೊಂಡರೂ, ಜಾತಿ ಮತಗಳ ಬಗೆಗಿನ ಗೌರಮ್ಮನವರ ಅಭಿಪ್ರಾಯ ಮಾತ್ರ ಹೀಗೆಯೇ ಇತ್ತು ಎಂಬುದಕ್ಕೆ. ಅವರ ಹಿಂದಿನ ಕಥೆಗಳಲ್ಲಿ (ಉದಾ: ಅಪರಾಧಿ ಯಾರು?) ಇನ್ನಷ್ಟು ಮೊನಚೇ ಆದ ಆಧಾರಗಳು ದೊರೆಯುತ್ತವೆ. ಮತ್ತು ಅವರ ದೃಷ್ಟಿಯ ಆಧುನಿಕತೆಯ ಬಗ್ಗೆ ಅಭಿಮಾನವೆನಿಸುತ್ತದೆ.

ಹಾಗೆಯೇ ಅವರ ದೃಷ್ಟಿಯ ಹೊಸತನ, ಬದುಕಿನಲ್ಲಿಯ ತುಂಬ ಕ್ಷಣಗಳ ಚಿತ್ರಣ-ನೋಟ, ಬಾಚಿಕೊಳ್ಳಲು ಯತ್ನಿಸುವ ಜೀವನ ಚಟುವಟಿಕೆಗಳು ಇವುಗಳಿಗೆ ಚಾಲನೆ ಇತ್ತಿರುವ 'ಮರದ ಬೊಂಬೆ' ಕಥೆ ಕೂಡ ಹಲವಾರು ಅಂಶಗಳಿಂದ ನಮ್ಮ ಗಮನ ಸೆಳೆಯುತ್ತದೆ.

ಪ್ರತಿಯೊಬ್ಬ ಸಂವೇದನಾಶೀಲನಿಗೂ ಬಾಲ್ಯ ಒಂದು ನೆನಪಿನ ನಿಧಿ. ಮೆಲಕು ಮಾತ್ರ ಹಾಕಬಲ್ಲ (ಇಲ್ಲದ) ನಿರಂತರ ಹಸಿರು. ಅದು ಇತ್ತ ಸಾವಿರ ಬಗೆಯ ಸಡಗರ ಸಂಭ್ರಮ, ಕೋಪ ತಾಪ, ನೋವು ನಲಿವು, ಬೇನೆ ಬೇಸರಿಕೆ, ಇವನ್ನೆಲ್ಲ ಒಂದೇ ಕೈ ತುತ್ತಿನಲ್ಲಿ ಹಾಕುವುದು ಎಂಥ ಕುಶಲನಿಗೂ ಕಷ್ಟಸಾಧ್ಯ. ಆದರೆ ಈ ಲೀಲೆಯನ್ನು ತುಂಬ ಲವಲವಿಕೆಯಿಂದ, ಜೀವನೋತ್ಸಾಹದಿಂದ ಚೇತೋಹಾರಿಯಾಗಿ ಗೈದಿದ್ದಾರೆ ಗೌರಮ್ಮ; 'ಪಾಪನ ಮದುವೆ' ಎಂಬ ಕಥೆಯಲ್ಲಿ. ಈ ವಿವರಗಳನ್ನು ಓದುತ್ತಿದ್ದಂತೆಯೇ, ನನಗೆ ಫಕ್ಕನೇ ನೆನಪಾದದ್ದು ಕುವೆಂಪು ಅವರ 'ಮಲೆನಾಡ ಚಿತ್ರಗಳ' ಇಂಥದೇ ವಿವರಣೆಗಳಲ್ಲಿ ಕಂಡುಬರುವ ಜೀವಂತಿಕೆ. ಈ ನೆನಪು ತರುವ ಜೀವಂತಿಕೆಯೇ ಗೌರಮ್ಮನ ಕುಶಲತೆಗೊಂದು ಸಾಕ್ಷಿ.

ಗೌರಮ್ಮ ೧೯೩೧ರಲ್ಲಿ ಬರೆದ, ಅವರ ಮೊದಲ ಕಥೆಯೂ ಇಲ್ಲಿದೆ ಎಂದು ಹೇಳಿದೆ. ೧೯೩೧ರಷ್ಟು ಹಿಂದೆ ಬರೆದ ಕಥೆ, ಅದೂ ಲೇಖಕಿಯ (ಕನ್ನಡದ ಮೊದಲ ನೀಡಿಕೆಯ) ಮೊದಲ ಕಥೆ, (೧೮ ನೆಯ ವಯಸ್ಸಿನಲ್ಲಿ ಬರೆದದ್ದು) ಎಂದಾಗ, ಅನೇಕ ಪರಿಕರಗಳಲ್ಲಿ ಕಥೆ ಸೊರಗಿಯೇ ಇದ್ದಿರಬಹುದು ಎಂದು ನಾವು

ಮೊದಲೇ ಊಹಿಸಬಹುದು. ಆದರೆ, ಇತಿಹಾಸದ ದೃಷ್ಟಿಯಿಂದ ಗಮನಿಸುವದಾದರೆ, ನಮ್ಮ ಊಹೆಯನ್ನು ಮಿಕ್ಕಬಹುದಾದ ಎಷ್ಟೋ ಒಳ್ಳೆಯ ಅಂಶಗಳು ಈ ಕಥೆಯಲ್ಲಿವೆ ಎಂಬುದು. ವಸ್ತುವಿನ ಸಮಕಾಲೀನತೆಯ ದೃಷ್ಟಿಯಿಂದ, ಕಥೆಯನ್ನು ಬೆಳೆಸಿಕೊಂಡು ಹೋಗುವ ದೃಷ್ಟಿಯಿಂದ, ಮುಖ್ಯವಾಗಿ, ಭಾವಾವೇಗದ ಭಾಷೆಯನ್ನು ಬದಿಗಿಟ್ಟು ವಾಸ್ತವ ಟಿಪ್ಪಣಿಗಳ ಧ್ವನಿಯಲ್ಲಿ, ಸಣ್ಣ ಸಣ್ಣ ಸೂಕ್ಷ್ಮಗಳನ್ನು ಅಷ್ಟೇ ಸೂಚ್ಯವಾಗಿ ಹೇಳಿಕೊಳ್ಳುತ್ತ ಹೋಗುವ ದೃಷ್ಟಿಯಿಂದ. ಕಥೆ ನಮ್ಮ ಮೊದಲ ಊಹೆಯನ್ನೂ ಮೀರಿ ಬೆಳೆಯುತ್ತದೆಂಬುದು ನಿಜ.

ಕಥೆ ಹೀಗಿದ್ದರೂ ಕೆಲವಾದರೂ ಹೇಳಲೇಬೇಕಾದ ಐತಿಹಾಸಿಕ ಅಂಶಗಳು ಅದರ ಬೆನ್ನಿಗಿದ್ದರೂ, (ಅದರ ಪ್ರಕಟನೆಗೂ ಮುನ್ನ) ಈ ಕಥೆಯ ಬಗ್ಗೆ, ಸ್ವತಃ ಗೌರಮ್ಮನೇ ಆಡಿದ ಮಾತು ನನಗೊಂದು ಐತಿಹಾಸಿಕ ವಿಸ್ಮಯವಾಗಿ ಕಾಣಿಸುತ್ತದೆ. ತಮ್ಮ ವಯದ ೧೮ ರಲ್ಲಿ ಬರೆದ ತಮ್ಮ ಈ ಕಥೆಯನ್ನು ಕುರಿತು ತಮ್ಮ ೨೫ ರಲ್ಲಿ, ದಿ. ೧೪-೩-೧೯೩೮ ರಂದು ಬರೆದ ಟಿಪ್ಪಣಿಯಲ್ಲಿ ಗೌರಮ್ಮ ಹೇಳುತ್ತಾರೆ. "ಆಗ ನನಗಿದು ಬಹಳ ಸೊಗಸಾಗಿದೆ ಎಂಬ ಭಾವನೆ ಇತ್ತು. ಈಗ ಓದಿದರೆ ಆಗಿನ ಭಾವನೆಗಳನ್ನೆಲ್ಲ ನೆನಸಿಕೊಂಡು ನಗು ಬರುತ್ತೆ." ನಮ್ಮ ಎಷ್ಟೋ ಬರಹಗಾರರಲ್ಲಿ ಇಂದಿಗೂ ಕೂಡ ಕಾಣಸಿಗದ ಒಂದು ಅಪರೂಪ ನಿಸ್ಪೃಹ ಆತ್ಮವಿಮರ್ಶೆ ಕೂಡ ಅಂದಿನ ಆ ಏಕಮಾತ್ರ ಕಥೆಗಾರ್ತಿ ಗೌರಮ್ಮನಲ್ಲಿ ಹೇಗೆ ಹರಳುಗಟ್ಟಿಕೊಳ್ಳುತ್ತಿತ್ತು ಎಂಬುದಕ್ಕೆ ಒಂದು ಉದಾಹರಣೆ ಇದು.

'ಕೆಲವು ಕಾಗದಗಳು' ಎಂಬ ಒಂದು ಕಥೆಯನ್ನು ಕುರಿತು ಈ ಹಿಂದೆ ಪ್ರಸ್ತಾಪಿಸಿದೆನಷ್ಟೇ. ಅದರ ತಂತ್ರದ ಬಗ್ಗೆ ಒಂದು ಮಾತನ್ನು ಹೇಳಬೇಕು. ಕೆಲವು ಪತ್ರ ಮಾತ್ರವುಗಳನ್ನೇ ಸೃಷ್ಟಿಸಿ, ಆ ಪತ್ರಗಳ ಮುಖಾಂತರವೇ ಕಥೆ ಹೇಳುವ, ಅಂದಿಗೆ ಹೊಸದೆನಿಸಿದ್ದ, ತಂತ್ರ ಜಾಣ್ಮೆಯನ್ನು ಕಾಣಬಹುದು. ಮುಳಿಯ ತಿಮ್ಮಪ್ಪಯ್ಯನಂಥವರು ತುಂಬ ಪ್ರಶಂಸಿಸಿದ ಈ ಬಗೆಯ ತಂತ್ರ ಗೌರಮ್ಮನವರಿಗೆ ಸುಲಭ ಸಾಧ್ಯವಾಗಿತ್ತೆಂದು ಕಾಣುತ್ತದೆ. ಅವರ ಹಿಂದಿನ ಸಂಕಲನದಲ್ಲಿ ಕೂಡ ಇಂತಹ ತಂತ್ರದ ಕಥೆಗಳನ್ನು ಕಾಣಬಹುದು.

ಆದರೆ ಒಂದು ವಿಷಯ ಮಾತ್ರ ನನಗೆ ತುಂಬ ಆಶ್ಚರ್ಯಕರವಾಗಿ ಕಾಣಿಸುತ್ತದೆ. ಅದೆಂದರೆ; ಈ ಎಲ್ಲ ಒಂಬತ್ತು ಕಥೆಗಳು, ಕೇವಲ, ಹೆಣ್ಣು ಗಂಡಿನ ಒಂದು ವಿಶಿಷ್ಟ ಸಂಬಂಧದ ಸುತ್ತಮುತ್ತ, ಅದರಲ್ಲೂ ವಿಶೇಷವಾಗಿ ವಿವಾಹದ ಸುತ್ತಮುತ್ತಲೇ ಹೆಣೆದುಕೊಂಡಿರುವದು, ಕೇವಲ ಆಕಸ್ಮಿಕವೆಂದು ಭಾವಿಸಲಾಗದಷ್ಟು ಈ ವಿಷಯ ಮಾತ್ರವೇ ಇಲ್ಲಿ ಸಾಂದ್ರವಾಗಿರುವುದು ಎಷ್ಟರಮಟ್ಟಿಗೆ ಕುತೂಹಲಕರವಾದದ್ದೋ ಅಷ್ಟೇ ಮಟ್ಟಿಗೆ ಆಳವಾದ ವಿಶ್ಲೇ-ಷಣೆಗೂ ಅರ್ಹವಾದದ್ದು. ಲೇಖಕಿಯ ವೈಯಕ್ತಿಕ ಬದುಕು, ಶಿಕ್ಷಣ, ಪರಿಸರ, ಆಸಕ್ತಿಗಳು ಇತ್ಯಾದಿ ಕುರಿತು ಎಳ್ಳಷ್ಟೂ ಮಾಹಿತಿ ಇಲ್ಲದ ನನಗೆ, ಇದು ಕುತೂಹಲ ಮಾತ್ರವಾಗಿ ಉಳಿಯುವದು ಅನಿವಾರ್ಯವಾಗಿದೆ. ಹಾಗೆಯೇ ಇನ್ನೊಂದು ಪ್ರಶ್ನೆ. ಗೌರಮ್ಮನವರ ಬಹಳಷ್ಟು ಕಥೆಗಳ ಒಂದಿಲ್ಲೊಂದು ಪಾತ್ರಗಳಿಗೆ 'ಸೀತೆ' ಎಂಬ ಹೆಸರೇ ಬರುವುದೂ ಎಷ್ಟು ಆಕಸ್ಮಿಕ?

ಈ ಕಥೆಗಳ ಬಗ್ಗೆ ಬರೆಯುತ್ತ ಬೇಂದ್ರೆ ಕೇಳುತ್ತಾರೆ: "ಈ ಕಥೆಗಳು ಚಿಗುರಾದರೆ ಅವರ (ಗೌರಮ್ಮನವರ) ಹೃದಯದ ಹಣ್ಣುಗಳು ಎಂತಹವಾಗಿರುತ್ತಿದ್ದವು?"

ಇಂತಹ ಪ್ರಶ್ನೆಯ ಅಗತ್ಯವೇ ಇಲ್ಲ ಎಂದು ನನಗನಿಸುತ್ತದೆ. ಏಕೆಂದರೆ, ನೋಡುವ ದೃಷ್ಟಿ ಮಾಗಿದ್ದರೆ ಈ 'ಚಿಗುರಿ'ನ ಹೃದಯದಲ್ಲಿಯೇ ಹಣ್ಣುಗಳನ್ನು ಕಾಣಬಹುದಲ್ಲ! ❁



# ಬಾಲ್ ಪೆನ್ನಿನ ಕಥೆ

ಅರ್ಜೆಂಟಿನಾದಲ್ಲಿ ಇತ್ತೀಚೆಗೆ ಮರಣ ಹೊಂದಿದ ಲ್ಯಾಸ್ಲೋ ಜೋಸೆಫ್ ಬೈರೋ ಎಂಬಾತ ಜಗತ್ತಿನ ಜನರ ಬರವಣಿಗೆಯ ದಿಶೆಯನ್ನೇ ಬದಲಿಸಿದವ! ಜೋಸ್ ಬೈರೋ ಎಂದು ಕರೆಯಲ್ಪಡುತ್ತಿದ್ದ ಆತ ನೂತನ ಬಾಲ್ ಪಾಯಿಂಟ್ ಪೆನ್ನಿನ ಶೋಧಕ. ಜೋಸ್ ಒಬ್ಬ ಪತ್ರಿಕೋದ್ಯಮಿ, ಶಿಲ್ಪಿ, ಚಿತ್ರಕಾರ ಮತ್ತು ಅನ್ವೇಷಕ, ಬೈರೋ ಬಾಲ್ ಪಾಯಿಂಟ್ ಪೆನ್ನುಗಳಿಂದ ಈತ ಹೆಚ್ಚು ಪ್ರಸಿದ್ಧನಾದ.

ಹಂಗೇರಿಯಲ್ಲಿ (೧೯೦೦ ರಲ್ಲಿ) ಜನಿಸಿದ ಬೈರೋ ೧೯೩೭ ರ ಒಂದು ಮುಂಜಾನೆ ಕಾಫಿ ಕುಡಿಯುತ್ತಿದ್ದಾಗ ಈ ಹೊಸ ಬಾಲ್ ಪಾಯಿಂಟ್ ಪೆನ್ನಿನ ಯೋಚನೆ ಅವನ ಮನಸ್ಸಿನಲ್ಲಿ ಹೊಳೆಯಿತು. "ಒಂದು ಸಾಕೆಟ್ಟಿನಲ್ಲಿ ಅತ್ಯಂತ ಸೂಕ್ಷ್ಮವಾದ ಬಾಲ್‌ಬೇರಿಂಗ್ ಒಂದನ್ನು ಅಳವಡಿಸಿ ಆ ಸಾಕೆಟ್ಟಿಗೆ ಒಂದೇ ಸಮನೆ ಮಂದ್ರವಾದ ಮಸಿ ಹರಿಯುವಂತೆ ಮಾಡಿದರೆ ಹೇಗೆ?" ಎಂದಾತ ಯೋಚಿಸಿದ. ಹಾಗೇ ಮಾಡಿ ನೋಡಿದ. ಬರೆದಂತೆಲ್ಲಾ ಮಸಿ ಒಂದೇ ಸಮನಾಗಿ ಮೂಡಿ ಬಂತಲ್ಲದೆ ಮಸಿಯ ಬಳಕೆಯಲ್ಲೂ ಮಿತವ್ಯಯ ಕಂಡಿತು. ೧೯೩೮ ರ ಹೊತ್ತಿಗೆ ಅವನ ಪ್ರಯೋಗ ಪೂರ್ಣಗೊಂಡಿತು. ಇನ್ನು ಇಂಥ ಪೆನ್ನುಗಳ ಉತ್ಪಾದನೆಗೆ ತೊಡಗುವುದೊಂದು ಬಾಕಿ-ಯಿತ್ತು.

ತನ್ನ ಸೋದರನೊಂದಿಗೆ ಬ್ಯುನೋಸ್ ಐರಿಸ್ಸ್‌ಗೆ ಹೋದ ಬೈರೋ. ಅಲ್ಲಿ ಮಾರ್ಟಿನ್ ಎಂಬ ಇಂಗ್ಲೀಷರವನೊಡನೆ ಸೇರಿಕೊಂಡು ಕಂಪನಿಯೊಂದನ್ನು ಸ್ಥಾಪಿಸಿ ಬೈರೋ ಬಾಲ್ ಪಾಯಿಂಟ್ ಪೆನ್ನುಗಳು ಮಾರುಕಟ್ಟೆಗೆ ಬರಲು ಕಾರಣನಾದ.

೧೯೪೪ ರಷ್ಟೊತ್ತಿಗೆ ಮಾರ್ಟಿನ್ ಈ ಬೈರೋ ಬಾಲ್ ಪಾಯಿಂಟ್ ಪೆನ್ನುಗಳ ಉತ್ಪಾದನಾಕ್ರಮವನ್ನು ಬ್ರಿಟಿಶ್ ಮತ್ತು ಅಮೇರಿಕನ್ ಸೇನಾಪಡೆಗಳಿಗೆ ಮಾರಲು ಒಪ್ಪಿದರು. ಹೀಗಾಗಿ ಸೇನಾಪಡೆಗಳಿಗೊಂದು ಉಪಕಾರವೇ ಆದಂತಾಯಿತು. ಅತ್ಯಂತ ಎತ್ತರದ ಪ್ರದೇಶಗಳಲ್ಲಿ ಇತರ ಪೆನ್ನುಗಳಿಂದ ಬರೆಯುವುದು ಸಾಧ್ಯವಾಗುತ್ತಿರಲಿಲ್ಲ. ಆ ಪೆನ್ನುಗಳ ಮಸಿ ಹೊರಬಂದು ತೊಂದರೆಯಾಗುತ್ತಿತ್ತು. ಆದರೆ ಬೈರೋ ಬಾಲ್ ಪಾಯಿಂಟ್ ಪೆನ್ನುಗಳ ಬಳಕೆಯಿಂದ ಸುಲಭವಾಗಿ ಬರೆಯಲು ಸಾಧ್ಯವಾಯಿತಲ್ಲದೆ ಕೈಗಾಗಲಿ, ಕಾಗದಕ್ಕಾಗಲಿ ಹಸಿ ಮಸಿ ಅಂಟಿಕೊಳ್ಳುವುದರಿಂದಲೂ ಅವರು ಪಾರಾದರು. ಜಲಾಂತರ್ಗತ ಪ್ರದೇಶಗಳಲ್ಲಿಯೂ ಈ ಪೆನ್ನಿನಿಂದ ಬರೆಯಬಹುದೆಂದಾಯಿತು.

ಬೈರೋ ಬಾಲ್ ಪಾಯಿಂಟ್ ಪೆನ್ನುಗಳು ಮೊಟ್ಟಮೊದಲ ಬಾರಿಗೆ ಮಾರುಕಟ್ಟೆಯನ್ನು ಪ್ರವೇಶಿಸಿದಾಗ ಶಾಲಾ ಉಪಾಧ್ಯಾಯರುಗಳು ಇವುಗಳ ಬಗ್ಗೆ ಹುಬ್ಬು ಗಂಟಿಕ್ಕಿದರು. ಈ ಪೆನ್ನುಗಳಿಂದ ಸರಿಯಾಗಿ ಬರೆಯುವುದಕ್ಕೆ ಆಗದು ಎಂದೆಲ್ಲಾ ಅವರು ಹೇಳಿಕೊಂಡು ತಿರುಗಾಡಿದರು. ಆದರೆ ಫೌಂಟನ್‌ಪೆನ್ನುಗಳಿಗಿಂತ ಇವು ಹೆಚ್ಚು ಸುರಕ್ಷಿತ ಎಂದು ಗೊತ್ತಾಗಿ ಬೈರೋ ಬಾಲ್ ಪಾಯಿಂಟ್ ಪೆನ್ನುಗಳ ಜನಪ್ರಿಯತೆ ಹೆಚ್ಚಿದಂದಿನಿಂದ ಅವರ ಗೊಣಗುವಿಕೆ ಕಡಿಮೆಯಾಯಿತು.

ಈಗ ಈ ಪೆನ್ನುಗಳ ಸಂಪೂರ್ಣ ಸ್ವಾಮ್ಯ ಬೈರೋಬಿಕ್ ಕಂಪನಿಯದು.

**ಗುಬ್ಬಿ ರಾಮಶೇಷು**

# ತಿರುಮಲಾಂಬಾ

ವೆಂಕಟೇಶ ಸಾಂಗಲಿ

ಸತೀ ಹಿತೈಷಿಣೀ ಗ್ರಂಥಮಾಲೆಯ 'ಮಾತ್ಸ ನಂದಿನಿ', 'ರಮಾನಂದ', 'ನಭಾ' ಮೊದಲಾದ ಕೆಲವು ಪುಸ್ತಕಗಳನ್ನು ವಿದ್ಯಾರ್ಥಿ ದಿನಗಳಲ್ಲಿ ನಾನು ಓದಿದ್ದೆ. ಹಾಲು ಬಣ್ಣದ ಕಾಗದ, ಸುಂದರ ಮುದ್ರಣ, ಮೇಲಾಗಿ ನಮ್ಮ ಅಭಿರುಚಿಗೆ ತಕ್ಕಂಥ ಕಥಾ ಸಂವಿಧಾನಗಳು. ಇವುಗಳ ಲೇಖಕಿ ತಿರುಮಲಾಂಬಾ (೧೮೮೭-೧೯೮೨).

ಹತ್ತು ವರ್ಷಗಳ ಬಳಿಕ ೧೯೭೫ರಲ್ಲಿ 'ಕನ್ನಡ ಗ್ರಂಥಕರ್ತರ ಚರಿತ್ರ ಕೋಶ' ಯೋಜನೆಗೆ, ಸಾಹಿತಿಗಳ ಜೀವನ-ಕೃತಿಗಳನ್ನು ಕುರಿತು ವಿಷಯ ಸಂಗ್ರಹದ ಸಂದರ್ಭದಲ್ಲಿ ಅವರ ನಂಜನಗೂಡು ವಿಳಾಸಕ್ಕೆ ಒಂದು ಕಾಗದ ಬರೆದು ನಾನು ಕೆಲವು ಮಾಹಿತಿ ಕೇಳಿದೆ. ಅವರು ಊರಲ್ಲಿ ಇರಲಿಲ್ಲ. 'ತಿರುಮಲಾಂಬಾ ಈಗ ಮುಂಬಯಿಯಲ್ಲಿ ಇದ್ದಾರೆ. ನೀವು ಅವರನ್ನು ಖುದ್ದಾಗಿ ಕಂಡು ಮಾತಾಡಬಹುದು' ಎಂದು ಅವರ ಕಾರ್ಯಾಲಯದಿಂದ ಉತ್ತರ ಬಂತು. ಅವರ ಮುಂಬಯಿ ವಿಳಾಸವೂ ಆ ಪತ್ರದಲ್ಲಿತ್ತು.

ಮಾತುಂಗಾದ ಕಿಂಗ್ಸ್ ಸರ್ಕಲ್ಲಿನ ಒಂದು ಕಟ್ಟಡದ ಮಹಡಿಯ ಮೇಲೆ ತಮ್ಮ ಬಂಧು ಒಬ್ಬರ ಮನೆಯಲ್ಲಿ ಅವರು ವಾಸವಾಗಿದ್ದರು. ಭಾನುವಾರ ಬೆಳಗಿನ ಹೊತ್ತಿನಲ್ಲಿ ನಾನು ಹೋದೆ. ಅವರೇ ಬಂದು ಬಾಗಿಲು ತೆರೆದರು. ತೆಳ್ಳನೆಯ ಎತ್ತರ ನಿಲುವು, ಗೌರವರ್ಣ, ಇಳಿವಯಸ್ಸಿನ ಭಾರದಲ್ಲಿಯೂ ಕಣ್ಣಿನಲ್ಲಿ ಲವಲವಿಕೆ, ಶ್ವೇತ ವಸನದಲ್ಲಿದ್ದ ಆಕೆ ಒಬ್ಬ ತಪಸ್ವಿನಿಯಂತೆ ಕಂಡರು.

ನಾನು ಭೆಟ್ಟಿಗೆ ಬರುವ ಸಮಾಚಾರವನ್ನು ಪತ್ರಮುಖೇನ ನಂಜನಗೂಡಿನಿಂದ ಅವರು ತಿಳಿದುಕೊಂಡಿದ್ದರು. ಒಂದು ಕಾಗದದಲ್ಲಿ ನನ್ನ



ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದಿಡುವ ಅವರ ಪ್ರಯತ್ನ ಅರ್ಧಕ್ಕೆ ಉಳಿದಿತ್ತು. ಅನಾರೋಗ್ಯದ ಕಾರಣದಿಂದ ಕೆಲವು ದಿನಗಳ ವಿಶ್ರಾಂತಿಗಾಗಿ ಅವರು ಮುಂಬಯಿಗೆ ಬಂದಿದ್ದರು. ಅವರ ಲೇಖನ-ಪ್ರಕಾಶನದ ಚಟುವಟಿಕೆಗಳು ಆಗ ಕೊನೆಯ ಹಂತದಲ್ಲಿದ್ದವು. ಸುಮಾರು ಐವತ್ತು ವರ್ಷಗಳ ಜೀವನ ಪ್ರವಾಹದ ವಿವಿಧ ಅನುಭವಗಳನ್ನು ತಮ್ಮ ನೆನಪಿನ ಬಲದಿಂದ ವಿವರಿಸಿದರು. ಆಗ ನಾನು ಗುರುತು ಹಾಕಿಟ್ಟ ಟಿಪ್ಪಣಿ, ಈ ಲೇಖನಕ್ಕೆ ಆಧಾರವಾಗಿದೆ. ಅವರ ಬರಹಗಳು ಮತ್ತು ಸಮಕಾಲೀನ ಕೆಲವು ದಾಖಲೆಗಳಿಂದ ಸಾಧ್ಯವಾದ ಪೂರಕ ವಿಷಯಗಳನ್ನು ಸಂಗ್ರಹಿಸಿದ್ದೇನೆ.

ಆಕೆಯ ತಂದೆ ವೆಂಕಟಕೃಷ್ಣಯ್ಯಂಗಾರ್ಯರು ಅಲ್ಲಿಯ ಪ್ರಮುಖ ವಕೀಲರು, ವಿದ್ವಾಂಸರು ಹಾಗೂ ಸಾಮಾಜಿಕ ಕಾಳಜಿ ಉಳ್ಳವರು. ಸಂಸಾರದಲ್ಲಿಯ ಕೆಲವು ತೊಂದರೆಗಳಿಂದಾಗಿ ಆಕೆಗೆ ಶಾಲಾ ಅಭ್ಯಾಸವು ಸಾಧ್ಯವಾಗದೆ ಮನೆಯಲ್ಲೇ ಓದಬೇಕಾಯಿತು. ಕನ್ಯಾವಸ್ಥೆಯನ್ನು ದಾಟುವ ಭೀತಿ ಭಯದಿಂದ ಎಂಟನೆಯ ವರ್ಷದಲ್ಲಿ ವಕೀಲರು ಮಗಳ ಮದುವೆ ಮಾಡಿದರು. ಹದಿಮೂರನೆಯ ವಯಸ್ಸಿನಲ್ಲಿ ಆಕೆ ಪತಿವಿಯೋಗಿನಿಯ ಪಟ್ಟ ಏರಿದ್ದಾಯಿತು.

ಕೆಲವು ಕಾಲ ಕರುಣೆ, ಅನುಕಂಪದಲ್ಲಿ ಆಕೆ ಬೆಳೆದಳು. ಸೀತಾ ಕಲ್ಯಾಣ, ರುಕ್ಮಿಣೀ ಸ್ವಯಂವರದ ಗೊಂಬೆಯಾಟ ಆಡುವ ದಿನಗಳಲ್ಲಿ ವಿಧವಾ ಜೀವನದ ವ್ರತಾನುಷ್ಠಾನ ಕಲಿತುಕೊಳ್ಳಬೇಕಾಯಿತು. ರಾಮಾಯಣ, ಭಾರತಗಳ ವಾಚನ; ದೇವರ ನಾಮ, ಸ್ತೋತ್ರಪದ್ಯಗಳ ಪಾರಾಯಣದಲ್ಲಿ ದಿನ ಕಳೆದರು.

ಅನಂತರದ ದಿನಗಳಲ್ಲಿ ಸುತ್ತ-ಮುತ್ತಲ ಚಿಕ್ಕ ಮಕ್ಕಳೊಂದಿಗೆ ಒಡನಾಟ. ತಮ್ಮ ಮನೆಯಲ್ಲಿ ಕೂಡಿಸಿಕೊಂಡು, ಅವರಿಗೆ ಹಾಡು ಕತೆ ಓದು ಬರಹ ಹೇಳಿಕೊಡಲು ಆರಂಭಿಸಿದರು. ಅವರ ಮನೆ ಮಕ್ಕಳ ವಿದ್ಯಾಮಂದಿರವಾಯಿತು. ಮಕ್ಕಳ ಮೇಲಿನ ಮಮತೆಯಿಂದ ಸ್ವಸಂತೋಷಕ್ಕಾಗಿ ಕೈಕೊಂಡ ಕೆಲಸ ಅದು. ತನ್ನದೆ ಆದ ಪಠ್ಯಕ್ರಮ; ಮಕ್ಕಳನ್ನು ರಂಜಿಸುವ ರೀತಿಯಲ್ಲಿ ಪಾಠ ಹೇಳುವುದು. ತಮ್ಮ ವಿರಾಮಕಾಲದಲ್ಲಿ ಮಹಿಳೆಯರು ಸಹ ಆ ವಿದ್ಯಾಮಂದಿರದಲ್ಲಿ ಬಂದು ಸೇರುವರು. ವಯಸ್ಸಾದ ಮಹಿಳೆಯರು ಕೂಡ ಓದು-ಬರಹ ಕಲಿಯಲು ಬಯಸಿದರು. ಮಕ್ಕಳು-ಮಹಿಳೆಯರ ವಿದ್ಯಾಕೇಂದ್ರವಾಗಿ 'ಮಾತೃ ಮಂದಿರ' ಹೆಸರಿನಿಂದ ಅದು ಉತ್ಸಾಹದಿಂದ ಕೆಲಸ ನಡೆಸಿತು. ಕಾಲಕಾಲಕ್ಕೆ ಉಪನ್ಯಾಸಗಳು, ಶಾರದಾಪೂಜೆ, ಸಂಗೀತ ಪಾಠಗಳು, ದೇವತಾ ಭಜನೆ— ಅಲ್ಲಿ ನಡೆಯುತ್ತಿದ್ದವು. ಪುಸ್ತಕ ಭಂಡಾರ, ವಾಚನಾಲಯಗಳು ಅಲ್ಲಿ ಏರ್ಪಟ್ಟವು. ಕೊನೆಗೆ ಗ್ರಂಥಪ್ರಕಾಶನ, ಪತ್ರಿಕಾ ಪ್ರಕಾಶನಗಳು ಮಾತೃ ಮಂದಿರದ ಆಶ್ರಯದಲ್ಲಿ ಆರಂಭವಾದವು.

ಗ್ರಂಥಭಂಡಾರದ ಪ್ರಯೋಜನವನ್ನು ಆಕೆ ಚೆನ್ನಾಗಿ ಪಡೆಯತೊಡಗಿದರು. ತಂದೆಯ ನೆರಳಿನಲ್ಲಿ ಆ ಮೊದಲೇ ಹೊಸ ಪುಸ್ತಕಗಳ ಪರಿಚಯವಾಗಿತ್ತು. ಬಿ. ವೆಂಕಟಾಚಾರ್ಯರ ನಾವೆಲ್ಲುಗಳು ಓದಿನ ರುಚಿಯನ್ನು ಹುಟ್ಟಿಸಿದವು. ಎಂ. ವೆಂಕಟಾದ್ರಿಶಾಸ್ತ್ರಿ, ಬೆಳ್ಳಾವೆ ಸೋಮನಾಥಯ್ಯ, ನಂಜನಗೂಡು ಶ್ರೀಕಂಠಶಾಸ್ತ್ರಿ ಮೊದಲಾದವರ ಕೃತಿಗಳು, ತೆಲಗು ಭಾಷೆಯ ಹಲವು ಕಥೆ—ನಾಟಕಗಳು ಆಕೆಗೆ ಪ್ರಿಯವಾದವು. ಒಮ್ಮೆ ಮನೆಗೆ ಬಂದಿದ್ದ ಆಪ್ತ ಭಗಿನಿಯೊಬ್ಬರು, ಸದಾ ಓದಿನಲ್ಲಿ ಮಗ್ನಳಾಗಿದ್ದ ತಿರುಮಲಮ್ಮನನ್ನು ನೋಡಿ, "ಏನು ಈಕೆ ಯಾವುದಾದರೂ ಪರೀಕ್ಷೆಗೆ ಓದುತ್ತಾಳೊ?" ಎಂದು ಕೇಳಿದರು. "ಆಕೆಯ ಚಿಕ್ಕಮ್ಮ, "ಈ ಮೊದಲು ಯಾವುದಾದರೂ ಪರೀಕ್ಷೆ ಆಗಿದ್ದರೆ ತಾನೇ ಮುಂದೆ ಇನ್ನೊಂದು ಪರೀಕ್ಷೆ"— ಎಂದು ಹಾಸ್ಯಮಾಡಿದರು.

ಓದು, ಆಕೆಯನ್ನು ಬರೆಯುವುದಕ್ಕೆ ಪ್ರಚೋದಿಸಿತು. ಏನಾದರೂ ಬರೆಯಬೇಕೆಂಬ ತವಕ. ಮೊದಮೊದಲು ಓದಿದ್ದ ಪುಸ್ತಕಗಳಲ್ಲಿಯ ಸುಂದರ ವರ್ಣನೆ, ಸಂಭಾಷಣೆಗಳನ್ನು ಬರೆದಿಟ್ಟುಕೊಳ್ಳುವುದು. ಅವನ್ನು ಅನುಕರಿಸುವುದು. ೧೯೦೭-೦೮ರ ಸುಮಾರಿಗೆ ಸ್ವಂತ ಅನಿಸಿಕೆಗಳನ್ನು ಬರವಣಿಗೆಯಲ್ಲಿ ಮೂಡಿಸಲು ಸಮರ್ಥರಾದರು. ತಾವು ಬರೆದ ಲೇಖನಗಳನ್ನು ಮಧ್ಯಾಹ್ನದ 'ಮಾತೃ ಮಂದಿರ' ಸಭೆಗಳಲ್ಲಿ ಆಕೆ ಓದಿ ತೋರಿಸುತ್ತಿದ್ದರು; ಹೀಗೆ ಓದುವ-

ಕೇಳಿ ಬಂದವು. ಇನ್ನೂ ಕೆಲವರು, ಮಹಿಳೆಗೆ ಗ್ರಂಥ ರಚನಾ ಸಾಮರ್ಥ್ಯ ಇರುವುದು ಸಾಧ್ಯವೇ ಇಲ್ಲ; ಪುಸ್ತಕ ಪ್ರಕಟನೆಯಂಥ–ಪುರುಷರಿಗೂ ಸುಲಭ ಸಾಧ್ಯವಲ್ಲದ ಕೆಲಸವನ್ನು ಈಕೆ ಹೇಗೆ ನಿರ್ವಹಿಸಬಲ್ಲಳು? ಯಾರೋ ಮಹನೀಯರು ಈಕೆಯ ಹೆಸರಿನಲ್ಲಿ ಇದನ್ನೆಲ್ಲ ನಡೆಸಿದ್ದಾರೆ ಎಂದೆಲ್ಲ ಮಾತಾಡತೊಡಗಿದರು. ಹೀಗೆ ಕೆಲವು ಕಾಲ ಮಾನಸಿಕ ಯಾತನೆಯನ್ನು ಆಕೆ ಅನುಭವಿಸಬೇಕಾಯಿತು.

ಕರ್ನಾಟಕದ ಇತರ ಭಾಗಗಳಿಂದ 'ಸತೀ ಹಿತೈಷಿಣಿ'ಗೆ ದೊರೆತ ಸ್ವಾಗತ ಈ ನಿರಾಸೆಯನ್ನು ಮರೆಸುವಂಥದು. ಬೆನಗಲ್ ರಾಮರಾಯರು, 'ಕೃಷ್ಣಸೂಕ್ತಿಯ' ರಾಜಗೋಪಾಲ ಕೃಷ್ಣರಾಯರು ತಿರುಮಲಮ್ಮನ ಕೃತಿಗಳನ್ನು ಮೆಚ್ಚಿ ಹರಸಿದರು. 'ಮದ್ರಾಸ್ ಸ್ಕೂಲ್ ಬುಕ್ ಮತ್ತು ಲಿಟರೇಚರ್' ಸೊಸೈಟಿಯ ಕನ್ನಡ ವಿಭಾಗದ ಸದಸ್ಯರಾಗಿದ್ದ ರಾಮರಾಯರು ಅವರಿಗೆ ವಿಶೇಷ ನೆರವು ನೀಡಿದರು. ಸಿದ್ಧಾಂತಿ ಶಿವಶಂಕರಶಾಸ್ತ್ರಿ, ಮದ್ರಾಸು, ಬಿ. ಎಸ್. ಕೃಷ್ಣಮೂರ್ತಿ, ಮಡಿಕೇರಿ, ದಾಸೋ ಮಹಿಪತಿ ಕುಲಕರ್ಣಿ, ಐಗಳಿ (ಬೆಳಗಾವಿ), ಮುರಾರಿ ರಾಮಚಂದ್ರ ಶಿವಪೂಜಿ, ದೇವಗಿರಿ (ಧಾರವಾಡ) ಮೊದಲಾದರು ಆಕೆಯನ್ನು ಅಭಿನಂದಿಸಿದರು. ತಿರುಮಲಮ್ಮನ ಈ ಸಾಹಸವನ್ನು ನೋಡಿ 'ವಾಗ್ಭೂಷಣಕಾರರು' ಕಂತಿ–ಹೊನ್ನಮ್ಮರನ್ನು ನೆನಪಿಸಿದರು. ತನ್ನ ಮೊದಲ ಸಂಚಿಕೆಯಲ್ಲಿ 'ಪ್ರಬುದ್ಧ ಕರ್ನಾಟಕ'ವು 'ಹಿತೈಷಿಣಿ'ಯನ್ನು ಸ್ವಾಗತಿಸಿತು.

ಮಾತೃಮಂದಿರದ ಧ್ಯೇಯೋದ್ದೇಶಗಳು ಸಮಗ್ರ ಕರ್ನಾಟಕದಲ್ಲಿ ಪ್ರಸಾರ ಹೊಂದಬೇಕೆಂದು ಆಕೆ ಬಯಸಿದ್ದರು. ಆ ಉದ್ದೇಶದಿಂದ 'ಕರ್ನಾಟಕ ನಂದಿನಿ'–ಮಾಸಪತ್ರಿಕೆಯು ೧೯೧೬ರ ಅಗಸ್ಟ್ ತಿಂಗಳಲ್ಲಿ ಹೊರಟಿತು. "ನಮ್ಮ ಸೋದರಿಯರಲ್ಲಿ ಪರಸ್ಪರ ಅನ್ಯೋನ್ಯವುಂಟಾಗಿ ಅವರೂ ದೇಶದ ಏಳ್ಗೆಯಲ್ಲಿ ಪಾಲುಗೊಳ್ಳುವಂತೆ ಸಿದ್ಧತೆ ನಡೆಸುವು"ದಾಗಿ 'ನಂದಿನಿ' ಸಂಕಲ್ಪ ಮಾಡಿದಳು. "ನಮ್ಮ ದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾವತಿಯರಿದ್ದು ಅವರೆಲ್ಲ 'ನಂದಿನಿ'ಯ ಕಾರ್ಯದಲ್ಲಿ ಸಹಕರಿಸಬೇಕೆಂ"ದು ಸಂಪಾದಕಿ ಬಿನ್ನವಿಸಿಕೊಂಡರು. ಹುಬ್ಬಳ್ಳಿಯ ಶ್ರೀಕೃಷ್ಣ ಮುದ್ರಣಾಲಯದಲ್ಲಿ ಪತ್ರಿಕೆ ಅಚ್ಚಾಗುತ್ತಿತ್ತು. ಧಾರವಾಡ, ಮಂಗಳೂರು, ಮೈಸೂರು ಕನ್ನಡಿಗರಲ್ಲಿ ಏಕೀಭಾವವನ್ನು ಮೂಡಿಸಲು 'ನಂದಿನಿ' ಶ್ರಮಿಸಿತು. 'ಕನ್ನಡ ರನ್ನಗನ್ನಡಿ' ಎಂಬ ಲೇಖನಮಾಲೆಯಲ್ಲಿ ಅಖಿಲ ಕರ್ನಾಟಕದ ಭಾಷಾ ಸೇವಕರ ಚರಿತ್ರೆಗಳು ಪ್ರಕಟವಾಗಿವೆ. ವೆಂಕಟ ರಂಗೋ ಕಟ್ಟಿ, ಅಣ್ಣಾರಾವ ಸವದಿ ಮೊದಲಾದ ಉತ್ತರ ಕರ್ನಾಟಕದ ಪ್ರಮುಖ ಲೇಖಕರ ಚರಿತ್ರೆಗಳನ್ನು ಅಭಿಮಾನಪೂರ್ವಕವಾಗಿ ಮೊದಲು ಪ್ರಕಟಿಸಿದ ಮೈಸೂರು ಸಂಸ್ಥಾನದ ಪತ್ರಿಕೆ– 'ನಂದಿನಿ.' ಮಂಗಳೂರಿನ ವಿದ್ಯಾರ್ಥಿಯಾಗಿದ್ದ ಕಡೆಂಗೊಡ್ಲು ಶಂಕರಭಟ್ಟರು 'ನಂದಿನಿ'ಯಲ್ಲಿ ಕೆಲವು ಲೇಖನಗಳನ್ನು ಬರೆದಿದ್ದಾರೆ. ರಾಜಕವಿ ತಾತಾಚಾರ್ಯ, ಸಿದ್ಧಾಂತಿ ಶಿವಶಂಕರ ಶಾಸ್ತ್ರಿ– 'ನಂದಿನಿ'ಯ ಬರಹಗಾರರು. ಅರಳುವ ಮುನ್ನವೇ ಮುದುಡಿದ 'ಮಲ್ಲಿಗೆ' ಕಾವ್ಯನಾಮದ ಉಡುಪಿ ತುಳಸೀಬಾಯಿಯ ಕವಿತೆಗಳು ಇಲ್ಲಿ ಅಚ್ಚಾಗಿವೆ. 'ಕಾಳಗೌಡ' ಎಂಬ ಆಕೆಯ ಕಥನ–ಕವನ 'ನಂದಿನಿ' ಗ್ರಂಥಮಾಲೆಯ ಮೊದಲ ಪುಷ್ಪವಾಗಿ ಪ್ರಕಟವಾಗಿದೆ.

ಭಾರತೀಯ ಸಂಪ್ರದಾಯವನ್ನು ಪುರಸ್ಕರಿಸುತ್ತಿದ್ದ 'ನಂದಿನಿ' ಸ್ವಾಭಾವಿಕವಾಗಿ ಆಧುನಿಕ ವಿದ್ಯಾವತಿಯರನ್ನು ಆಕರ್ಷಿಸಲು ಸಮರ್ಥಳಾಗಲಿಲ್ಲವೆಂದು ತೋರುತ್ತದೆ. "ಸ್ತ್ರೀಯರ ಕರ್ತವ್ಯಕ್ಕೆ ಸಂಬಂಧಿಸಿದ ಶಿಶು ಸಂಗೋಪನೆ, ಸಮಾಜ ಸೇವಾ ವಿಚಾರ, ನಮ್ಮ ಆಚಾರ–ವಿಚಾರಗಳನ್ನು ಕುರಿತ ಲೇಖನಗಳನ್ನು ಕಳಿಸುವಂತೆ" ಸಂಪಾದಕಿಯು ಮಾಡಿಕೊಂಡ ಮನವಿಗಳು 'ಅರಣ್ಯರೋದನ'ವಾದವು. ಎರಡನೆಯ ವರ್ಷದಿಂದ ಪತ್ರಿಕೆಯ ಪ್ರಕಟನೆಯಲ್ಲಿ ಅನಿಯಮಿತತನವು ಕಾಲಿಕ್ಕಿತು: ಬರವಣಿಗೆಯ ಭಾರ ವಿಶೇಷವಾಗಿ ಸಂಪಾದಕಿಯನ್ನು ಅವಲಂಬಿಸಿತು. 'ಗಿರಿ,' 'ಶ್ರೀಗಿರಿ,' 'ಶ್ರೀಪಾದರೇಣು,' 'ಹಿತೈಷಿಣಿ,' ಕೆಲವು ಸಂದರ್ಭಗಳಲ್ಲಿ ನಾಮ ನಿರ್ದೇಶವಿಲ್ಲದೆ ಆಕೆ ಬರೆದಿದ್ದಾರೆ.

'ನಂದಿನಿ'ಗೆ ಒಂದು ಸ್ವತಂತ್ರ ಮುದ್ರಣಾಲಯ, 'ಮಾತೃ ಮಂದಿರ'ಕ್ಕೆ ಒಂದು ಅಭಿವೃದ್ಧಿ ನಿಧಿ ಆಗಬೇಕೆಂಬುದು ತಿರುಮಲಮ್ಮನ ಅಭಿಲಾಷೆ. ಹಣದ ಅಭಾವ ಮತ್ತು ಯುದ್ಧ ಸಂಬಂಧದ ತೊಡಕುಗಳು ಅವರ ಯೋಜನೆಗಳಿಗೆ ಅಡ್ಡಿಯಾಗಿದ್ದುವು. ಆ ಕೊರಗು ಕೊನೆಯವರೆಗೆ ಉಳಿಯಿತು.

ಪತ್ರಿಕೆಯ ಹನ್ನೆರಡು ಸಂಚಿಕೆಗಳು ಹಿಂದೆ ಉಳಿದ ಪರಿಣಾಮವಾಗಿ ಮೂರನೆಯ ಸಂಪುಟದ ಕೊನೆಯ ಸಂಚಿಕೆಯು ೧೯೨೦ರ ಆಕ್ಟೋಬರ್ ತಿಂಗಳಲ್ಲಿ ಪ್ರಕಟವಾಯಿತು. ಆ ಸಂಚಿಕೆಯಲ್ಲಿ "ನಂದಿನಿಗೆ ಮುಂದಕ್ಕೆ ಅಡಿ ಇಡುವ ಸಾಮರ್ಥ್ಯ ಕುಂದಿದೆ"- ಎಂದು 'ಮಾತೃ ಸಮ್ಮುಖದಲ್ಲಿ,' ತಮ್ಮ ಅಳಲನ್ನು ಆಕೆ ತೋಡಿಕೊಂಡಿದ್ದಾರೆ. ಅದು ಪೂರ್ಣ ವಿರಾಮವಲ್ಲ. 'ನಂದಿನಿ'ಯು ನಾಲ್ಕಾರು ತಿಂಗಳು ಮಾತ್ರ ಅಜ್ಞಾತವಾಸದಲ್ಲಿ ಉಳಿದು, ಅನಂತರ ನೋಡುವವರು ಸೈ ಎಂದು ಆದರಿಸುವಂತೆ, ಸಹಾಯ - ಸಂಪತ್ತುಗಳಿಂದ ಪರಿಪುಷ್ಟಳಾಗಿ ಮತ್ತೆ ಹೊರಬರುವಳು" ಎಂದು ಚಂದಾದಾರರಿಗೆ ಭರವಸೆ ನೀಡಿದ್ದಾರೆ. ಆದರೆ ಅದು ಸಾಧ್ಯವಾಗಲಿಲ್ಲ.

'ಮಾತೃಮಂದಿರ' ಆಶ್ರಯದಲ್ಲಿ ವಿದ್ಯಾರ್ಥಿಗಳಿಗಾಗಿ ಒಂದು ಪತ್ರಿಕೆಯನ್ನು ಹೊರಡಿಸುವ ಯೋಜನೆ ಅವರಲ್ಲಿ ೧೯೧೮ರಿಂದಲೂ ಇತ್ತು. 'ನಂದಿನಿ'ಯು ನಿಂತು ಹೋದ ಮೇಲೆ ೧೯೨೨ರಲ್ಲಿ 'ಸನ್ಮಾರ್ಗದರ್ಶಿನಿ' ಎಂಬ ಪತ್ರಿಕೆಯನ್ನು ಹೊರಡಿಸಿದರು. ೧೯೩೬ರ ವರೆಗೆ ಅದು ಪ್ರಕಟವಾಗಿ 'ನಂದಿನಿ'ಯ ದಾರಿಯನ್ನೇ ಹಿಡಿಯಿತು.

ತಿರುಮಲಾಬಾ, ೧೩ ಸಾಮಾಜಿಕ ಕಾದಂಬರಿ, ೬ ನಾಟಕ, ೩ ಪ್ರಬಂಧ, ೩ ಪದ್ಯ-ಸಂಕಲನ ಮತ್ತು ಒಂದು ಪೌರಾಣಿಕ ಕಥಾ ಸಂಗ್ರಹವೂ ಸೇರಿದಂತೆ ೨೬ ಕೃತಿಗಳನ್ನು ಬರೆದಿದ್ದಾರೆ. ಕೆಲವು ಸಣ್ಣ ಕತೆಗಳನ್ನೂ ಬಿಡಿ ಲೇಖನಗಳನ್ನೂ 'ನಂದಿನಿ' ಮತ್ತು 'ಸನ್ಮಾರ್ಗದರ್ಶಿನಿ'ಯಲ್ಲಿ ಬರೆದದ್ದು ಉಂಟು. 'ಶೇಷ ಗಿರೀಶ'-ಕಾವ್ಯನಾಮದಿಂದ ಆಕೆ ಪದ್ಯಗಳನ್ನು ರಚಿಸಿದ್ದಾರೆ.

ತಾವು ಬರೆದ ಕಾದಂಬರಿಗಳನ್ನು ಪ್ರಕಟಿಸುವ

| ಕಾದಂಬರಿಯ ಹೆಸರು | ಕಥಾವಸ್ತು | ಪ್ರಕಾಶನದ ವರ್ಷ |
|---|---|---|
| ಸುಶೀಲೆ | ಸ್ತ್ರೀಧರ್ಮ-ನೀತಿ ನಿರೂಪಣೆ | ೧೯೧೩ |
| ವಿಧವಾ ಕರ್ತವ್ಯ | ಬಾಲ ವಿಧವೆಯ ಕರುಣಾಜನಕ ಚಿತ್ರ | ೧೯೧೩ |
| ವಿರಾಗಿಣಿ | ಪತಿವಿಯೋಗಿನಿಯ ಬದುಕು | ೧೯೧೪ |
| ವಿದ್ಯುಲ್ಲತಾ (ಹರಿಣಿ ಭಾಗ-೧) | ಪ್ರೌಢ ಮಹಿಳೆಯರ ಶಿಕ್ಷಣ | ೧೯೧೪ |
| ನಭಾ (ಭಾಗ-೧) | ಆಧುನಿಕ ಮಹಿಳಾ ವಿದ್ಯಾಭ್ಯಾಸದ ದುಷ್ಪರಿಣಾಮಗಳು | ೧೯೧೪ |
| ದಕ್ಷಕನ್ಯಾ | ಸಂಸಾರದಲ್ಲಿ ಸಾಮರಸ್ಯದ ಅವಶ್ಯಕತೆ | ೧೯೧೫ |
| ಮಾತೃನಂದಿನಿ | ಮಾತೃಹೃದಯ; ತಾಯಿಯ ಹಿರಿಮೆ | ೧೯೧೬ |
| ವಿಕ್ರಮ | ಸುಶಿಕ್ಷಿತ ಮಹಿಳೆಯಿಂದ ರಾಷ್ಟ್ರೋದ್ಧಾರ | ೧೯೧೬ |
| ಪೂರ್ಣಕಲಾ | ಬ್ರಹ್ಮಚರ್ಯ, ಗುರುಕುಲವಾಸ | ೧೯೧೭ |
| ನಿಶಾಕಾಂತ | ಪತ್ತೇದಾರಿ | ೧೯೨೭ |
| ಗಿರಿಜಾಬಾಯಿ | ಪತಿಯ ಶ್ರೇಯಸ್ಸಿಗಾಗಿ ತ್ಯಾಗಮಾಡಿದ ಮಹಿಳೆ | ೧೯೨೭ |
| ರವಿವರ್ಮ | ಮಕ್ಕಳ ವಿದ್ಯಾಭ್ಯಾಸದಲ್ಲಿ ತಾಯಿ ತಂದೆಗಳ ಹೊಣೆ | ೧೯೩೬ |
| ಮಣಿಮಾಲೆ (ಹರಿಣಿ ಭಾಗ-೨) | ವಿದ್ಯಾವತಿಯರ ಕರ್ತವ್ಯ | ೧೯೪೯ |

ಉದ್ದೇಶದಿಂದ ಆಕೆ ‘ಸತೀ ಹಿತೈಷಿಣೀ’ ಮಾಲೆಯನ್ನು ಆರಂಭಿಸಿದರು. ಅನಂತರ ಇತರ ವಿದ್ವಾಂಸರ ಕೃತಿಗಳನ್ನೂ ಪ್ರಕಟಿಸಿ ನಾಡಿನ ಪ್ರಮುಖ ಪ್ರಕಾಶನ ಸಂಸ್ಥೆಯನ್ನಾಗಿ ಅದನ್ನು ಬೆಳೆಸಿದರು. ಕಾದಂಬರಿ–ನಾಟಕಗಳಲ್ಲದೆ ‘ಶ್ರೀ ಲಕ್ಷ್ಮೀ ನರಸಿಂಹ ಸ್ತೋತ್ರ’– ಎಸ್. ಎನ್. ನರಹರಯ್ಯನವರ ಅಲಂಕಾರ ಲಕ್ಷ್ಯ–ಲಕ್ಷಣಗಳನ್ನು ಕುರಿತ ಅಲಂಕಾರಶಾಸ್ತ್ರ ಗ್ರಂಥವನ್ನೂ ಡಾ. ಶ್ರೀನಿವಾಸ ಮೂರ್ತಿಯವರ, ‘ಸೂಕ್ಷ್ಮಾಯುರ್ವೇದ ಚಿಕಿತ್ಸಾ ಪ್ರಯೋಗ ಸರಳ ಯುನಾನಿಪ್ಯಾಥಿ ಚಿಕಿತ್ಸಕ’ ಎಂಬ ವೈದ್ಯಶಾಸ್ತ್ರ ಗ್ರಂಥವನ್ನೂ ಪ್ರಕಟಿಸಿದ್ದಾರೆ. ‘ಸನ್ಮಾನ ಗ್ರಂಥಾವಲಿ,’ ‘ನಂದಿನಿ ಗ್ರಂಥಮಾಲಾ,’ ‘ಸನ್ಮಾರ್ಗದರ್ಶಿನಿ ಗ್ರಂಥ ಮಾಲಿಕಾ’ ಪ್ರಕಾಶನಗಳ ಮೂಲಕ ಪಾನ್ಯಂ ಸುಂದರ ಶಾಸ್ತ್ರಿ, ಸರಗೂರ ವೆಂಕಟ ವರದಾಚಾರ್ಯ ಮೊದಲಾದ ಪಂಡಿತರ ಕೃತಿಗಳನ್ನು ಹೊರತಂದಿದ್ದಾರೆ.

ತಿರುಮಲಾಂಬಾ ಅವರ ಸಾಮಾಜಿಕ ಕಾದಂಬರಿಗಳು ಅಂದಿನ ಕಾಲದ ಮಧ್ಯಮ ವರ್ಗದ ಸಂಸಾರದ ಚಿತ್ರಗಳನ್ನು–ಮುಖ್ಯವಾಗಿ ಹೆಣ್ಣಿನ ಅವಸ್ಥೆಗಳನ್ನು ಬಣ್ಣಿಸುತ್ತವೆ. ಇಲ್ಲಿಯ ಪಾತ್ರಗಳು ತಾಳ್ಮೆ, ಸಹನೆಯ ಪ್ರತಿರೂಪವಾಗಿ ಕಾಣುತ್ತವೆ. ಅವರ ಕಾದಂಬರಿಗಳಲ್ಲಿ ಪ್ರಸ್ತಾಪಿತವಾದ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು:

‘ಸನ್ಮಾರ್ಗದರ್ಶಿನಿ’ ನಿಂತು ಹೋದಮೇಲೆ ತಿರುಮಲಾಂಬಾ ಬರೆದದ್ದು ಕಡಿಮೆ. ಆ ವೇಳೆಗೇ ಆಧ್ಯಾತ್ಮದ ಕಡೆಗೆ ಆಕೆಯ ಮನಸ್ಸು ಒಲಿದಿತ್ತು. ತಾಯಿ ಭಗವತಿಯ ಮಡಿಲಲ್ಲಿ ಮನಶ್ಶಾಂತಿಯನ್ನು ಪಡೆಯಲು ಆಕೆ ಹಂಬಲಿಸಿದ್ದು ಕೆಲವು ಲೇಖನ, ಪದ್ಯಗಳಲ್ಲಿ ವ್ಯಕ್ತವಾಗಿದೆ.

‘ಸತೀ ಹಿತೈಷಿಣೀ’ ಪುಸ್ತಕಗಳಿಗೆ ೧೯೧೬ ರಲ್ಲಿ ಸರಕಾರದ ಪ್ರಥಮ ಪುರಸ್ಕಾರ ದೊರೆಯಿತು. ‘ಮೈಸೂರು ಟ್ರ್ಯಾವಲಿಂಗ್ ಲೈಬ್ರರೀಜ್ ಸರ್ವೀಸ್’ ಆಶ್ರಯದಲ್ಲಿ ‘ಚಂದ್ರವದನಾ’ ನಾಟಕದ ನೂರಾರು ಪ್ರತಿಗಳನ್ನು ಕೊಳ್ಳಲಾಯಿತು. ಅನಂತರ ಮೈಸೂರು ವಿದ್ಯಾ ಇಲಾಖೆ, ಮದ್ರಾಸು, ಮೈಸೂರು, ಮುಂಬಯಿ ಮತ್ತು ಆಂಧ್ರ ವಿಶ್ವ ವಿದ್ಯಾನಿಲಯಗಳ ವಿವಿಧ ತರಗತಿಗಳಿಗೆ ಪಠ್ಯಪುಸ್ತಕಗಳಾಗಿ ಮಾಲೆಯ ಬೇರೆ ಬೇರೆ ಪುಸ್ತಕಗಳು ಸುಮಾರು ೨೫ ವರ್ಷಗಳವರೆಗೆ ಪ್ರಚಾರ ಹೊಂದಿದವು. ‘ಮಣಿಮಾಲೆ’ (೧೯೧೬) ಕಾದಂಬರಿಗೆ ಅರಮನೆಯಿಂದ ಮೂರು ಸಾವಿರ ರೂಪಾಯಿಗಳ ಬಹುಮಾನ ದೊರೆಯಿತು.

ವೆಂಕಟಕೃಷ್ಣಯ್ಯಂಗಾರ್ಯರ ಮರಣದಿಂದ ‘ಹಿತೈಷಿಣಿ’ಯ ಅರ್ಧ ಶಕ್ತಿ ಉಡುಗಿತು. ತಿರುಮಲಮ್ಮನ ಸಾಹಿತ್ಯಿಕ ಚಟುವಟಿಕೆಗಳಿಗೆ ಪೋಷಕರೂ, ಮುಖ್ಯ ಕಾರ್ಯವಾಹಕರೂ ಅವರೇ ಆಗಿದ್ದರು. ಅವರು ನಿರ್ವಹಿಸುತ್ತಿದ್ದ ಪ್ರಕಾಶನ ಮತ್ತು ಮಾರಾಟದ ವ್ಯವಹಾರವನ್ನು ನೋಡಿಕೊಳ್ಳಲು ಸಮರ್ಥರಾದವರು ಅನಂತರ ಆಕೆಗೆ ಬೇರೆ ಯಾರೂ ದೊರೆಯಲಿಲ್ಲ. ಹಿಂದೆಂದೂ ಕಾಣದ ಅಬಲಾ ಮನೋಭಾವ ಆಕೆಯಲ್ಲಿ ಮೈದೋರಿತು. ವಿಧವಾ ಜೀವನದ ಅನಾಥ ಪ್ರಜ್ಞೆ ಮೇಲುಗೈ ಪಡೆಯಿತು. ೧೯೨೦ರ ಬಳಿಕ ‘ಗಿರಿಜಾಬಾಯಿ’ ‘ಮಣಿಮಾಲೆ’— ಕಾದಂಬರಿಗಳನ್ನು ಬಿಟ್ಟರೆ ಮತ್ತಾವ ಸಾಮಾಜಿಕ ಕೃತಿಯನ್ನೂ ಆಕೆ ಬರೆಯಲಿಲ್ಲ. ಹಿಂದೆ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಬಂದಿದ್ದ ಕೆಲವು ಪೌರಾಣಿಕ ನಾಟಕ–ಕಥೆಗಳು ಅನಂತರ ಪುಸ್ತಕ ರೂಪದಲ್ಲಿ ಪ್ರಕಟವಾದವು. ಹಿಂದಿನ ಪ್ರಕಟಣೆಗಳ ಪುನರ್ಮುದ್ರಣದಲ್ಲಿ ‘ಹಿತೈಷಿಣಿ’ಯು ಸಮಾಧಾನ ಹೊಂದಬೇಕಾಯಿತು.

ತಿರುಮಲಾಂಬಾ ಅವರ ಕೃತಿಗಳನ್ನು ಕುರಿತು ವಸ್ತುನಿಷ್ಠ ಅಧ್ಯಯನ ನಡೆಯಬೇಕಾಗಿದೆ. ಗ್ರಂಥ ಪ್ರಕಾಶಕಿಯಾಗಿ, ಪತ್ರಿಕಾ ಸಂಪಾದಕಿಯಾಗಿ ಆಕೆಯ ಅದ್ವಿತೀಯ ಸಾಹಸ ಬಹು ಕಾಲ ನಮ್ಮ ಚರಿತ್ರೆಯಲ್ಲಿ ನಿಲ್ಲುವಂಥದು. ❁



ಈ ವರ್ಷದ ಏಪ್ರಿಲ್ ೨೬ರ ಶನಿವಾರ ಮುಂಜಾನೆ ೧.೨೩ ಗಂಟೆಗೆ ರಶಿಯಾದ ಚೆರ್ನೋಬಿಲ್ ಅಣುಶಕ್ತಿಸ್ಥಾವರದಲ್ಲಿ ಭಯಂಕರ ವಿಕಿರಣ ದುರಂತ ಸಂಭವಿಸಿತು. ಇದರ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಇಪ್ಪತ್ತು ಲಕ್ಷ ಕಿಲೋ ವ್ಯಾಟ್‌ಗಳು. ಸೋವಿಯತ್ ದೇಶದಲ್ಲಿ ಸುಮಾರು ೩೦ ವರ್ಷಗಳಿಗಿಂತ ಹಿಂದಿನಿಂದಲೂ ೪೦ ಅಣುಶಕ್ತಿಕೇಂದ್ರಗಳು ಕಾರ್ಯ ಮಾಡುತ್ತಿವೆ. ಅವುಗಳಲ್ಲಿ ಚೆರ್ನೋಬಿಲ್ ಅಣು ವಿದ್ಯುತ್ ಕೇಂದ್ರವೂ ಒಂದು. ಉಕ್ರೇನಿಯ ಪ್ರದೇಶದ ರಾಜಧಾನಿ ಕೀವ್ ಪಟ್ಟಣದ ಉತ್ತರಕ್ಕೆ ೧೩೦ ಕಿಲೋಮೀಟರ್ ದೂರದಲ್ಲಿಯ ಪ್ರಿಪೆಟ್ ನದಿಯ ಬಳಿಯಲ್ಲಿ ಚೆರ್ನೋಬಿಲ್ ಅಣುಸ್ಥಾವರವಿದೆ. ಅಲ್ಲಿ ನಡೆದ ವಿಕಿರಣ ಎತ್ತರಕ್ಕೆ ಚಾಚಿಕೊಂಡು ಸಿಕ್ಕೆಲ್ಲ ವಸ್ತುಗಳನ್ನು ಬೂದಿಯಾಗಿ ಮಾಡಿದವು. ಯಂತ್ರಾಗಾರದ ಕಟ್ಟಡವೆಲ್ಲ ಬಹುಪಾಲು ಸುಟ್ಟು ನಾಶವಾಯಿತು. ಆಗ ಕೆಲಸದ ಮೇಲಿದ್ದ ವಿದ್ಯುತ್ ವಿಭಾಗದ ಹಿರಿಯ ಫೋರ್‌ಮನ್ನರಾದ ನಿಕೋಲಾಯಿ ಪೋಲಿಷ್ ಚುಕ್ ಅವರು ಏನಾಯಿತೆಂದು ನೋಡಲು ಧೈರ್ಯದಿಂದ ಒಳಹೊಕ್ಕಾಗ ಪ್ರತ್ಯಕ್ಷದರ್ಶಿಯು ಕಂಡ ದೃಶ್ಯ ಇದು. ರಿಯಾಕ್ಟರಿನ ನೆಲ ಹಾಸಿನಂತೆ ಬಳಸಿದ ಗಚ್ಚಿನಂತಹ ಪದಾರ್ಥವಾದ ಬಿಟುಮೆನ್ (Bitumen) ಉಷ್ಣತೆಯಿಂದ ಕರಗಿ ಬೂಟುಗಳು ಅಂಟಿಕೊಂಡು ಹೊರಬರುವುದೇ ದುಸ್ತರವಾಗಿ, ಉಸಿರುಗಟ್ಟಿ, ಉಳಿದ ಸಿಬ್ಬಂದಿಯವರ ತಕ್ಷಣದ ಸಹಾಯದಿಂದ ಅವರು

# ಚೆರ್ನೋಬಿಲ್ ದುರಂತ ಹೇಳುವ ಪಾಠ

ಡಾ. ವಾಯ್. ಎಫ್. ನೀಲಗುಂದ

ದುರ್ಘಟನೆ ಕೆಲವೇ ಗಂಟೆಗಳಲ್ಲಿ ಸುದ್ದಿಯಾಗಿ ಜಗತ್ತನ್ನು ದಿಗ್‌ಭ್ರಮೆಗೊಳಿಸಿತು. ಸಾವಿರಾರು ಜನ ಸತ್ತರೆಂದು ಪತ್ರಿಕೆಗಳು ವರದಿ ಮಾಡಿದವು. ವಿವಿಧ ದೇಶಗಳು ವಿಧವಿಧವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸಿದವು.

ಚೆರ್ನೋಬಿಲ್ ಅಣು ಕೇಂದ್ರದಲ್ಲಿ ಒಟ್ಟು ನಾಲ್ಕು ರಿಯಾಕ್ಟರ್(ಘಟಕ)ಗಳು ಕಾರ್ಯ ನಿರ್ವಹಿಸುತ್ತಿದ್ದು ಅವುಗಳಲ್ಲಿ ನಾಲ್ಕನೆಯ ರಿಯಾಕ್ಟರಿನಲ್ಲಾದ ತಾಂತ್ರಿಕ ತೊಂದರೆಯೇ ಈ ಪ್ರಮಾದಕ್ಕೆ ಕಾರಣ. ಅಪಘಾತದಿಂದ ಈ ಘಟಕ ಭಾಗಶಃ ನಾಶವಾಯಿತು. ಬೆಂಕಿ ಅಣು ಸ್ಥಾವರದಿಂದ ಹೊರಗೆ ಬಹು ದೂರದ ವರೆಗೆ ಚಿಮ್ಮುತ್ತಿತ್ತು. ಯಂತ್ರಾಗಾರದ ಛಾವಣಿಯೆಲ್ಲ ಬೆಂಕಿಯಿಂದ ಸುಟ್ಟು ಹೋಯಿತು. ಬೆಂಕಿಯ ಕೆನ್ನಾಲಿಗೆಗಳು ಮೂವತ್ತು ಮೀಟರುಗಳಷ್ಟು

ಬದುಕಿದರು. ಆಗ ಕೆಲಸದಲ್ಲಿದ್ದ ಸಿಬ್ಬಂದಿ ಜೀವದ ಹಂಗುದೊರೆದು ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸಿತು.

ದುರ್ಘಟನೆ ಸಂಭವಿಸಿದ ಕೆಲವೇ ಗಂಟೆಗಳಲ್ಲಿ ತಕ್ಷಣದ ಕಾರ್ಯಗಳನ್ನು ನಿರ್ವಹಿಸಲು, ಪ್ರಮಾದದ ಕಾರಣ, ಹಾನಿ, ಸಾವು ನೋವುಗಳನ್ನು ಅಭ್ಯಸಿಸಲು ದೇಶದ ಪ್ರಸಿದ್ಧ ವಿಜ್ಞಾನಿಗಳು, ವಿಷಯ ಪರಿಣಿತರು, ಯಂತ್ರತಜ್ಞರು, ವೈದ್ಯರು, ರಸಾಯನಿಕ ರಕ್ಷಣಾ ಯುನಿಟ್‌ಗಳ ಅಧಿಕಾರಿಗಳು ಹಾಗೂ ವಿಕಿರಣಾ ಶಾಸ್ತ್ರ ತಜ್ಞರನ್ನೊಳಗೊಂಡ ನಿಯೋಗವು ರಶಿಯಾದ ಮಂತ್ರಿಮಂಡಲದ ಶೇರ್‌ಬಿನ್ನರ ನೇತೃತ್ವದಲ್ಲಿ, ವಿದ್ಯಮಾನಗಳನ್ನು ಕೂಲಂಕಷವಾಗಿ ಅರಿತು

ಕೊಳ್ಳಲು ಚೆರ್ನೋಬಿಲ್‌ನಲ್ಲಿ ಬಂದಿಳಿಯಿತು.

ದುರಂತ ಸಂಭವಿಸಿದ ಎರಡು ಗಂಟೆಗಳಲ್ಲಿ ೪೦,೦೦೦ ಜನಸಂಖ್ಯೆ ಇರುವ ಚೆರ್ನೋಬಿಲ್ ಪಟ್ಟಣವನ್ನು ಸಂಪೂರ್ಣವಾಗಿ ಸ್ಥಳಾಂತರಿಸಲಾಯಿತು. ಜನರೆಲ್ಲರನ್ನೂ ಅಲ್ಲಿಂದ ಬೇರೆಡೆಗೆ ಸುರಕ್ಷಿತ ಸ್ಥಳಕ್ಕೆ ಸಾಗಿಸುವುದು ತಕ್ಷಣ ಮಾಡಬೇಕಾದ ಅತಿ ಮುಖ್ಯ ಕಾರ್ಯವಾಗಿತ್ತು. ಇಲ್ಲವಾದಲ್ಲಿ ಬದುಕಿ ಉಳಿದವರಲ್ಲಿ ವಿಕಿರಣದಿಂದಾಗ ಬಹುದಾದ ಸಮಸ್ಯೆಗಳು ಉದ್ಭವಿಸಬಹುದು. ಒಂದು ಸಾವಿರದ ಒಂದು ನೂರು ಬಸ್ಸುಗಳು ಸತತವಾಗಿ ಓಡಾಡಿ ಎಲ್ಲರನ್ನೂ ಸುಮಾರು ೬೦ ಕಿಲೋಮೀಟರ್ ದೂರದ ಸುರಕ್ಷಿತ ಸ್ಥಳಕ್ಕೆ ರವಾನಿಸಿದವು.

ಅಣುಸ್ಥಾವರದ ಉಳಿದ ಮೂರು ಘಟಕಗಳನ್ನು ತಕ್ಷಣವೇ ಸ್ಥಗಿತಗೊಳಿಸಲಾಯಿತು. ನಾಲ್ಕನೆಯ ಘಟಕದ ಮೇಲ್ಭಾಗವನ್ನು ಉಸುಕು, ಕೆಸರು, ಬೋರಾನ್, ಡೋಲೋಮೈಟ್ ಹಾಗೂ ಸತುವುಗಳಿಂದಾದ ನಾಲ್ಕು ಸಾವಿರ ಟನ್ನಿನಷ್ಟು ಮಿಶ್ರಣವನ್ನು ಸುರಕ್ಷಾ ಕವಚದಂತೆ ಆಚ್ಛಾದನಗೊಳಿಸಲಾಯಿತು. ವಿದ್ಯುತ್ ಕೇಬಲ್‌ಗಳೆಲ್ಲ ನೀರಿನಲ್ಲಿ ಮುಳುಗಿದ್ದವು. ರಿಯಾಕ್ಟರಿನ ಬಹು ಭಾಗ ನೀರಿನಲ್ಲಿ ಮುಳುಗಿ ಹೋಗಿತ್ತು. ನಾಲ್ಕು ಸಾವಿರ ಟನ್ ರಕ್ಷಾ ಕವಚ ಪೈಪುಗಳು ಒಡೆದು ಹೊರಚೆಲ್ಲಿ ನಿಂತ ನೀರಿನ ಮಡುವಿನಲ್ಲಿ ಬೆರೆತು ಹೋಗಿತ್ತು. ರಕ್ಷಣಾ ಕವಚವಿರದ, ನೀರಿನಲ್ಲಿ ಮುಳುಗಿದ ರಿಯಾಕ್ಟರಿನಿಂದ ಹೊರಸೋರುವ ವಿಕಿರಣದ ಅಂಶವೆಲ್ಲ ನೀರಿನಲ್ಲಿ ಬೆರೆತುಕೊಂಡಿರುವ ಸಾಧ್ಯತೆ ಇದ್ದಿತಾದ್ದರಿಂದ, ಈ ವಿಕಿರಣದ ಅಂಶವನ್ನು ನೀರಿನಿಂದ ಮೊದಲು ಬೇರ್ಪಡಿಸಬೇಕಿತ್ತು. ಯಾಕೆಂದರೆ, ಹರಿದು ಹೋಗುವ ನೀರಿನಿಂದ ವಿಕಿರಣದ ಅಂಶ ವಾತಾವರಣದಲ್ಲಿ ಬೆರೆತು ಗಂಭೀರ ಸಮಸ್ಯೆಗೆ ನಾಂದಿಯಾಗುವದನ್ನು ತಪ್ಪಿಸಬೇಕಿತ್ತು. ಈ ದಿಶೆಯಲ್ಲಿ ತಜ್ಞರು ಪ್ರಯತ್ನ ನಡೆಸಿದ್ದರು.

ಈ ದುರಂತದಲ್ಲಿ ಕೆಲಸದ ಮೇಲಿದ್ದ ಇಬ್ಬರು ಸಿಬ್ಬಂದಿಯವರು ಸಾವನ್ನಪ್ಪಿದರು. ಒಬ್ಬ ಸುಟ್ಟ ಗಾಯಗಳಿಂದ, ಇನ್ನೊಬ್ಬ ಆಘಾತದಿಂದ. ಅಲ್ಲದೆ ನಂತರ ವಿಕಿರಣದ ತೊಂದರೆಗಳಿಂದ ೨೮ ಜನ ಸತ್ತರು. ಸುಮಾರು ೨೯೯ ಜನ ವಿಕಿರಣದ ಪರಿಣಾಮದಿಂದ ಆಸ್ಪತ್ರೆಯನ್ನು ಸೇರಬೇಕಾಯಿತು. ಅವರಲ್ಲಿ ನೂರಕ್ಕಿಂತ ಹೆಚ್ಚು ಜನರನ್ನು ಏಪ್ರಿಲ್ ೨೭ ರಂದು ಹೆಚ್ಚಿನ ವೈದ್ಯಕೀಯ ತಪಾಸಣೆಗಾಗಿ ಮಾಸ್ಕೋ ಆಸ್ಪತ್ರೆಗಳಿಗೆ ಸೇರಿಸಲಾಯಿತು. ಇದಲ್ಲದೇ ಚೆರ್ನೋಬಿಲ್ ಪಟ್ಟಣದ ಉಳಿದೆಲ್ಲ ನಿವಾಸಿಗಳನ್ನು ಅವರಲ್ಲಿ ವಿಕಿರಣದಿಂದಾದ ಆಂತರಿಕ ನ್ಯೂನ್ಯತೆಗಳೇನಾದರೂ ಕಂಡುಬರುವವೇ ಎಂಬ ಬಗ್ಗೆ ವಿವರವಾದ ವೈದ್ಯಕೀಯ ಪರೀಕ್ಷೆಗಳಿಗೊಳಪಡಿಸಲಾಯಿತು. ಲಕ್ಷಣ ಕಂಡುಬಂದವರನ್ನು ಒಂದೇ ದಿನದಲ್ಲಿ ಹೆಚ್ಚಿನ ಶುಶ್ರೂಷೆಗೆ ಕೀವ್ ನಗರದಲ್ಲಿರುವ ರೊಂಟಜನ್ ವಿಕಿರಣಶಾಸ್ತ್ರ ಸಂಶೋಧನಾ ಸಂಸ್ಥೆಗೆ ಕಳುಹಿಸುವ ಏರ್ಪಾಡು ಮಾಡಲಾಯಿತು.

ದೇಶದ ಉನ್ನತ ಅಧಿಕಾರಿಗಳೆಲ್ಲರೂ ದುರಂತದ ಸ್ಥಿತಿಗತಿಗಳನ್ನು ಅವಲೋಕಿಸಿದರು. ವಿಕಿರಣ ಶಾಸ್ತ್ರದಲ್ಲಿ ತಜ್ಞರನ್ನು ಆಮಂತ್ರಿಸಿ ಸುರಕ್ಷಿತತೆಯ ಬಗ್ಗೆ ಚರ್ಚಿಸಲಾಯಿತು. ಅಂತಾರಾಷ್ಟ್ರೀಯ ಅಣುಶಕ್ತಿ ನಿಯೋಗದ ಡೈರೆಕ್ಟರ್ ಜನರಲ್ಲರಾದ ಹನ್ಸ್ ಬ್ಲಿಕ್ಸ್ ಅವರು ಸೋವಿಯತ್ ದೇಶದ ಆಮಂತ್ರಣದ ಮೇರೆಗೆ ಬಂದು ಪರಿಸ್ಥಿತಿಯನ್ನು ಪರಿಶೀಲಿಸಿದರು. ಅಮೇರಿಕದ ಪ್ರೊಫೆಸರ್ ಗಾಲೇ ಹಾಗೂ ತಾರಾಸಾಕಿ ಅವರು ವಿಕಿರಣ ಪೀಡಿತರ ವೈದ್ಯಕೀಯ ಪರೀಕ್ಷೆ ಕೈಕೊಂಡರು. ದುರಂತ ಸಂಭವಿಸಿದ ದಿನ ಸುತ್ತ ಮುತ್ತ ಪ್ರದೇಶಗಳಲ್ಲಿ ಅತೀ ಹೆಚ್ಚಿನ ಪ್ರಮಾಣ (೧೦ ರಿಂದ ೧೫ ಮಿಲಿ ರೊಂಟಜನ್‌ಗಳು)ದ ವಿಕಿರಣವನ್ನು ಪತ್ತೆಮಾಡಲಾಗಿತ್ತು. ಮೇ ಐದರಂದು, ಅಂದರೆ ಪ್ರಮಾದ ಸಂಭವಿಸಿದ ೧೦ ದಿನಗಳ ನಂತರ ವಾತಾವರಣದಲ್ಲಿ ವಿಕಿರಣದ

ಪ್ರಮಾಣ ೧೯ ಕ್ಯೂರಿಗಳು ಕಡಿಮೆಯಾದದ್ದು ಕಂಡುಬಂದಿತು. ಅಣುಸ್ಥಾವರದ ದೂರ ಯುಕ್ರೇನಿಯಾ ಪ್ರದೇಶದ ವಿವಿಧ ಪಟ್ಟಣಗಳ, ಜನವಸತಿ ಪ್ರದೇಶಗಳ ಸುತ್ತ ವಾತಾವರಣದಲ್ಲಿರಬಹುದೆಂದು ಶಂಕಿಸಿದ ವಿಕರಣದ ಅಂಶದ ಪ್ರಮಾಣವನ್ನು ಕಂಡುಹಿಡಿಯುವ ಪ್ರಯತ್ನ-ಗಳು ಮುಂದುವರೆದಿವೆ. ವಿಕಿರಣದ ಅಂಶ ಉಳಿಯದಂತೆ ರಸ್ತೆಗಳನ್ನು ಪ್ರತಿದಿನ ತೊಳೆ-ಯುವುದು, ಆಹಾರ ಪದಾರ್ಥಗಳೆಲ್ಲವನ್ನೂ ಪರೀಕ್ಷೆಗೊಳಪಡಿಸುವುದು ಹಾಗೂ ಪ್ರಿಪೆಟ್ ನದಿ ದಂಡೆಗುಂಟ ಇರುವ ಊರು, ಜನವಸತಿಗಳಿಗೆ ನೀರಿನಲ್ಲಿ ಬೆರೆತ ವಿಕಿರಣದ ಅಂಶದ ಪರಿಣಾಮ ವಾಗದಂತೆ ಎಲ್ಲ ಮುಂಜಾಗರೂಕತೆಯ ಕ್ರಮ-ಗಳನ್ನು ಸೋವಿಯತ್ ಸರಕಾರ ಕೈಕೊಂಡಿದೆ. ಈಗ ಯುಕ್ರೇನಿಯಾ ಪ್ರದೇಶದ ಗಾಳಿ ಹಾಗೂ ನೀರು ಸುರಕ್ಷಿತವಾಗಿದೆ.

ರಶಿಯದಲ್ಲಿ ಇಂಥ ಆಕಸ್ಮಿಕ ಹಿಂದೆಂದೂ ನಡೆದಿಲ್ಲ. ಚೆರ್ನೋಬಿಲ್ ಪ್ರಮಾದ ಬಹು ದುಃಖಕರ ಘಟನೆ. ದುರ್ಘಟನೆಯನ್ನು ಸಮೀಕ್ಷಿಸಿದ ನಿಯೋಗವು, "ಈ ಘಟನೆ ಗಣನೆಗೆ ಬಾರ-ದಷ್ಟು ಸೂಕ್ಷ್ಮವಾದ ಯಾವುದೊ ಲೋಪದಿಂದ ಸಂಭವಿಸಿದೆ, ಕೇವಲ ಆಳವಾದ ವೈಜ್ಞಾನಿಕ ಹಾಗೂ ತಾಂತ್ರಿಕ ಅಧ್ಯಯನದ ನಂತರವೇ ಈ ದುರಂತದ ಕಾರಣವನ್ನು ಕಂಡುಹಿಡಿಯುವದು ಸಾಧ್ಯ" ಎಂದು ಅಭಿಪ್ರಾಯ ಪಟ್ಟಿರುವದು. ಅಣು ರಿಯಾಕ್ಟರಿನ ರಚನೆ, ವಿನ್ಯಾಸ, ತಾಂತ್ರಿಕ ಜೋಡಣೆ, ಸುರಕ್ಷಾ ವ್ಯವಸ್ಥೆ ಮುಂತಾದವು ಗಳೆಲ್ಲ ಅಂತಾರಾಷ್ಟ್ರೀಯ ಮಟ್ಟಕ್ಕೆ ಸಮನಾ-ಗಿಯೇ ಇವೆಯಾದ್ದರಿಂದ ದುರಂತ ಯಾವುದೋ ಕಲ್ಪನೆಗೆ ಎಟುಕದ, ಗಣನೆಗೆ ಬಾರದ ಅತಿ ಸೂಕ್ಷ್ಮ ಲೋಪಗಳಿಂದ ಆಗಿರಲು ಸಾಧ್ಯ ಎಂಬುದು ಈ ನಿಯೋಗದ ಅಭಿಪ್ರಾಯ.

ಯುರೋಪಿನ ಅನೇಕ ರಾಷ್ಟ್ರಗಳಲ್ಲಿ ೧೯೫೬ ರಿಂದ ಈಚೆಗೆ ವಿದ್ಯುತ್ ಉತ್ಪಾದನೆಯ ಸಲುವಾಗಿ ಅಣುಸ್ಥಾವರಗಳು ಬೆಳೆದವು. ಇಂದು ೩೬ ರಾಷ್ಟ್ರಗಳಲ್ಲಿ ೩೦೦ ಕ್ಕೂ ಹೆಚ್ಚು ಅಣು ವಿದ್ಯುತ್ ಸ್ಥಾವರಗಳು ಕಾರ್ಯವಾಡುತ್ತಿವೆ. ವಿಕಿರಣ ದುರಂತ ನಡೆದದ್ದು ಸೋವಿ-ಯತ್ ದೇಶದಲ್ಲಿ ಒಂದೇ ಅಲ್ಲ. ವಿವಾದ ರಹಿತ ಅಂಕಿ ಸಂಖ್ಯೆಗಳ ಮೇರೆಗೆ ೧೯೭೧ ರಿಂದ ೧೯೮೪ರ ಮಧ್ಯದಲ್ಲಿ ೧೪ ದೇಶಗಳಲ್ಲಿ ಇಂಥ ಒಟ್ಟು ೧೫೧ ದುರ್ಘಟನೆಗಳು ನಡೆದಿದ್ದು, ಇವುಗಳಲ್ಲಿ ಐದು ದುರಂತಗಳು ಅಮೇರಿಕದಲ್ಲಿ ಸಂಭವಿಸಿವೆ. ಅಣು ಶಕ್ತಿಯ ಬಗೆಗಿನ ಜ್ಞಾನ ಹಾಗೂ ಪರಿ-ಜ್ಞಾನ ಇನ್ನೂ ಹೆಚ್ಚಬೇಕು. ಇನ್ನೂ ಹೆಚ್ಚಿನ ಸುರಕ್ಷತೆಯನ್ನು ಹೇಗೆ ಕಾಯ್ದುಕೊಳ್ಳಬೇಕು ಎಂಬುದರ ಬಗ್ಗೆ ಇಂಥ ದುರ್ಘಟನೆಗಳು ಉತ್ತಮ ಪಾಠ ಕಲಿಸುತ್ತವೆ.

ಜಗತ್ತು ೨೧ನೇ ಶತಕದ ಹೊಸ್ತಿಲಲ್ಲಿದೆ. ಅಣುಶಕ್ತಿ ಅವಲಂಬಿತ ಉದ್ಯಮಗಳಿಗೆ ಬರವಿಲ್ಲ. ಮುಂಬರುವ ದಿನಗಳಲ್ಲಿ ಅಣುಶಕ್ತಿ ಉಪ-ಯೋಗಕ್ಕೆ ಇನ್ನೂ ಹೆಚ್ಚಿನ ಮಹತ್ವ ಬರುತ್ತದೆ. ವಿಕಿರಣದ ಆಕಸ್ಮಿಕ ಆಘಾತಕ್ಕೂ ಉದ್ದೇಶ ಪೂರಿತ ಅಣುಸ್ಫೋಟಕ್ಕೂ ಬಹಳಷ್ಟು ವ್ಯತ್ಯಾಸ ಇದೆ. ಅಣುಸ್ಥಾವರವನ್ನು ಪ್ರಾರಂಭಿಸಿ, ನಡೆಸಿ-ಕೊಂಡು, ಮುಂದುವರೆಸಿಕೊಂಡು ಹೋಗುವದು ಆರ್ಥಿಕವಾಗಿ, ತಾಂತ್ರಿಕತೆ ಅಲ್ಲದೇ ಸುರಕ್ಷಾ ವ್ಯವಸ್ಥೆಯನ್ನು ಕಾಪಾಡಿಕೊಂಡು ಹೋಗುವ ದೃಷ್ಟಿಯಿಂದ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅಷ್ಟೊಂದು ಸುಲಭವಾದದ್ದಲ್ಲ. ಅಣು ವಿದಳನ ದಿಂದ ವಿದ್ಯುತ್ ಉತ್ಪಾದನೆಯ ಎಲ್ಲ ಹಂತ-ಗಳಲ್ಲೂ ಪ್ರಮಾದ, ದುರ್ಘಟನೆಗಳಾಗುವ ಸಾಧ್ಯತೆ ಇವೆ. ಯಾವುದೇ ಹಂತದಲ್ಲಿ ತುಸು ಲೋಪವಾದರೂ ಅಪಾರ ಧನಹಾನಿ, ಪ್ರಾಣ-ಹಾನಿ ಹಾಗೂ ಪರಿಸರ ಹಾನಿ ಉಂಟಾಗುವುದ ರಲ್ಲಿ ಸಂದೇಹವಿಲ್ಲ. ರಶಿಯದಲ್ಲಾದ ವಿಕಿರಣ ದುರಂತವು ಫಿನ್‌ಲ್ಯಾಂಡ್, ಸ್ವೀಡನ್ ಹಾಗೂ ಡೆನ್ಮಾರ್ಕ್‌ವರೆಗೂ ವಾತಾವರಣವನ್ನು ಕಲುಷಿತ-ಗೊಳಿಸಿದೆ ಎಂದು ಸ್ಟಾಕ್‌ಹೋಂ ವರದಿ ಮಾಡಿದೆ. ಸಾವಿರ ಚದರ ಕಿಲೋಮೀಟರು

ವಿಸ್ತೀರ್ಣದಲ್ಲಿ ವಿಕಿರಣದಿಂದ ಪರಿಸರ ಕಲುಷಿತ-ಗೊಂಡು ರಶಿಯದ ಆರ್ಥಿಕರಂಗಕ್ಕೆ ಇಪ್ಪತ್ತು ಲಕ್ಷ ರೂಬಲ್ ನಷ್ಟ ಹಣ ನಷ್ಟವಾಯಿತು ಎಂಬುದು ಅಣು ವಿದ್ಯುತ್ತಿನಲ್ಲಿ ಆಸಕ್ತಿ ಇರುವ ನಮ್ಮಂಥ ಅಭಿವೃದ್ಧಿಶೀಲ ದೇಶಗಳು ಗಮನಿಸ ಬೇಕು. ನಮ್ಮ ದೇಶದಲ್ಲಿ ಈಗಾಗಲೇ ಕೆಲ ಅಣು ಸ್ಥಾವರಗಳು ಕಾರ್ಯ ನಿರ್ವಹಿಸುತ್ತವೆ. ದೇಶ ದಲ್ಲಿ ಮುಂಬರುವ ೧೫-೨೦ ವರ್ಷಗಳಲ್ಲಿ ಇನ್ನೂ ೨೨ ಅಣು ವಿದ್ಯುತ್ ಕೇಂದ್ರಗಳನ್ನು ಪ್ರಾರಂಭಿ ಸುವ ಯೋಜನೆ ಭಾರತ ಸರಕಾರದ ಪರಿಶೀಲನೆ ಯಲ್ಲಿದೆ. ಇದಕ್ಕೆ ತಗಲುವ ವೆಚ್ಚ ೧೫,೦೦೦ದಿಂದ ೨೦,೦೦೦ ಕೋಟಿ ರೂಪಾಯಿಗಳು ಎಂದು ಅಂದಾಜು ಮಾಡಲಾಗಿದೆ. ಅಣು ಸ್ಥಾವರವನ್ನು ಪ್ರಾರಂಭಿಸುವದೆಂದರೆ ಅಪಾಯ, ಅಪಘಾತಗಳ ಸರಣಿಯನ್ನೇ ಆಹ್ವಾನಿಸಿದಂತೆ. ಭೂಮಿಯಿಂದ ಯುರೆನಿಯುಂ ಅದಿರನ್ನು ತೆಗೆದು ಸಂಶ್ಲೇಷಿಸುವುವ ರಿಂದ ಹಿಡಿದು, ವಿದ್ಯುತ್ ಉತ್ಪಾದನಾ ಘಟಕಕ್ಕೆ ತಂದು ಆಸ್ಫೋಟಿಸಿ ವಿದ್ಯುತ್ತನ್ನು ಹುಟ್ಟಿಸು ವಾಗ, ರವಾನಿಸುವಾಗ, ಆಸ್ಫೋಟಾನಂತರ ಉಳಿಯುವ ಹುಡಿಯನ್ನು ರಕ್ಷಿಸಿ ಶೇಖರಿಸಿಡು ವಾಗ, ಹೀಗೆ ಎಲ್ಲ ಹಂತಗಳಲ್ಲೂ ಅಪಾಯದ ಸಂಭವ ಇದ್ದೇ ಇದೆ. ಇಂಥ ಘಟಕಗಳಲ್ಲಿ ದುಡಿ ಯುವವರ ಜೀವನವೂ ಅಪಾಯದಿಂದ ಕೂಡಿದೆ. ಕೆಲಸಗಾರರಲ್ಲಿ ವಿಕಿರಣದಿಂದಾಗುವ ನ್ಯೂನತೆ ಗಳು, ವಿಕೃತ ಮಕ್ಕಳ ಜನನ, ರಕ್ತ ಕ್ಯಾನ್ಸರಿನ ಸಂಭವ ಮುಂತಾದ ತೊಂದರೆಗಳು ಸರ್ವೇ ಸಾಮಾನ್ಯ. ೧೯೪೫ರ ಆಗಸ್ಟ್ ಆರು ಹಾಗೂ ಒಂಬತ್ತನೇ ದಿನದಂದು ಜಪಾನದ ಹಿರೋಷಿಮಾ ಹಾಗೂ ನಾಗಾಸಾಕಿಯ ಮೇಲೆ ನಡೆದ ಅಣು ಬಾಂಬ್ ಸ್ಫೋಟದಿಂದ ಒಂದು ಲಕ್ಷ ಎಂಬತ್ತು ಸಾವಿರ ಜನ ನಿರ್ನಾಮವಾದದ್ದನ್ನು ಜಗತ್ತು ಮರೆಯಬಾರದು. ಈ ಎಲ್ಲ ದುರಂತಗಳ ಹಿನ್ನಲೆಯಲ್ಲಾದ ಸಾವು, ಆರ್ಥಿಕ ಹಾನಿಯ ಬಗ್ಗೆ ವಿವೇಚಿಸುವದು ಅವಶ್ಯ. ನಮ್ಮ ದೇಶದಲ್ಲಿಯ ತಾರಾಪುರ ಅಣು ಕೇಂದ್ರದ ಆಯುಷ್ಯ ೧೯೯೨ ರಲ್ಲಿ ಮುಗಿಯುತ್ತದೆ. ಅದನ್ನು ಸುರಕ್ಷಿತವಾಗಿ ಸಮಾಧಿಮಾಡುವ ವೆಚ್ಚ ಜನಸಾಮಾನ್ಯನ ವಿಚಾರಕ್ಕೆ ಎಟುಕದ್ದು. ಅಮೇರಿಕದಲ್ಲಿಯ ಅವಧಿ ಮುಗಿದ ಒಂದು ಅಣುಕೇಂದ್ರವನ್ನು ಸುರಕ್ಷಿತವಾಗಿ ಹೂಳುವ ವೆಚ್ಚ ಸುಮಾರು ೧೦೫,೬೦,೦೦,೦೦೦ ರೂಪಾಯಿಗಳು ಎಂದು ತಿಳಿದುಬಂದಿದೆ. ಬಡ ರಾಷ್ಟ್ರಗಳಿಗೆ ಇದು ಎಂಥ ಆರ್ಥಿಕ ಹೊರೆ! ಹಿಂದಿನ ಇತಿಹಾಸದಿಂದ ಇಂದಿನವರು ಪಾಠ ಕಲಿಯಬೇಕು. ದಕ್ಷಿಣ ಭಾರತದ ಎರಡನೆಯ ಅಣುಸ್ಥಾವರ ನಮ್ಮ ರಾಜ್ಯದ ಕಾರವಾರ ಜಿಲ್ಲೆಯ ಕೈಗಾದಲ್ಲಿ ಪ್ರಾರಂಭವಾಗುವ ಯೋಜನೆ ಇದೆ. ಸರಕಾರ ಈ ದಿಶೆಯಲ್ಲಿ ತುಂಬ ಉತ್ಸುಕವಾಗಿದೆ. ೧೯೯೪ರ ಹೊತ್ತಿಗೆ ಪ್ರಾರಂಭವಾಗಲಿರುವ ಈ ಘಟಕಕ್ಕೆ ಆಗಲೆ ೧೯ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದೆ. ದೇಶದ ವಿವಿಧ ಕಡೆಯಲ್ಲಿರುವ, ಈಗಾ ಗಲೇ ಕಾರ್ಯನಿರ್ವಹಿಸುತ್ತಿರುವ, ತಾರಾಪುರ, ಕಲ್ಪಾಕಂ, ರಾವತ್‌ಭಾಟಾ ಹಾಗೂ ಚಾದೂಗುಡ ಅಣುವಿದ್ಯುತ್ ಘಟಕಗಳನ್ನು ಸಂದೇಹ ನಿವಾರ-ಣೆಗೆ ಪ್ರತ್ಯಕ್ಷ ನೋಡಿಬರಲು ಸರಕಾರದ ವೆಚ್ಚ ದಲ್ಲಿ ೫ ಜನರ ಗುಂಪಿನ ಒಟ್ಟು ನಾಲ್ಕು ನಿಯೋಗ ಗಳನ್ನು ಕಳುಹಿಸುವ ನಿರ್ಧಾರವನ್ನು ಹಾಗೂ ವ್ಯವಸ್ಥೆಯನ್ನು ಕರ್ನಾಟಕ ಸರಕಾರವು ಇದೇ ವರ್ಷದ ಮಾರ್ಚ್ ೩೧ ರಂದು ಕೈಕೊಂಡಿದೆ. ಆದರೆ ಈ ನಿಯೋಗದಲ್ಲಿ ವಿಜ್ಞಾನಿಗಳು ಹಾಗೂ ಪರಿಸರ ತಜ್ಞರು ಇಲ್ಲವಾದ್ದರಿಂದ ಈ ಯೋಜನೆ ಇನ್ನೂ ಕಾರ್ಯಗತವಾಗಿಲ್ಲ. ಅಣು ಶಕ್ತಿಯ ಬಳಕೆಯು ಮುಂಬರುವ ವರ್ಷಗಳಲ್ಲಿ ಹೆಚ್ಚುವ ಬಗ್ಗೆ ಸಂದೇಹವಿಲ್ಲ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ, ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಬದಲು ಅಣುಶಕ್ತಿಯ ಉತ್ಪಾದನೆ ಎಷ್ಟು ಸೂಕ್ತ? ನಿಯಂತ್ರಿತ ಅಣುಶಕ್ತಿಯ ಬಳಕೆ ಯಿಂದ ಮಾನವನ ಏಳ್ಗೆಯಾದರೆ, ಅನಿಯಂತ್ರಿತ, ವಿವೇಚನಾರಹಿತ ಬಳಕೆ ಮಾನವ ಕುಲವನ್ನೇ ಅಳಿಸಿಹಾಕಬಲ್ಲ ದೈತ್ಯವಾಗುವುದರಲ್ಲಿ ಸಂದೇಹ ಇಲ್ಲ.

❁

# ಇಂಗ್ಲಿಷ್ ಹೇಗೆ ಬೆಳೆಯುತ್ತಿದೆ

ಖಜಾನೆ ಕೃಷ್ಣಮೂರ್ತಿ

ಕಳೆದ ವರ್ಷ ಜುಲೈ ತಿಂಗಳಲ್ಲಿ ಪ್ರಕಟವಾದ 'ಕಸ್ತೂರಿ' ಸಂಚಿಕೆಯಲ್ಲಿ ಶ್ರೀ ಮುರಾರಿ ಸಹಾಯಿಯವರ ಲೇಖನದ ಆಧಾರದ ಮೇಲೆ 'ಇಂಗ್ಲಿಷ್ ಹೇಗೆ ಬೆಳೆಯುತ್ತಿದೆ?' ಎಂಬ ಒಂದು ಲೇಖನವನ್ನು ನಮ್ಮ ಖಜಾನೆ ಮುರಳೀಧರ ಬರೆದಿದ್ದ. ತುಂಬ ಚೆನ್ನಾದ ವಿಚಾರಪರಿಪ್ಲುತ ಲೇಖನ ಅದು. ಆದರೆ ಕೊನೆಯಲ್ಲಿ "ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಬೆಳೆಯದಿರುವುದಕ್ಕೆ ಪ್ರಮುಖ ಕಾರಣ ಅವರು ಪರಂಪರಾನುಗತವಾಗಿ ಸಾರ್ವಭೌಮರ ಭಾಷೆಗೆ ಅಂಟಿಕೊಂಡಿದ್ದಾರೆ." ಎಂದೇನೋ ಬರೆದು ಇಂಗ್ಲಿಷರ ಮಡಿವಂತಿಕೆಯಿಂದಾಗಿ, ಅವರ ಸಂಕುಚಿತ ಮನೋವೃತ್ತಿಯಿಂದಾಗಿ ಆ ಭಾಷೆ ಬೆಳೆಯುತ್ತಿಲ್ಲ— ಎಂಬರ್ಥ ಧ್ವನಿಸಿರುವುದನ್ನು ನನ್ನ ಮನ ಒಪ್ಪಲಿಲ್ಲ.

ಮರುಸಂಚಿಕೆಯಲ್ಲೇ ಅದಕ್ಕೆ ಉತ್ತರ ರೂಪವಾಗಿ ಲೇಖನ ಕೊಡೋಣವೇ ಎನ್ನಿಸಿದರೂ ನನ್ನ ಅನಿಶ್ಚಿತ ಪರಿಸ್ಥಿತಿ— ಅಲೆದಾಟಗಳಿಂದಾಗಿ ಆ ಕೆಲಸ ಆಗದೇಹೋಯಿತು. ಆದರೂ ವಿಚಾರದ ಗುಂಗೀಹುಳು ನನ್ನ ತಲೆ ಕೊರೆವುದನ್ನು ನಡೆಸಿಯೇ ಇತ್ತು.

ಆಗಷ್ಟು ಈಗಷ್ಟು ಶಬ್ದ— ಸಂಗತಿಗಳನ್ನು ಸಂಗ್ರಹಿಸುತ್ತ, ಕರಡು ಕಾಗದಗಳ ಮೇಲೆ ಗೀಚುತ್ತಾ ಒಂದು ವರ್ಷ ಕಾಲಹರಣವಾಯಿತು. ಈಗ ಬರೆಯುತ್ತಿದ್ದೇನೆ. ಇದರಲ್ಲಿ ಬರೆದಿರುವ ಶಬ್ದಗಳಿಗಿಂತ, ಸಂಗತಿಗಳಿಗಿಂತ ಹೆಚ್ಚು ಕತೆ, ಉದಾಹರಣೆಗಳನ್ನು ಬಲ್ಲ ಮಹನೀಯರಿನ್ನೂ ಎಷ್ಟಿದ್ದಾರೋ, ಎಲ್ಲೆಲ್ಲಿದ್ದಾರೋ ತಿಳಿಯದು.

ಎಂದುರೋ ಮಹಾನುಭಾವುಲು!

ಅಂದರಿಕೀ ವಂದನಮು!

'ಅ' ಕಾರಕ್ಕೆ ಅಮ್ಮನೇ ಆದಿ.

ಮಕ್ಕಳು ಎದ್ದರೆ— ಬಿದ್ದರೆ, ಅತ್ತರೆ ಅವರ ಬಾಯಿಂದ ಮೊದಲು ಬರುವ ಶಬ್ದ 'ಅಮ್ಮಾ.' ಈಕೆ ಇಂಗ್ಲಿಷಿನಲ್ಲಿ ಮದರ್. ಸಂಸ್ಕೃತದ ಮಾತೃ ಇಂಗ್ಲಿಷರ ರೋಲಿಂಗ್ ನಾಲಗೆಯಲ್ಲಿ MOT-HER ಆಯಿತು. ಅಂತೆಯೇ ಸಂಸ್ಕೃತದ ಪಿತೃ Father ಆದದ್ದು!

ಅರಬ್ ಹಾಗೂ ಮುಸ್ಲಿಂ ರಾಷ್ಟ್ರಗಳಲ್ಲಿ ಬಳಕೆಯಲ್ಲಿರುವ ಶಬ್ದ ಬಿರಾದರ್— ಸಂಸ್ಕೃತದ ಭ್ರಾತೃ ಇಂಗ್ಲಿಷಿಗೆ ನುಸುಳಿ Brother ಆಗಿರಲಾರದೆ?

ಸಂಸ್ಕೃತದ 'ನ' ಇಂಗ್ಲಿಷಿನ 'No'! ಎಷ್ಟು ಹತ್ತಿರ! ಎಂತಹ ಬಾಂಧವ್ಯ?

ಪೆಟ್ರೋಲನ್ನು ನಮ್ಮವರು ಕಲ್ಲೆಣ್ಣೆ ಎಂದೂ ಕರೆಯುತ್ತಾರೆ. ಇದು ಹೇಗೆ ಬಂದಿದ್ದೀತು? ಪತ್ಥರ್ ಎಂಬುದು ಕಲ್ಲು ಎಂಬುದಕ್ಕೆ ಹಿಂದಿಯ ರೂಪಾಂತರ. ಕಲ್ಲಲ್ಲಿ ದೊರೆವ ಎಣ್ಣೆಯೇ ಕಲ್ಲೆಣ್ಣೆ.

ಕ್ರಿಸ್ತನ ಶಿಷ್ಯರಲ್ಲಿ ಪೀಟರ್ ಎಂಬಾತ ಮುಖ್ಯನಾದವನು. 'ಮಾರ್ಕನು ಬರೆದ ಸುವಾರ್ತೆ' 'ಯೋಹಾನನು ಬರೆದ ಸುವಾರ್ತೆ' ಎಂಬೆಲ್ಲ ಉಚಿತವಾಗಿ ಹಂಚುವ ಕ್ರೈಸ್ತರ ಪುಸ್ತಿಕೆಗಳಲ್ಲಿ ಈ ಪೀಟರನನ್ನು 'ಪೇತ್ರ' ಎಂದು ಬರೆಯುತ್ತಾರೆ.

ಪತ್ಥರ್— ಪೆತ್ತರ್— ಪೇತ್ರ್— ಪೀಟರ್!

ಪೀಟರ್ ಎಂದರೆ ಕಲ್ಲಿನಂತಹ ಮನುಷ್ಯ. ಪತ್ಥರ್‌ನಲ್ಲಿ ಜನಿಸಿದ ಎಣ್ಣೆ ಪತ್ಥರಾಯಿಲ್ ಪೆತ್ರಾಲ್— ಪೆಟ್ರೋಲ್ ಆಗಿರಲಾರದೆ?

ಇವಿಷ್ಟು ಸಂಸ್ಕೃತದಿಂದಾದರೆ ಗ್ರಿಕ್-ಲ್ಯಾಟಿನ್‌ಗಳಿಂದಲೂ ಲೆಕ್ಕವಿಲ್ಲದಷ್ಟು ಶಬ್ದಗಳನ್ನು ಎರವಲು ತಂದು ರೂಪಾಂತರಗೊಳಿಸಿ ಇಂಗ್ಲಿಷ್ ಭಾಷೆಯನ್ನು ಬೆಳೆಸಲಾಗಿದೆ.

ಸಸ್ಯಶಾಸ್ತ್ರ — ಪ್ರಾಣಿಶಾಸ್ತ್ರಗಳಲ್ಲಿ ಇದಕ್ಕೆ ಲೆಕ್ಕವಿಲ್ಲದಷ್ಟು ಉದಾಹರಣೆಗಳನ್ನು ಕೊಡಬಹುದು. (ನನ್ನ ಸೇವಾವಧಿಯ ಮೊದಲ ೧೪ ವರ್ಷ ನಾನು ಬೋಧಿಸಿದ್ದು ಬಯಾಲಜಿ ಕೆಮಿಸ್ಟ್ರಿಗಳು!)

ಲ್ಯಾಟಿನ್ ಭಾಷೆಯೋ ಗ್ರೀಕ್ ಭಾಷೆಯೋ ಮೂಲವಾದ ಶಬ್ದಗಳನ್ನು ಹೆಕ್ಕಿ ಕೊಂಚ ತಿರುಚಿ ಇಂಗ್ಲಿಷ್ ಮಾಡಿರುವುದಕ್ಕೆ ಬಯಾಲಜಿ, ಜೂಆಲಜಿ, ಬಾಟನಿ ಎಂಬ ಹೆಸರುಗಳೇ ಸಾಕ್ಷಿ. ಗ್ರೀಕಿನ ಬಯಸ್ (ಲೈಫ್) ಮತ್ತು ಲಾಗಸ್ (ಸೈನ್ಸ್) ಎಂಬೆರಡು ಶಬ್ದಗಳಿಂದ The Science of Life is BIOLOGY ಆಯಿತು. Zoon ಎಂಬ ಶಬ್ದಕ್ಕೆ (animal) ಪ್ರಾಣಿ ಎಂಬರ್ಥವಿದೆ. ಆದರಿಂದ Zoology ಬಂತು. Botane ಎಂದರೆ ಸಸ್ಯ (Herb) ಎಂದಾಗುತ್ತದೆ ಆದರಿಂದ Botany ಆಯಿತು!

ಎರೆಹುಳು ಜಿಗಣೆಗಳು ದ್ವಿಲಿಂಗ ಪ್ರಾಣಿಗಳು. ಇವನ್ನು ಲೈಂಗಿಕವಾಗಿ ಹರ್ಮಾಫ್ರಾಡೈಟ್ ಎಂದು ಕರೆಯಲಾಗುತ್ತದೆ. ಈ ಶಬ್ದ:— ಗ್ರೀಕ್ ಪುರಾಣದಲ್ಲಿ ಬರುವ ಹರ್ಮಿಸ್ (ಗಂಡು) ಮತ್ತು ಅಫ್ರೊಡೈಟಿಸ್ (ಹೆಣ್ಣು) ಎಂಬೆರಡು ದೇವತೆಗಳ ಹೆಸರನ್ನು ಕೂಡಿಸಿ Hermaphrodaite ಎಂದರು. ಅದರಂತೆ ಕೇಸರ ಮತ್ತು ಅಂಡಾಶಯವೆರಡನ್ನೂ ಹೊಂದಿರುವ ಪುಷ್ಪಗಳನ್ನು Hermaphrodait Flowers ಎಂದು ಕರೆದರು.

ಪ್ರಾಣಿಸಾಮ್ರಾಜ್ಯದಲ್ಲಿನ ಅಕಶೇರುಕ (Invertebrates-ಬೆನ್ನುಮೂಳೆ ಇಲ್ಲದ) ಪ್ರಾಣಿಗಳಲ್ಲಿ ಪೊಟ್ಟ ಮೊದಲಿನ Protozoa ದಲ್ಲಿ ವಾಲ್ವಾಕ್ಸ್ (VOLVOX) ಎಂಬ ಏಕಕಣ ದೇಹದ ಪ್ರಾಣಿಗಳ ಕಾಲನಿಯೊಂದಿದೆ. ಲಕ್ಷೋಪಲಕ್ಷ ಸಂಖ್ಯೆಯಲ್ಲಿರುವ ಈ ಪ್ರಾಣಿಗಳ ಸಂತಾನಕ್ರಮ ವಿಚಿತ್ರ. ಸ್ತ್ರೀ-ಪುರುಷ ಕಣಗಳ ಸಂಯೋಗವಿಲ್ಲದೇನೇ ಇವು ಸಹಸ್ರ ಮಡಿ-ಲಕ್ಷ ಮಡಿಯಲ್ಲಿ ದ್ವಿಗುಣಗೊಳ್ಳುತ್ತವೆ. ಇದೊಂದು ಪಿತೃರಹಿತ ಸಂತಾನಮಾರ್ಗ. ಇದಕ್ಕೆ ಪಿತೃ No. ಆದನ್ನು ಪಾರ್ಥೆನೋ (Partheno) ಜೆನೆಸಿಸ್ (ಸಂತಾನ) (Parthenogenesis. ಎಷ್ಟು ಸುಲಭವಾಗಿ ಈ ಶಬ್ದ ಸೃಷ್ಟಿಯಾಗಿಬಿಟ್ಟಿತು!) ಎಂದುಬಿಟ್ಟರು.

ಈ ಅಕಶೇರುಕ ಸಾಮ್ರಾಜ್ಯದಲ್ಲೇ ಮೇಲೇರುತ್ತ ಹೋದರೆ ಒಂದು ಘಟ್ಟದಲ್ಲಿ ಕೀಟಕ ವರ್ಗ ಬರುತ್ತದೆ. ಇದು ಇಂಗ್ಲಿಷಲ್ಲಿ ಆರ್ಥ್ರೋಪೋಡ. (Arthropoda) ಎಂದರೆ Joint footed animals (ಸಂಧಿಪದಿಗಳು). ಗ್ರೀಕಿನ Arthro (Joints) ಮತ್ತು poda (foot) ಸೇರಿದವು. ಸಂಸ್ಕೃತದ ಪಾದ-ಪೋಡ ಆಯಿತು. ಅವೆರಡೂ ಸೇರಿ ಆರ್ಥ್ರೋಪೋಡ ಸರಿಯೋ!

ಸೊಳ್ಳೆ ತಿಗಣೆ ಜೇಡ ಮೊದಲಾದ ಸಹಸ್ರ ಸಂಖ್ಯೆಯಲ್ಲಿರುವ ಈ ಕೀಟ ಸಾಮ್ರಾಜ್ಯದಲ್ಲಿ ಅರಾಕ್ನಿಡ (Arachnida) ಎಂಬ ಉಪವರ್ಗ ಹೊಂದಿದೆ. ನವಿರಾದ ನೂಲಿಂದ ನಯವಂಚಕ ಸುಂದರ ಬಲೆಯನ್ನು ನೇಯುವ ಜೇಡ ಈ ಉಪವರ್ಗದಲ್ಲಿದೆ. ಈ ಬಲೆ ಎಷ್ಟು ಅಂದವಾಗಿ ಕೇಂದ್ರ ಸೌಷ್ಠವ ಹೊಂದಿ ಜಿಯೋಮಿಟ್ರಿಕಲ್ ಆಗಿ ಬಿಸಿಲಲ್ಲಿ ಕಲವು ವೇಳೆ ಸಪ್ತವರ್ಣಗಳಿಂದ ಮಿಂಚುತ್ತಿರುತ್ತದೆ! ಇಷ್ಟು ನವಿರಾಗಿ ತುನೂ

ಒಂದರಿಂದಾಗಿ ಬಲೆ ಕಟ್ಟಿ ನೇಯುವುದನ್ನು ಅದಕ್ಕೆ ಯಾರು ಹೇಳಿಕೊಟ್ಟಿದ್ದಾರು!

ಗ್ರೀಕ್ ಪುರಾಣದಲ್ಲಿ ಬರುವ ಓರ್ವ ದೇವ-ಕನ್ನಿಕೆ ಅರಾಕ್ನೆ (Arachnae) ನೂಲುವುದರಲ್ಲಿ ನೇಯುವುದರಲ್ಲಿ ಅದ್ವಿತೀಯಳಾಗಿದ್ದಳು. ಆವಳೊಂದಿಗೆ ಸ್ಪರ್ಧಿಸಹೋಗಿ ಪ್ರಾಣವನ್ನು ಪಣವಾಗಿಟ್ಟು ಅದನ್ನು ಕಳೆದುಕೊಂಡವರು ಲೆಕ್ಕವಿಲ್ಲ. ನೂಲುವುದರಲ್ಲಿ ತನ್ನನ್ನು ಯಾರೂ ಮೀರಿಸಲಾರೆಂಬ ಅಹಮಿಕೆಯೊಂದೆಡೆಯಾದರೆ ಅಕಸ್ಮಾತ್ ಯಾರಾದರೂ ಸರಿದೊರೆಯಾಗಿ ಬಂದರೆ? ಎಂಬ ಹೊಟ್ಟೆಕಿಚ್ಚು ಕೂಡ ಆಕೆಗೆ! ಆದರೆ ಎಲ್ಲಾ ಬಿಟ್ಟು ಈ ಹಾಳು ಜೇಡ ಆಕೆಯೊಂದಿಗೆ ಸ್ಪರ್ಧೆಗೆ ಇಳಿದುದಲ್ಲದೆ ಗೆದ್ದೂ ಬಿಡಬೇಕೆ! Jealousy thy name is woman! ಹೊಟ್ಟೆಕಿಚ್ಚಿನ ಆ ಹೆಂಗಸು ತಾನು ನೂಲಲು-ನೇಯಲು ಇರಿಸಿಕೊಂಡಿದ್ದ ಮೊನಚಾದ ಕಬ್ಬಿಣದ ಕಡ್ಡಿಯೊಂದರಿಂದ ಆ ಕೀಟವನ್ನು ಚುಚ್ಚಿ ಕೊಂದುಹಾಕಿದಳು. ಆಮೇಲೇನೋ ಶಾಪಗ್ರಸ್ತಳಾದಳಂತೆ! ಅದರ ಗೋಜು ನಮಗೆ ಬೇಕಿಲ್ಲ. ಆದರೆ ಆ ಅರಾಕ್ನೆಯಿಂದಾಗಿ ಜೇಡಗಳ ಗುಂಪಿಗೆ ಅರಾಕ್ನಿಡ ಎಂಬ ಹೆಸರು ದೊರೆತದ್ದೇ ಬಂತು ಅಷ್ಟೆ!

ಇಂತಹುದೇ ಆದ ಕೀಟಗಳ ಇನ್ನೊಂದು ಗುಂಪಲ್ಲಿ ಜಿಜಿಫಸ್. (Zizyphus) ಎಂಬ ಇನ್ನೊಂದು ಹುಪ್ಪಟೆ ಇದೆ. ಇದು ನಮ್ಮ ಕನ್ನಡದ ಸಗಣಿ ಹುಳು. ಸಗಣಿ ಅಥವಾ ಮಲದ ಚಿಕ್ಕ ಚಿಕ್ಕ ಉಂಡೆಗಳನ್ನು ಮಾಡಿ ತನ್ನ ಹಿಂಗಾಲುಗಳಿಂದ ದೂಡುತ್ತ ಉರುಳಿಸಿಕೊಂಡು ಹೋಗುವುದನ್ನು ನೀವು ನೋಡಬೇಕು. ನಡುವಲ್ಲಿ ಗುಡ್ಡವೋ ಏರಿಯೋ ಬಂದರೆ ಇದು ಆ ಉಂಡೆಯನ್ನು ಅದೇ ರೀತಿ ಹಿಂದು ಮುಂದಾಗಿಯೇ ಉರುಳಿಸಿಕೊಂಡು ಹೋಗುತ್ತ ಆ ಏರನ್ನು ಸಾಗಿಸುತ್ತದೆ. ಆದರೆ ಅದು ಅಷ್ಟು ಸಣ್ಣ ಪ್ರಾಣಿಗೆ ಕಷ್ಟದ ಕೆಲಸ. ಹಾಗೆ ದೂಡುವಾಗ ಭಾರ ಹೆಚ್ಚಿ, ಆಯ ತಪ್ಪಿ ಆ ಉಂಡೆ ಅದರ ಮೇಲೆಯೋ ಬಿದ್ದು ಕೆಳಗುರುಳಿದರೆ ಅದು ಮತ್ತೆ ಮತ್ತೆ ಅದನ್ನು ದೂಡಿಕೊಂಡು ಮೇಲೆ ಹೋಗುವುದನ್ನು ನೋಡಿದರೆ

If at first you dont succeed,
Try, Try, Try again.
Try until you do succeed,
Try, Try, Try again- ಎಂದು ಯಾರೋ ಅದಕ್ಕೆ ಹೇಳುತ್ತಿದ್ದಂತೆ, ಅದು ಧೈರ್ಯ ಸ್ಥೈರ್ಯ ಕಳಕೊಳ್ಳದೆ— 'ಮರಳಿ ಯತ್ನವ ಮಾಡು' ನಡೆಸುತ್ತಿರುವಂತೆ ಅನ್ನಿಸ-ದಿರದು.

ಅದು ಸರಿ. ಅದಕ್ಕೆ Zizyphus ಎಂಬ ಹೆಸರು ಬಂದದ್ದಾದರೂ ಏಕೆ? ಹೇಗೆ?

ಮತ್ತೆ ಗ್ರೀಕ್ ಪುರಾಣವೇ ಇದಕ್ಕೆ ಆಧಾರ; ಆಕರ. ಅಲ್ಲಿ ಜಿಜಿಫಸ್ ಎಂಬ ಒಬ್ಬ-ರಾಜನೋ ದೇವಪುರುಷನೋ—ಮತ್ತೊಬ್ಬ ದೇವತೆಯ ಕೋಪ–ಶಾಪಗಳಿಗೆ ತುತ್ತಾಗಿ ಪರ್ವತವೊಂದರ ಬುಡದಿಂದ ದೊಡ್ಡ ಬಂಡೆಯೊಂದನ್ನು ಮೇಲಿನ ವರೆಗೆ ದಬ್ಬಿಕೊಂಡು ಹೋಗಬೇಕಾದಂತಹ ಶಾಪಕ್ಕೆ ಗುರಿಯಾದ. ಅವನು ತುಂಬ ಕಷ್ಟಪಟ್ಟು ಬಂಡೆಯನ್ನು ಮೇಲಕ್ಕೆ ದೂಡಿಕೊಂಡು ಹೋದರೆ ಅದು ಒಂದಲ್ಲ ಒಂದು ಕಾರಣದಿಂದ ಆಯ ತಪ್ಪಿ ಅಲ್ಲಿಂದ ಕೆಳಗುರುಳಬೇಕು. ಅವನು ಆ ಅರ್ಥವಿಲ್ಲದ ಕೆಲಸಕ್ಕೆ ಮತ್ತೆ ಬುಡದಿಂದ ತೊಡಗಬೇಕು! ಅವನ ಹೆಸರೇ ಆ ಕೀಟಕದ ಹೆಸರಿಗೆ ಮೂಲ!

ಮಾನವ ಕುಲವನ್ನು 'ಮಮ್ಮೇಲಿಯಾ' ಎಂದು ಕರೆದದ್ದು ಹೀಗೇನೇ! ಮಮ್ಮ ಎಂದರೆ ಅಮ್ಮ. ಈ ಕುಲದಲ್ಲಿ ಜನಿಸಿದ ಸಂತಾನಕ್ಕೆ ಮಾತೃ ಪೋಷಣೆ ಪ್ರಧಾನವಾದದ್ದು. ಆ ಸಂತಾನಕ್ಕೆ ಹಾಲೂಡಿಸಲು ಇರುವ ಸ್ತನಗಳಿಂದಾಗಿ ಇವು ಸಸ್ತನಿಗಳಾದುವು. ಸ್ತನಗಳಿಗೆ mammary glands ಎನ್ನುತ್ತಾರೆ. ಇಂಗ್ಲಿಷಲ್ಲಿ ಅದನ್ನು ಹೋಲಿದ ಈ ಪ್ರಾಣಿಸಂಕುಲ

Mammalia ಆಯಿತು!

ವ್ಯಕ್ತಿಗಳ ಹೆಸರು ಕೂಡ ಹೇಗೆ ಭಾಷೆಗೆ ನುಗ್ಗಿ ಅದರಿಂದಲೂ ಹೇಗೆ ಇಂಗ್ಲಿಷ್ ಸುಗ್ಗಿ ಹೊಡೆಯಿತು ಎಂಬುದಕ್ಕೆ ನಮ್ಮ ನೆರೆ ನಾಡು–ಮದರಾಸಿನಿಂದ ಪ್ರಕಟವಾಗುವ Wisdom ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾದ ಕೆಲವು ಸಂಗತಿಗಳು ಸಾಕ್ಷಿ.

ಕ್ರಿಸ್ತ– ಬುದ್ಧ– ಗಾಂಧಿ– ಹಿಟ್ಲರ್– ಮಾವೋ ಮೊದಲಾದ ಪ್ರಖ್ಯಾತ ಅಥವಾ ಕುಖ್ಯಾತ ವ್ಯಕ್ತಿಗಳ ಹೆಸರುಗಳು 'ಇಸಮ್' ಎಂಬ ಎರಡಕ್ಷರದ ಬಾಲ ಅಂಟಿಸಿಕೊಂಡು ಕ್ರಿಶ್ಚಿಯಾನಿಸಂ, ಬುದ್ಧಿಸಂ, ಗಾಂಧಿಯಿಸಂ, ಮಾವೋ–ಇಸಂ, ಹಿಟ್ಲರಿಸಂ ಆಗಿ ಇಂಗ್ಲಿಷ್ ಶಬ್ದಭಾಂಡಾರವನ್ನು ಸೇರಿ ಹೋದುವು.

ಚಳಿಗಾಲ ಆರಂಭವಾದೊಡನೆಯೇ ಹೊರಬರುವ ಸ್ವೆಟರ್ ಅನ್ನು ಕಾರ್ಡಿಗನ್ ಎಂದೂ ಕರೆಯಲಾಗುತ್ತದೆ. ಇಂಗ್ಲೆಂಡಿನ ಒಬ್ಬ–ಶ್ರೀಮಂತ–Earl of Cardigan– ಅಂತಹುದನ್ನು ಬಹುವಾಗಿ ಬಳಸುತ್ತಿದ್ದ. ಅಂದು ಮೊದಲುಗೊಂಡು ಅದಕ್ಕೆ ಅವನ ಹೆಸರೇ ಶಾಶ್ವತವಾಯಿತು.

ಅದರಂತೆಯೇ ಇನ್ನೊಬ್ಬ Earl of Sandwich ತಾನು ತಿನ್ನುತ್ತಿದ್ದ ಬ್ರೆಡ್ ಚೂರುಗಳ ನಡುವೆ, ಟೊಮೆಟೋ, ಸೌತೇಕಾಯಿಗಳ ಸೀಳುಗಳನ್ನಿರಿಸಿ ತಿನ್ನುತ್ತಿದ್ದ. ಅದನ್ನು ಕಂಡ ಜನ ಅಂತಹುದೇ ತಿನಿಸು ತಯಾರಿಸಿ 'ಸ್ಯಾಂಡ್‌ವಿಚ್' ಮಾಡಿದರು; ತಿಂದರು.

ವೆಲಿಂಗ್‌ಟನ್ನಿನ ಡ್ಯೂಕನೊಬ್ಬ ಬಳಸುತ್ತಿದ್ದ ಮಾದರಿಯ ಪಾದರಕ್ಷೆ(ಬೂಟ್ಸ್)ಯನ್ನು ವೆಲಿಂಗ್‌ಟನ್ಸ್ ಎಂದು ಕರೆದರು.

ಫ್ರಾನ್ಸಿನ ಚಕ್ರವರ್ತಿ ನೆಪೋಲಿಯನ್ನನ ಬಳಿ ಅತಿ ಪ್ರತಿಷ್ಠೆ. ಹಾಗೂ ಕುರುಡು ದೇಶಾಭಿಮಾನಗಳಿಗೆ ಪಕ್ಕಾದ ನಿಕಲಸ್ ಚಾವಿನ್ ಎಂಬ ಸೈನಿಕನಿದ್ದ. ಅಂತಹುದೇ ಸ್ವಭಾವವನ್ನು ಹೊಂದಿರುವ ಜನರನ್ನು ಚಾವಿನಿಸ್ಟ್ಸ್ ಎಂದೂ ಆ ಸ್ವಭಾವವನ್ನು ಚಾವಿನಿಸಂ ಎಂದೂ ಕರೆದರು.

ಹದಿನಾಲ್ಕನೆಯ ಲೂಯಿಯ ಬಳಿ ಶಿಸ್ತು–ಕಟ್ಟುನಿಟ್ಟು–ನಿಯಮಗಳಿಗೆ ಬದ್ಧನಾದ ಮಾರ್ಟಿನೆಟ್ ಎಂಬ ಅಧಿಕಾರಿಯಿದ್ದ. ಅವನಿಂದ ಇಂಗ್ಲಿಷಿಗೆ ಮಾರ್ಟಿನೆಟ್ ಎಂಬ ಅನ್ವರ್ಥನಾಮ ಬಳುವಳಿಯಾಗಿ ಬಂತು.

ಫ್ರಾನ್ಸಿನಲ್ಲಿದ್ದ ಮಾರ್ಕ್ವಿಸ್– ದ– ಸೇಡ್ ಎಂಬ ಅಧಿಕಾರಿ ಇತರರ ಮೇಲೆ ತೋರುತ್ತಿದ್ದ ಕ್ರೌರ್ಯ, ಅದರಿಂದ ಅನುಭವಿಸುತ್ತಿದ್ದ ಆನಂದಕ್ಕೆ ಹೆಸರಾದವನು. ಅವನಿಂದಾಗಿ ಸ್ಯಾಡಿಸಂ (Sadism) ಎಂಬ ಶಬ್ದ ಇಂಗ್ಲಿಷಿನ ಬಳಕೆಗೆ ಬಂತು. ಅದನ್ನು ಹೊಂದಿದ್ದವರು Sadists ಆದರು.

ಅದರಂತೆ ಮಹಾವಿಜ್ಞಾನಿ ಲೂಯಿ ಪಾಶ್ಚರಸಿಂದಾಗಿ ಪಾಶ್ಚರೈಜೇಷನ್ ಬಂತು. ಫ್ರಾನ್ಸಿನ ಬೊಲೋನ (Bologna) ಪ್ರಾಂತದ ಲೂಯಿ ಗ್ಯಾಲ್‌ವನಿ ಎಂಬಾತ ಕಬ್ಬಿಣದ ಪದಾರ್ಥಗಳಿಗೆ ತುಕ್ಕು ಹಿಡಿಯದಂತೆ ಮಾಡಲು ಅನುಸರಿಸಿದ ಕ್ರಮ ಇಂಗ್ಲಿಷರ ಬಾಯಲ್ಲಿ ಗ್ಯಾಲ್ವನೈಜೇಷನ್ ಆಯಿತು.

ಐರ್ಲೆಂಡಲ್ಲಿ ಕ್ಯಾಪ್ಟನ್ ಬಾಯ್‌ಕಾಟ್ ಎಂಬವನನ್ನು ಒಮ್ಮೆ ಅವನ ನೆರೆಹೊರೆಯವರು ಬಹಿಷ್ಕರಿಸಿದರು. ಅಂದಿನಿಂದ ಆ ಕ್ರಮ "ಬಾಯ್‌ಕಾಟ್" ಆಯಿತು. ಈಗ ಜಗತ್ತಿನ ಎಲ್ಲ ಭಾಗಗಳ ಜನ, ತಮಗಾಗದವರನ್ನು ಹೀಗೆಯೇ ಸಲೀಸಾಗಿ ಬಾಯ್‌ಕಾಟ್ ಮಾಡುತ್ತಾರೆ.

ಈ ರೀತಿಯಲ್ಲಿ ಇಂಗ್ಲಿಷ್ ಭಾಷೆಯು ತನಗೆ ದೊರಕಿದ ಯಾವೊಂದು ಅವಕಾಶವನ್ನೂ ಬಿಡದೆ ಬೇರೆ ಬೇರೆ ಭಾಷೆಗಳಿಂದ ಅವುಗಳನ್ನು ಪಡೆದು ತನ್ನದಾಗಿಸಿಕೊಳ್ಳುತ್ತ ನಡೆದಿದೆ.

ಉರ್ದುವಿನ (ಹಿಂದೂಸ್ತಾನಿಯ) 'ಸಲಾಂ' ಎಂಬ ಶಬ್ದ ಇಂಗ್ಲಿಷ್ ಪದ್ಯದಲ್ಲಿ ಸುಲಭವಾಗಿ Salaamed ಎಂದು ಕ್ರಿಯಾಪದವಾಗಿ ಬಳ

ಸಲ್ಪಟ್ಟಿದೆ.

ಅದರಂತೆ "ಪಾಯಿಜಾಮ"

ಕವಿ ಡಿ. ಎಚ್: ಲಾರೆನ್ಸನ 'Snake' ಪದ್ಯದಲ್ಲಿ.

"On a hot hot day, and I, in pyjamas.

For the heat, to drink there" ಎಂದು ಬರೆದಿರುವುದನ್ನು ಕಾಣಬಹುದು.

ಮೋಟಾರ್ ಎಂಬ ನಾಮಪದಕ್ಕೆ 'ed' ಸೇರಿ: They motarred the distance ಎಂದು ಬರೆದರೂ ನಡೆದೀತು! ಅಂತಹ flexibility ಈ ಭಾಷೆಗೆ!

ಜವಾಹರ್‌ಲಾಲ್ ನೆಹರು ಬದುಕಿದ್ದ ಒಂದು ಕಾಲದ ಘಟನೆ. ತಮಗಾಗದವರನ್ನು ವಯೋಮಾನ ಮೀರಿದವರೆಂಬ ನೆಪ, ರಾಷ್ಟ್ರಕ್ಕೆ ಯುವ ರಕ್ತ ಒದಗಿಸಬೇಕೆಂಬ ನೆಪ ಹಾಕಿ, ಮನೆಗೆ ಕಳುಹಿಸಲೂ, ಎತ್ತಂಗಡಿ ಮಾಡಲೂ ಒಂದು ಯೋಜನೆ ಹುಟ್ಟು ಹಾಕಲಾಯಿತು. ಕಾಮರಾಜ್ ನಾಡರರು ಅದರ ಜನಕರು. ಅದೇ ಕಾಮರಾಜ್ ಪ್ಲಾನ್. ಅದರಿಂದಾಗಿ ಬಹು ಮಂದಿ ಹಿಂಜ್ರಾಪೋಲ್‌ಗಳು ಸ್ಥಾನಭ್ರಷ್ಟರಾದರು. Even Sri Morarji Desai was Kamarajed. ಇಂಗ್ಲಿಷ್ ಭಾಷೆಗೆ ಕಾಮರಾಜ್ಡ್ ಎಂಬ ಶಬ್ದ ದಕ್ಕಿತು! (ಕಾಂಗ್ರೆಸ್ ಮಾಡಿದರು ಎಂಬ ಶಬ್ದ ಆಮೇಲೆ ಬಂದದ್ದು!)

ಕೊನೆಯದಾಗಿ:

ಇಂಗ್ಲೆಂಡಿನಲ್ಲಿ ಈಗ ಎರಡು ದಶಕಗಳ ಹಿಂದೆ ನಡೆದ ಒಂದು ಘಟನೆ. ಈಗಿನ ತಲೆಮಾರಿನವರಿಗೆ ಅದು ತಿಳಿಯದು. ಆ ತಲೆಮಾರಿನವರೆಗೆ ಸರಿಯಾಗಿ ನೆನಪಿಲ್ಲ, ಮರವೆಯಾಗಿದೆ. Public memory is short.

ಹೆರಲ್ಡ್ ಮ್ಯಾಕ್‌ಮಿಲನ್ ಮಂತ್ರಿಮಂಡಲ ಅಸ್ತಿತ್ವದಲ್ಲಿದ್ದ ಕಾಲ ಅದು. ಅರುವತ್ತರ ದಶಕ. ಜಾನ್ ಪ್ರೊಫ್ಯೂಮೋ ಎಂಬಾತ ಯುದ್ಧಮಂತ್ರಿಯಾಗಿದ್ದ.

ಡಾ. ವಾರ್ಡ್ ಎಂಬೊಬ್ಬ ಅಯೋಗ್ಯ (perhaps a Ph.D. in Sexology and a professor in Pornography ಇರ



1.




2.

ಬೇಕು) ಒಂದು ವೇಶ್ಯಾವಾಟಿಕೆ ನಡೆಸುತ್ತಿದ್ದ. ಅಗಣಿತ ಸಂಖ್ಯೆಯಲ್ಲಿ, ದೇವಲೋಕದ ದುಬಾರಿ ವೇಶ್ಯೆಯರನ್ನೂ ಮೀರಿಸುವ ಅಪ್ಸರೆಯರಿಂದ ಕೂಡಿದ ಆ ವೇಶ್ಯಾವಾಟಿಕೆ ನಡೆಸುತ್ತಿದ್ದ ಚಟುವಟಿಕೆ ರಾಷ್ಟ್ರಘಾತುಕವೂ ಆಗಿತ್ತು. ಆದರಲ್ಲಿ ಕ್ರಿಸ್ಟೀನ್ ಕೀಲರ್ ಎಂಬಾಕೆ ಅತಿ ಚೆಲುವೆ. ಕಾಲಲ್ಲಿ ಪಾದರಕ್ಷೆ ಮತ್ತು ಕೊರಳಲ್ಲಿ ವಜ್ರಗಳನ್ನು ಕೂಡಿಸಿದ ಚರ್ಮದ ಕೊರಳು ಪಟ್ಟಿ ಮಾತ್ರ ಧರಿಸಿ ದಿಗಂಬರೆಯಾಗಿದ್ದ ಈಕೆಯನ್ನು ನಾಯಿಗಳನ್ನು ಕರೆದೊಯ್ಯುವಂತೆ ಡಾ. ವಾರ್ಡ್ ವಾಯುವಿಹಾರಕ್ಕೆ ಕರೆದೊಯ್ಯುತ್ತಿದ್ದ. ಇವಳನ್ನೇ ಬಲೆಯಾಗಿ ಒಡ್ಡಿ ಆ ರಾಷ್ಟ್ರದ ಅನೇಕ ಮುಖ್ಯರನ್ನು ವಶಮಾಡಿಕೊಂಡು ಅವರಿಂದ ಎಲ್ಲ ರಹಸ್ಯಗಳನ್ನೂ ಸಂಗ್ರಹಿಸಿ ಶತ್ರು ರಾಷ್ಟ್ರಗಳಿಗೆ ವಿಕ್ರಯಿಸಿ ಹಣ ಸಂಪಾದಿಸುತ್ತಿದ್ದ ಆ ಡಾ. ವಾರ್ಡ್!

ಯುದ್ಧಮಂತ್ರಿ ಜಾನ್ ಪ್ರೊಫ್ಯೂಮೋ ಕೂಡ ಆ ಬಲೆಯಲ್ಲಿ ಸಿಕ್ಕಿಬಿದ್ದ. ಬ್ರಿಟನ್ನಿನ ಬಹಳಷ್ಟು ಯುದ್ಧತಂತ್ರ, ರಹಸ್ಯಗಳು ಗಾಳಿ ಪಾಲಾದುವು.

ಭಿನ್ನಮತೀಯರು ಪಾರ್ಲಿಮೆಂಟಿನಲ್ಲಿ ಗದ್ದಲ ಎಬ್ಬಿಸಿದರು: "ಈ ಮನುಷ್ಯ ಆ ನೀಚ ಹೆಂಗಸಿನ ಸಹವಾಸದಲ್ಲಿಲ್ಲವೆ? ಇದರಿಂದ ರಾಷ್ಟ್ರದ ಯುದ್ಧತಂತ್ರಗಳು ಬಯಲಾಗುತ್ತಿಲ್ಲವೆ?" ಎಂದೆಲ್ಲ ಅವರು ಗರ್ಜಿಸಿದಾಗ ಪ್ರಧಾನಿಗಳು ಯುದ್ಧಮಂತ್ರಿಯ ಮುಖ ನೋಡಿದರು, ಅವರ ಉತ್ತರಕ್ಕಾಗಿ.

ಏಕಾಏಕಿ ಮುನ್ಸೂಚನೆಯೇ ಇಲ್ಲದೆ ಮೈಮೇಲೆ ಬಂದ ಈ ಜನ, ಮತ್ತವರ ಆಪಾದನೆಯಿಂದಾಗಿ ಯುದ್ಧಮಂತ್ರಿಗಳು ತತ್ತರಿಸಿ ಹೋದರು. ಗಲಿಬಿಲಿಗೊಂಡು "ಇಲ್ಲ...ಶುದ್ಧ ಸುಳ್ಳು..." ಎಂದು ಉತ್ತರಿಸಿ ಪಾರಾದರು.

ಎದುರು ಪಕ್ಷದವರ ಕಣ್ಣಲ್ಲಿ ವ್ಯಂಗ್ಯದ ನಗು, ಅಟ್ಟಹಾಸ ಮಿನುಗುತ್ತಿತ್ತು. ಮಾನಸಿಕವಾಗಿ ಗಾಸಿಗೊಂಡ ಪ್ರೊಫ್ಯೂಮೋ ಹೇಗೋ ಸಾವರಿಸಿಕೊಂಡು ಮನೆ ತಲಪಿದ. ಆತನನ್ನು ದಾರಿಯುದ್ದಕ್ಕೂ ಆತ್ಮಸಾಕ್ಷಿ ಚುಚ್ಚುತ್ತಿತ್ತು. ಕಣ್ಣನ್ನು ಕವಿದರೂ ನಿದ್ದೆ ಬಾರದು. ಚಿಂತಿಸಿ ಚಿಂತಿಸಿ ಕೊನೆಗೆ,

"ಪ್ರಧಾನರೆ,

ಎದುರಾಳಿಗಳು ನಿಜ ಹೇಳಿದ್ದಾರೆ. ನನ್ನ ಅಪರಾಧ ಮನ್ನಿಸಿ ರಾಜೀನಾಮೆ ಒಪ್ಪಿಕೊಳ್ಳಿ.

ನಿಮ್ಮ ನಂಬಿಗೆಯ
-ಪ್ರೊಫ್ಯೂಮೋ"

ಎಂದು ಬರೆದು ಅಧಿಕಾರ ತ್ಯಾಗ ಮಾಡಿದ.

ಆ ಮೇಲಿಂದ ಆತನ ಹೆಸರನ್ನು ಯಾರೂ ಕೇಳಲಿಲ್ಲ. ಎಲ್ಲಿ ಹೋದನೋ ಆ ಪುಣ್ಯಾತ್ಮ, ಹಾಗೆ ಹೋಗುವಾಗ ಇಂಗ್ಲಿಷ್ ಶಬ್ದ ಭಾಂಡಾರಕ್ಕೆ Proffumoism ಎಂಬ ಶಬ್ದ ಬಿಟ್ಟು ಹೋಗಿ ಬಿಡಬೇಕೆ!

They say. Language is the vehicle of thoughts. ಭಾಷೆ ಇರುವುದರಿಂದಲೇ ಮಾನವ ತನ್ನ ಚಿಂತನೆಗಳನ್ನೂ ಆನಂದ, ದುಃಖಗಳನ್ನೂ ಇತರರಿಗೆ ಅಭಿವ್ಯಕ್ತಿಸುತ್ತ ಬಂದಿದ್ದಾನೆ. ಆದಕ್ಕೆ ಆ ಭಾಷೆ, ಈ ಭಾಷೆ ಎಂಬ ವಿರಾಟಗಳೇಕೆ?

ಯಾವ ಭಾಷೆಯನ್ನೂ ದ್ವೇಷಿಸದ, ಯಾವ ಪೂರ್ವಾಗ್ರಹವನ್ನೂ ಹೊಂದಿರದ, ಏನು ಒಳ್ಳೆಯದಿದ್ದರೂ ಅದು ಎಲ್ಲಿದ್ದರೂ ಅವನ್ನು ಸ್ವೀಕರಿಸಿ ಭಾಷೆಯನ್ನು ಬೆಳೆಸಬೇಕೆಂಬ ಉದಾರ ಚಿಂತನೆಯುಳ್ಳವರಿಂದ ಮಾತ್ರವೇ ಭಾಷೆ ಉಳಿದೀತು. ಬೆಳೆದೀತು.

ಇಂಗ್ಲಿಷ್ ಹೀಗೆ ಬೆಳೆಯುತ್ತ ಬಂದಿದೆ! ✡



ಹಳೆಯ ಸಮಸ್ಯೆಯೊಂದರ ಮೇಲೆ ಇನ್ನಷ್ಟು ಬೆಳಕು

# ಭೂಖಂಡವು ಸ್ಥಿರವಲ್ಲ

ಮಹೇಶ ಆರ್. ಹಿರೇಮಠ

ಭೂಪಟವನ್ನು ಅವಲೋಕಿಸಿದಾಗ ವಿಸ್ತಾರವಾದ ನೀರಿನ ರಾಶಿಯ ಮೇಲೆ ಭೂಖಂಡಗಳು ಅಲ್ಲಲ್ಲಿ ಹರಿದು ಹಂಚಿದಂತೆ ಕಂಡುಬರುತ್ತದೆ. ನೀರಿನ ಮೇಲೆ ತೇಲಿ ಬಿಟ್ಟ ಮರದ ದಿಮ್ಮಿಗಳು ಕಾಲಾಂತರದಲ್ಲಿ ದೂರ ದೂರ ಸರಿದು ಹೋಗುವಂತೆ ಈ ಭೂಖಂಡಗಳೂ ಚಲಿಸುತ್ತಿರಬಹುದೇನೊ ಎಂಬ ಸಂಶಯ ಭೂಗರ್ಭಶಾಸ್ತ್ರಜ್ಞರಿಗೆ ಬಹು ದಿನಗಳಿಂದಲೂ ಇತ್ತು. ಆದರೆ ಅವು ತೇಲಾವುದು ನೀರಿನ ಮೇಲೆ ಅಲ್ಲ! ಹಾಗಾದರೆ ಯಾವ ಪದಾರ್ಥದ ಮೇಲೆ ತೇಲುತ್ತವೆ? ಇವು ಚಲಿಸುತ್ತವೆ ಎಂದು ಸಿದ್ಧಪಡಿಸಲು ಯಾವ ಪುರಾವೆಗಳಿವೆ? ಇಂಥ ಬೃಹತ್ ಭೂಖಂಡಗಳ ಚಲನೆಗೆ ಯಾವ ಶಕ್ತಿಯ ಕೈವಾಡವಿರಬಹುದು?

ಮೊದಲ ಬಾರಿಗೆ ಸರ್ ಫ್ರಾನ್ಸಿಸ್ ಬೇಕನ್ ಎನ್ನುವ ವಿಜ್ಞಾನಿ, ನಂತರ ಆ್ಯಂತೋನಿ ಸ್ನಿಡರ್ (೧೮೫೮) ಭೂಖಂಡಗಳು ಚಲಿಸುತ್ತಿರಬಹುದೆಂಬ ವಾದವನ್ನು ಪ್ರತ್ಯೇಕವಾಗಿ ಮಂಡಿಸಿದರು. ಇವರು ದಕ್ಷಿಣ ಅಮೇರಿಕದ ಪೂರ್ವ ತೀರ ಹಾಗೂ ಆಫ್ರಿಕದ ಪಶ್ಚಿಮ ತೀರಗಳನ್ನು ಪರಿಶೀಲಿಸಿ, ಅವೆಷ್ಟು ಚೆನ್ನಾಗಿ ಪರಸ್ಪರ ಪೂರಕವಾಗಿ ಹೊಂದಿಕೊಳ್ಳುತ್ತವೆ. ಆದ್ದರಿಂದ




೩೦ ಕೋಟಿ ವರ್ಷಗಳ ಹಿಂದೆ ಭೂಖಂಡಗಳು ದಕ್ಷಿಣ ಧ್ರುವ ಪ್ರದೇಶದಲ್ಲಿ ಹೀಗೆ ಅಡಕವಾಗಿದ್ದವು.

ಇವೆರಡು ಖಂಡಗಳೂ ಒಂದಾನೊಂದು ಕಾಲದಲ್ಲಿ ಒಟ್ಟಿಗೇ ಇರಲೇಬೇಕೆಂದು ಊಹಿಸಿದರು. ನಂತರದ ವಿಜ್ಞಾನಿಗಳು ಬೇರೆ ಬೇರೆ ಖಂಡಗಳಲ್ಲಿ ಸಿಗುವ ಶಿಲೆಗಳ ರಚನಾಕ್ರಮ, ಕಾಂತ ಗುಣಗಳು (Palaeo magnetism) ಪ್ರಾಣಿ ಹಾಗೂ ಸಸ್ಯ ಪಳಿಯುಳಿಕೆಗಳಲ್ಲಿರುವ ಸಾಮ್ಯ ಮುಂತಾದ ಸಾಕ್ಷ್ಯಾಧಾರಗಳ ಮೇಲೆ ಇಂದಿನ ವಿವಿಧ ಭೂಖಂಡಗಳು ಹಿಂದೆ ಅಖಂಡವಾಗಿಯೇ ಇದ್ದು ಕ್ರಮೇಣ ಒಡೆದು ಬೇರ್ಪಟ್ಟು ಅಲೆದಾಡಿ ಇಂದಿನ ತಮ್ಮ ಸ್ಥಾನಗಳಿಗೆ ತಲಪಿವೆ ಎಂದು ಸಿದ್ಧಪಡಿಸಿದ್ದಾರೆ. ಉತ್ತರಾರ್ಧ ಗೋಲದುದ್ದಕ್ಕೂ ಬೇರೆ ಬೇರೆ ಖಂಡಗಳಲ್ಲಿ ಕಾಣಸಿಗುವ ಬೃಹತ್ ಕಲ್ಲಿದ್ದಲು ನಿಕ್ಷೇಪಗಳಲ್ಲಿ ದೊರೆತ ಸಸ್ಯ ಪಳಿಯುಳಿಕೆಗಳಲ್ಲಿ ಹೋಲಿಕೆ, ಆಫ್ರಿಕ ಮತ್ತು ದ. ಅಮೇರಿಕದ ಭೂರಚನೆಯಲ್ಲಿರುವ ನಿಕಟ ಸಂಬಂಧಗಳು, ಇವೆರಡೂ ಖಂಡಗಳು ಮೊದಲು ಕೂಡಿಯೇ ಇದ್ದುವೆಂಬುದನ್ನು ಸಿದ್ಧಪಡಿಸುತ್ತವೆ. ನಂತರ ಆಲ್‌ಫ್ರೆಡ್ ವೆಗ್ನರ್ ಎಂಬ ವಿಜ್ಞಾನಿಯು ಅಧ್ಯಯನ ನಡೆಸಿ ಖಂಡಗಳು ಚಲಿಸುವವು ಎಂಬುದರ ಬಗ್ಗೆ ಉಪಯುಕ್ತ ಮಾಹಿತಿಯನ್ನೊದಗಿಸಿದ. ಭೂಮಿ ಎರಡು ಕೋಟಿ ವರ್ಷಗಳ ಹಿಂದೆ ಹೇಗಿರ–ಬಹುದುದೆಂಬ ಅವನ ಕಾಲ್ಪನಿಕ ಭೂಪಟದಲ್ಲಿ ಆತ ಆ ಕಾಲದಲ್ಲಿ ಇದ್ದಿರಬಹುದಾದ ಇಂದಿನ ಪೆಸಿಫಿಕ್ ಸಾಗರದ ಮೂಲ ಮಹಾಸಾಗರವನ್ನು 'ಪ್ಯಾಂತಾಲಾಸ್' ಎಂದು ಕರೆದ. ಎಲ್ಲ ಖಂಡಗಳೂ ಕೂಡಿಕೊಂಡೇ ಇದ್ದವೆಂದು ತೋರಿಸಿ ಆ ಅಖಂಡ ಭೂಭಾವನ್ನು 'ಪ್ಯಾಂಗೆ' (PANGAEA) ಎಂದು ಹೆಸರಿಸಿದ. ನಂತರ ಈ ಪ್ಯಾಂಗೆ ಇಬ್ಭಾಗವಾಗಿ ಎರಡು ಬೃಹತ್ ಭೂಖಂಡಗಳಾಗಿ, ಒಂದು ಉತ್ತರಾರ್ಧ ಗೋಲಕ್ಕೆ ಇನ್ನೊಂದು ದಕ್ಷಿಣಾರ್ಧ ಗೋಲಕ್ಕೆ ಸರಿದು ಹೋದವು ಎಂದು ಹೇಳಿ, ಈ ಎರಡು ಭೂಖಂಡಗಳ ನಡುವೆ ಇದ್ದ ಅಂದಿನ ಸಮುದ್ರವನ್ನು (ಇಂದಿನ ಮೆಡಿಟರೇನಿಯನ್ ಸಮುದ್ರದ ಮೂಲ) 'ಟೆಟಿಸ್' ಸಮುದ್ರ ಎಂದು ಕರೆದನು.

ಇಂದಿನ ಉತ್ತರ ಅಮೇರಿಕ, ಏಶಿಯದ ಬಹುಭಾಗ ಮತ್ತು ಯುರೋಪಗಳನ್ನೊಳಗೊಂಡು ಉತ್ತರಾರ್ಧ ಗೋಲದಲ್ಲಿದ್ದ ಬೃಹತ್ ಭೂಖಂಡವನ್ನು 'ಲಾರೇಶಿಯ' ಎಂದೂ ದ. ಅಮೇರಿಕ, ಆಫ್ರಿಕ, ಅರೇಬಿಯ, ಮಡಗಾಸ್ಕರ್, ಭಾರತ, ಆಸ್ಟ್ರೇಲಿಯ ಮತ್ತು ಅಂಟಾರ್ಟಿಕ ದಕ್ಷಿಣಾರ್ಧ ಗೋಲದಲ್ಲಿದ್ದ ಬೃಹತ್ ಭೂಖಂಡಕ್ಕೆ 'ಗೊಂಡ್ವಾನಾ ಲ್ಯಾಂಡ್' ಎಂದು ಹೆಸರಿಸಿ ಈ 'ಲಾರೇಶಿಯ' ಮತ್ತು 'ಗೊಂಡ್ವಾನಾ' ಭೂಖಂಡಗಳು ಮಧ್ಯಜೀವಿಯುಗದಲ್ಲಿ ಒಡೆದು ಇಂದಿನ ವಿವಿಧ ಭೂಖಂಡಗಳ ರಚನೆಯಾಯಿತು ಎಂದು ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ವೆಗ್ನರ್‌ನ ತರ್ಕದ ಪ್ರಕಾರ ಖಂಡಗಳ ಮೇಲ್ಪದರು ಹಗುರಾದ ಅಲ್ಯೂಮಿನಿಯಂ ಸಿಲಿಕೇಟುಗಳಿಂದ ರಚಿತವಾಗಿದ್ದು ತಳಭಾಗವು ಅಧಿಕ ಸಾಂದ್ರತೆಯ ದ್ರವರೂಪಿ ಸಿಲಿಕೇಟ್ ಮತ್ತು ಖನಿಜಗಳಿಂದ ರಚಿತವಾಗಿದೆ. ಮೇಲ್ಪದರನ್ನು 'ಸಯಾಲ್ (SIAL)' ಎಂತಲೂ ತಳಭಾಗದ ಅಧಿಕ ‌ಸಾಂದ್ರತೆಯ ಪದರನ್ನು 'ಸೈಮಾ (SIMA)' ಎಂತಲೂ ಕರೆದು ನೀರಿನ ಮೇಲೆ ಬರ್ಫದ ಬಂಡೆಗಳು ತೇಲಾಡುವಂತೆ 'ಸಯಾಲ್'ವು 'ಸೈಮಾ'ದ ಮೇಲೆ ತೇಲಾಡಲು ಸಾಧ್ಯವೆಂದು ವೆಗ್ನರ್ ಹೇಳಿದನು. ಭೂಖಂಡಗಳು ಪ್ರತ್ಯೇಕಗೊಂಡು ಚಲಿಸಿದ ವಿವಿಧ ಕಾಲಗಳು ಮತ್ತು ಹಂತಗಳನ್ನು ತನ್ನ ನಕ್ಷೆಗಳಲ್ಲಿ ವೆಗ್ನರ್ ಗುರುತಿಸಿದ್ದಾನೆ.

ಖಂಡಗಳು ಕೂಡಿಕೊಂಡೇ ಇದ್ದುವೆಂಬುದನ್ನು ಸಮರ್ಥಿಸಲು ವೆಗ್ನರ್ ಅನೇಕ ವಿಧವಾದ ವೈಜ್ಞಾನಿಕ ವಿವರಗಳನ್ನು ಸಂಗ್ರಹಿಸಿದ. ಅವುಗಳ ಪೈಕಿ ಪರ್ಮೋಕಾರ್ಬಾನಿಫೆರಸ್ ಕಾಲದಲ್ಲಿ (ಸುಮಾರು ೬.೫ ಕೋಟಿ ವರ್ಷಗಳ ಹಿಂದೆ) ದಟ್ಟವಾದ ಹಿಮದ ಮುಸುಕೊಂದು ದ. ಅಮೇರಿಕ, ಭಾರತದ ಕೆಲ ಭಾಗಗಳು ಹಾಗೂ ಅಟ್ಲಾಂಟಿಕ್ ಖಂಡಗಳನ್ನು ಸಂಪೂರ್ಣವಾಗಿ

ಆವರಿಸಿತ್ತೆಂಬ ಅಂಶವು ಅಲ್ಲಿ ಸಿಗುವ ಶಿಲೆಗಳಿಂದ ಕಂಡುಬಂದಿದ್ದು, ಈ ಭೂಭಾಗಗಳು ಕೂಡಿಯೇ ಇದ್ದುವೆಂಬುದನ್ನು ಸಿದ್ಧಪಡಿಸಿದೆ. ಏಶಿಯಾದ ಭೂಭಾಗವು ನಿಧಾನವಾಗಿ ಪಶ್ಚಿಮಾಭಿ ಮುಖವಾಗಿ ಚಲಿಸುತ್ತ ಬಂದಿರುವುದು ತಿಳಿಯುತ್ತದೆ. ಇದರಿಂದಾಗಿ ಪೂರ್ವ ತೀರದ ಸಣ್ಣಪುಟ್ಟ ಭಾಗಗಳು ಆಗಾಗ ಮುಖ್ಯ ಭೂಭಾಗದಿಂದ ಪ್ರತ್ಯೇಕಗೊಂಡು ಹಿಂದೆ ಉಳಿದಿವೆ. ದಕ್ಷಿಣ ಗೋಲಾರ್ಧದಲ್ಲಿದ್ದ 'ಗೊಂಡ್ವಾನಾ ಲ್ಯಾಂಡ್'ನಿಂದ ಕಾಲಕ್ರಮದಲ್ಲಿ ದಕ್ಷಿಣ ಅಮೇರಿಕ, ಆಫ್ರಿಕ, ಆಸ್ಟ್ರೇಲಿಯ, ಮಡಗಾಸ್ಕರ್ ಹಾಗೂ ಅಂಟಾರ್ಟಿಕಗಳ ರಚನೆಯಾಯಿತು. ಈ ಭೂಭಾಗಗಳು ಸಮಭಾಜಕ ವೃತ್ತದ ಕಡೆಗೆ ಚಲಿಸಿದವು. ದಕ್ಷಿಣ ಅಮೇರಿಕ ಅತೀ ವೇಗವಾಗಿ ಚಲಿಸಿದ ಕಾರಣ ಮಧ್ಯಜೀವಿಯುಗದಲ್ಲಿ ಅಟ್ಲಾಂಟಿಕ್ ಸಾಗರದ ಉಗಮವಾಯಿತು. ಲಾರೇಶಿಯದಿಂದ ಉತ್ತರ ಅಮೇರಿಕ ಬೇರೆಯಾಗಿ ನೈಋತ್ಯಕ್ಕೆ ಚಲಿಸುತ್ತ ನಡುವೆಯೇ ಗ್ರೀನ್‌ಲ್ಯಾಂಡನ್ನು ಬಿಟ್ಟಿತು. ಉತ್ತರ, ದಕ್ಷಿಣ ಅಮೇರಿಕೆಗಳು ಇತರ ಖಂಡಗಳಿಗಿಂತಲೂ ಅತಿ ವೇಗವಾಗಿ ಚಲಿಸಿದುದರಿಂದ ಈ ಭೂಖಂಡಗಳ ಒತ್ತುವಿಕೆಯಿಂದ 'ರಾಕೀ' ಮತ್ತು 'ಆ್ಯಂಡಿಸ್' ಪರ್ವತ ಪಂಕ್ತಿಗಳ ರಚನೆಯಾಯಿತು. ಆಫ್ರಿಕ, ಪಶ್ಚಿಮದ ಕಡೆಗೆ ಚಲಿಸುತ್ತ ಮುಂದುವರೆಯಿತು. ಮಡಗಾಸ್ಕರ್ ಹಿಂದೆಯೇ ಉಳಿಯಿತು. ಇದರಂತೆ ಭಾರತ ಉಪಖಂಡ ಕೂಡ ಶ್ರೀಲಂಕಾ ದ್ವೀಪವನ್ನು ಕಳಚಿಕೊಂಡಿತು. ಸಮಭಾಜಕ ವೃತ್ತದ ಕಡೆಗೆ ಚಲಿಸುತ್ತಿದ್ದ ಲಾರೇಶಿಯದ ಭಾಗವು ಆಫ್ರಿಕ, ಭಾರತ ಮತ್ತು ಆಸ್ಟ್ರೇಲಿಯಗಳೊಂದಿಗೆ ಘರ್ಷಿಸಿದ ಪರಿಣಾಮವಾಗಿ ಅವೆರಡರ ಮಧ್ಯದಲ್ಲಿ ಇದ್ದ ಅಂದಿನ ಟೆಥಿಸ್ ಸಮುದ್ರದಲ್ಲಿನ ಮರಳು ಶಿಲೆಗಳು ಬಲವಾದ ಒತ್ತಡಕ್ಕೊಳಗಾಗಿ, ಮೇಲಕ್ಕೊತ್ತಲ್ಪಟ್ಟು ಅದರಿಂದ ಇಂದಿನ ಉತ್ತುಂಗ ಶಿಖರಗಳಾದ ಆಲ್ಪ್ಸ ಮತ್ತು ಹಿಮಾಲಯಗಳ ರಚನೆಯಾಯಿತು. ಇದಲ್ಲದೇ ಲಾರೇಶಿಯದ ಅಂಗಾರ ಪ್ರದೇಶವು ಭಾರತದ ಉಪಖಂಡದ ಮೇಲೆಯೇ ಸವಾರಿ ಮಾಡಿದ್ದರಿಂದ ಅತ್ಯಂತ ಎತ್ತರವಾದ ಟಿಬೆಟ್ ಪ್ರಸ್ಥಭೂಮಿಯ ರಚನೆ ಸಾಧ್ಯವಾಯಿತೆಂದು ಇತರ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ.

ಗೊಂಡ್ವಾನಾ ಲ್ಯಾಂಡ್‌ನ ಭೂಖಂಡಗಳು (ದ. ಅಮೇರಿಕ, ಆಫ್ರಿಕ, ಆಸ್ಟ್ರೇಲಿಯ, ಭಾರತ ಮತ್ತು ಅಂಟಾರ್ಟಿಕ) ಪರಸ್ಪರ ದೂರದಲ್ಲಿದ್ದರೂ ಅವುಗಳಲ್ಲೆಲ್ಲ ಒಂದೇ ವಿಧವಾದ ನೀರ್ಗಲ್ಲು (GLACIER) ನಿಕ್ಷೇಪಗಳಿವೆಯಾದ್ದರಿಂದ, ಈ ಭೂಭಾಗಗಳೆಲ್ಲವೂ ಹಿಂದೆ ಬೃಹತ್ ಭೂಖಂಡವೊಂದರಲ್ಲೇ ಅಡಕವಾಗಿದ್ದು ಕಾಲಕ್ರಮದಲ್ಲಿ ದೂರದೂರಕ್ಕೆ ಸರದಿರಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ. ಗೊಂಡ್ವಾನದಲ್ಲಿ ಹಿಮ ಬೀಳುವಿಕೆ ನಿಂತ ಸ್ವಲ್ಪ ಕಾಲದಲ್ಲೇ ನೆಲದ ಮೇಲೆ ಪ್ರಥಮವಾಗಿ ಸಸ್ಯಗಳ ಗುಂಪೊಂದು ಕಾಣಿಸಿಕೊಂಡಿತು. ಈ ಸಸ್ಯವರ್ಗಕ್ಕೆ 'ಗ್ಲಾಸಾಪ್ಟರಿಸ್' ಎಂದು ಹೆಸರು. ಇದು ಗೊಂಡ್ವಾನಾದ ಖಂಡಗಳಾದ ಆಫ್ರಿಕ, ದ. ಅಮೇರಿಕ, ಆಸ್ಟ್ರೇಲಿಯ, ಭಾರತದ



ಈಗ ಭೂಖಂಡಗಳು ಇರುವ ರೀತಿ ಚುಕ್ಕೆ ಇರುವ ಪ್ರದೇಶಗಳು ೩೦ ಕೋಟಿ ವರ್ಷಗಳ ಹಿಂದೆ ಹಿಮಾಚ್ಛಾದಿತವಾಗಿದ್ದವು.

ಉಪಖಂಡ ಎಲ್ಲವುಗಳಲ್ಲೂ ಪತ್ತೆಯಾಗಿದೆ. ಹೀಗಾಗಿ ಈ ಖಂಡಗಳು ಈಗ ದೂರ ದೂರ ಇದ್ದರೂ ಈ ಸಸ್ಯ ಪಳಿಯುಳಿಕೆಗಳು ಹಂಚಿಕೆಯಾಗಿರುವ ವಿವಿಧ ಭೂಭಾಗಗಳೆಲ್ಲ ಹಿಂದೆ ಅಖಂಡವಾಗಿಯೇ ಇದ್ದು ಕ್ರಮೇಣ ಆ ಭಾಗಗಳು ಪ್ರತೇಕಗೊಂಡು ದೂರ ಸರಿದವು. ಇದರಿಂದ ಅವುಗಳ ವಿತರಣೆಯನ್ನು ಸುಲಭವಾಗಿ ವಿವರಿಸಬಹುದಾಗಿದೆ. ಗೊಂಡ್ವಾನಾದ ಎಲ್ಲ ಖಂಡಗಳಲ್ಲಿ ಒಂದೇ ತರಹದ ಪ್ರಾಣಿ ಪಳಿಯುಳಿಕೆಗಳು ಸಿಕ್ಕಿವೆ. ಮೀಸೋಸಾರಸ್ ಎಂಬ ಸಣ್ಣ ಉರಗದ ಪಳಿಯುಳಿಕೆ ದ. ಅಮೇರಿಕ ಮತ್ತು ಆಫ್ರಿಕದ ಸರೋವರ ಸಂಚಯನಗಳಲ್ಲಿ ಪತ್ತೆಯಾಗಿದೆ. ಈ ಸ್ಥಳದ ಹೊರತಾಗಿ ಬೇರೆಲ್ಲೂ ಇಂಥ ಅವಶೇಷಗಳು ಪತ್ತೆಯಾಗದಿಲ್ಲದಿರುವದು ಒಂದು ವಿಶೇಷ ಸಂಗತಿ. ಭಾರತದ ಜಲಜ ಶಿಲೆಗಳಿಗೂ ಆಸ್ಟ್ರೇಲಿಯದ ನ್ಯೂ ಸೌತ್ ವೇಲ್ಸ್, ಕ್ವೀನ್ಸ್‌ಲ್ಯಾಂಡ್ ಮತ್ತು ಟಾಸ್ಮೇನಿಯದ ಜಲಜ ಶಿಲೆಗಳಿಗೂ ಸ್ಪಷ್ಟವಾದ ಹೋಲಿಕೆಗಳಿವೆ. ಆಸ್ಟ್ರೇಲಿಯದ ಕಲ್ಲಿದ್ದಲು ನಿಕ್ಷೇಪಗಳಲ್ಲಿ ಸಿಗುವ ಸಸ್ಯವಶೇಷಗಳು ಭಾರತದ ಬಿಹಾರ್ ಮತ್ತು ಉತ್ತರ ಪ್ರದೇಶದಲ್ಲಿ ಸಿಗುವ ಅವಶೇಷಗಳೂ ಒಂದೇ ಆಗಿವೆ. ಪಶ್ಚಿಮ ಆಸ್ಟ್ರೇಲಿಯದಲ್ಲಿಯೂ, ಭಾರತದ ಕೋಲಾರದಲ್ಲಿಯೂ ಚಿನ್ನದ ನಿಕ್ಷೇಪಗಳುಳ್ಳ ಶಿಲೆಗಳು ಸರಿಸಮವಾಗಿರುವದು ಕಂಡು ಬಂದಿದೆ. ಇಂದು ಪ್ರಪಂಚದಲ್ಲಿ ಸಿಗುವ ಕಬ್ಬಿಣದ ನಿಕ್ಷೇಪಗಳಿಂದ ಹಿಂದಿನ ಧ್ರುವಗಳಿದ್ದ ಸ್ಥಾನಗಳನ್ನು ನಿರ್ಧರಿಸಬಹುದು, ಇಂದಿನ ಕಾಂತ ಧ್ರುವಗಳ ಸ್ಥಾನದಿಂದ ಅವುಗಳ ಹಿಂದಿನ ಸ್ಥಾನಗಳನ್ನು ಅರಿಯಲು ಸಾಧ್ಯವೆನಿಸಿದೆ. ಮೇರುಗಳೇ ಭ್ರಮಣಗೊಂಡಿದ್ದುದರಿಂದ ಸಮಭಾಜಕ ವೃತ್ತದ








ವಿಭಾಗಗಳಲ್ಲಿ ಬದಲಾವಣೆಯಾಯಿತು. ಅಲ್ಲದೇ ಪ್ರಪಂಚದ ವಿವಿಧ ಭಾಗಗಳಲ್ಲಿ ಹವಾಗುಣಗಳಲ್ಲಿ ಗಣನೀಯ ಬದಲಾವಣೆಗಳಾಗಿವೆ. ಭಾರತದ ಡೆಕ್ಕನ್ ಪ್ರಸ್ಥಭೂಮಿಯ ಲಾವಾರಸದ ಪದರುಗಳ ಕಾಂತತ್ವದ ಅಧ್ಯಯನದಿಂದ ಕೆಲವು ಅಂಶಗಳು ತಿಳಿದವು. ಸುಲಭವಾಗಿ ಹೋಲಿಸಲು, ಮುಂಬಯಿ ಅಕ್ಷಾಂಶವನ್ನು ಆಧಾರವಾಗಿಟ್ಟುಕೊಂಡರೆ ಕ್ರಿಟೇಷಸ್ ಯುಗದ (ಐದು ಕೋಟಿ ವರ್ಷಗಳ ಹಿಂದೆ) ಅಂತ್ಯದಿಂದ ಇಯೋಸಿನ್ ಯುಗದ (ಮೂರು ಕೋಟಿ ವರ್ಷಗಳ ಹಿಂದೆ) ಅಂತ್ಯದ ವರೆಗೂ ಭಾರತದ ೩೭° ದಕ್ಷಿಣದಿಂದ ೧೩° ದಕ್ಷಿಣಕ್ಕೆ ಉತ್ತರಾಭಿಮುಖವಾಗಿ ಚಲಿಸುತ್ತ ಬಂದಿದೆಯೆಂದು ಸಿದ್ಧಪಡಿಸಲಾಗಿದೆ. ಕ್ರಿಟೇಷಸ್ ಯುಗದ ಅಂತ್ಯದಿಂದ ಭಾರತ ಉತ್ತರಕ್ಕೆ ಚಲಿಸಿ ಮುಂಬಯಿಯನ್ನು ಅದರ ಇಂದಿನ ಅಕ್ಷಾಂಶ ೧೯° ಉತ್ತರಕ್ಕೆ ತಂದು ನಿಲ್ಲಿಸಿದೆ. ಅಂದರೆ ಅದು ತನ್ನ ಸ್ಥಾನದಲ್ಲಿ ಸುಮಾರು ೫೬° ಗಳಷ್ಟು ಪಲ್ಲಟಗೊಂಡಿತು. ಅಂದರೆ ಅದು ಐದು ಕೋಟಿ ವರ್ಷಗಳ ಅವಧಿಯಲ್ಲಿ ಒಂದು ವರ್ಷಕ್ಕೆ ಸರಾಸರಿ ೭ ಸೆಂಟಿಮೀಟರುಗಳಷ್ಟು ಚಲಿಸಿದಂತಾಯಿತು.

ಭೂಖಂಡಗಳು ಚಲಿಸುತ್ತವೆಂದು ಎಷ್ಟೇ ಸಮರ್ಪಕವಾಗಿ ಸಿದ್ಧಪಡಿಸಿದರೂ ಇಡೀ 'ಪ್ಯಾಂಗೆ' ಒಡೆದು ಭೂಖಂಡಗಳು ಪ್ರತ್ಯೇಕಗೊಳ್ಳುವಿಕೆ ಹಾಗೂ ಅವುಗಳ ಚಲನೆಗೆ ಪ್ರೇರಕ ಶಕ್ತಿ ಯಾವುದು ಎಂಬುದೇ ಮುಖ್ಯ ಪ್ರಶ್ನೆಯಾಗಿದೆ.

ಭೂಗರ್ಭದಲ್ಲಿರುವ ಗಾಢ ಉಷ್ಣತೆಯು ಅಲ್ಲಿಯ ಘನ ವಸ್ತುಗಳನ್ನು ಶಿಲಾರಸವನ್ನಾಗಿ ಮಾಡುತ್ತದೆ. ಇದರಲ್ಲಿ ಉತ್ಪತ್ತಿಯಾದ ಉಷ್ಣೋದಕ ಪ್ರವಾಹಗಳು ಮತ್ತು ಅಲೆಗಳ ಸೆಳೆತಗಳು ಪ್ಯಾಂಗೆಯನ್ನು ಬಿರಿದು ಅದರ ಭೂಭಾಗಗಳನ್ನು ದೂರ ದೂರ ಸರಿಯುವಂತೆ ಮಾಡಿರಬಹುದೆಂದು ನಂಬಲಾಗಿದೆ. ಭೂಕವಚ ಒಂದು ವಿದ್ಯುತ್ ವಿಸರಣ ವ್ಯವಸ್ಥೆಯಂತಿದೆ. ಭೂಗರ್ಭದಲ್ಲಿ ವಿಕಿರಣಪಟು ಧಾತುಗಳಿಂದ ಉತ್ಪತ್ತಿಯಾಗುವ ಉಷ್ಣತೆ ಕೂಡ ಘನ ವಸ್ತುಗಳನ್ನು ಕರಗಿಸಿ ಮ್ಯಾಗ್ಮಾ ಆಗಿ ಪರಿವರ್ತಿಸುತ್ತದೆ. ಅದು ನಿಧಾನವಾಗಿ ಮೇಲೇರಿ ಅದಕ್ಕಿಂತಲೂ ಸ್ವಲ್ಪ ಕಡಿಮೆ ದ್ರವರೂಪದ ಭೂಕವಚದ ಮೂಲಕ ಹೊರಬರುತ್ತದೆ. ಇದರಿಂದ ಸಾಗರ ಮಧ್ಯದಲ್ಲಿ ಏಣುಗಳಿವೆ ಹರಿದುಬರುವ ಲಾವಾಗಳಲ್ಲಿ ಬಿಸಿ ನೀರಿನ ವಲಯಗಳು ಉತ್ಪತ್ತಿಯಾಗುತ್ತವೆ. ಚಲಿಸುವ, ಶಿಲಾಗೋಲ ಭೂಮಿಯೊಳಕ್ಕೆ ಕುಸಿದು ಭಾರಿ ಪ್ರಮಾಣದ ಕಂದಕಗಳನ್ನು ನಿರ್ಮಿಸುತ್ತದೆ. ಹೆಸ್ ಎಂಬ ವಿಜ್ಞಾನಿಯ ಪ್ರಕಾರ ಇಡೀ ಸಾಗರದ ತಳವೇ ಒಂದು ದೊಡ್ಡ ಸಾಗುಪಟ್ಟಿಯಂತೆ (ಕನ್ವೇಯರ್ ಬೆಲ್ಟ್) ಚಲಿಸುತ್ತ ತಳ ಭಾಗದಿಂದ ದೊಡ್ಡ ದೊಡ್ಡ ಭೂಭಾಗಗಳನ್ನು ಮೇಲಕ್ಕೆತ್ತುತ್ತ ದೂರ ದೂರಕ್ಕೆ ಚದುರಿಸಿತು. ಭೂ ಭೌತ ವಿಜ್ಞಾನಿಗಳ ಪ್ರಕಾರ ಶಿಲಾಗೋಲದ ಸಾಗು ಪಟ್ಟಿ ವ್ಯವಸ್ಥೆಯಲ್ಲಿ ಆರು ಪ್ರತ್ಯೇಕ ಫಲಕಗಳಿದ್ದು (Plates) ಅವು ಭೂಕವಚದ ಮೇಲೆ ಚಲಿಸುತ್ತವೆ. ಅವು ಪರಸ್ಪರ ಸಂಘಟ್ಟಿಸಿದಾಗ ಪರ್ವತಗಳು ನಿರ್ಮಾಣವಾಗುವವು.

ಇವಿಷ್ಟು ಭೂಖಂಡಗಳ ಚಲನೆಯನ್ನು ಕುರಿತು ವ್ಯಕ್ತಪಡಿಸಲಾಗಿರುವ ಅಭಿಪ್ರಾಯಗಳ ಸಾರಂಶ. ಇಂದಿಗೂ ಖಂಡಗಳು ವರ್ಷಕ್ಕೆ ಸರಾಸರಿ ಎರಡು ಅಂಗುಲಗಳಂತೆ ಅಲೆಯುತ್ತಲೆ ಇವೆ ಮತ್ತು ಅವುಗಳ ಚಲನೆ ನಿಲ್ಲುವ ಅಥವಾ ಕಡಿಮೆಯಾಗುವ ಚಿಹ್ನೆಗಳೇ ಇಲ್ಲವೆಂದು ಭೂವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ✡

(ನೋಡಿ : 'ಕಸ್ತೂರಿ' — ಎಪ್ರಿಲ್ ೧೯೭೦. 'ಭೂಖಂಡಗಳು ಸರಿಯುತ್ತಿವೆಯೆ?')



# ನಿಸ್ಸೀಮ ಗುರಿಕಾರ-ಆರ್ಚರ್ ಮೀನು

ಎಚ್. ಎಸ್. ಪ್ರದೀಪ ಮತ್ತು ಕೆ. ಆರ್. ದಿನೇಶ

ನೀವು ಧೂಮಪಾನದ ಆನಂದವನ್ನು ಸವಿಯುತ್ತಾ ನಿಮ್ಮೂರ ಕೆರೆಯ ತೀರದ ಮೇಲೆ ಯೋಚನಾಮಗ್ನರಾಗಿ ಕುಳಿತಿರುವಾಗ ನಿಮ್ಮ ಬಾಯಲ್ಲಿರುವ ಉರಿಯುವ ಸಿಗರೇಟಿನ ತುದಿಗೆ ಯಾರಾದರೂ ಉಗುಳಿದರೆ ನಿಮಗೆಷ್ಟು ಕೋಪ ಬರಲಿಕ್ಕಿಲ್ಲ! ಆದರೆ ಹೀಗೆ ಉಗುಳಿದ್ದು ನಿಮ್ಮ ಸಮೀಪದಲ್ಲೇ ನೀರಿನಲ್ಲಿ ವಾಸಿಸುವ ಒಂದು ಜಾತಿಯ ಮೀನು ಎಂದಾದರೆ ನಿಮಗೆಷ್ಟು ಆಶ್ಚರ್ಯವಾಗಬಹುದಲ್ಲವೆ? ಹೌದು, "ಟಾಕ್ಸೊಟಿಸ್" ಎಂಬ ಹೆಸರಿನ ಆರ್ಚರ್ ಮೀನು ಹೀಗೆ ನಿಮ್ಮ ಸಿಗರೇಟಿನ ಉರಿಯುವ ತುದಿಗೆ ಗುರಿಯಿಟ್ಟು ನೀರನ್ನು ಉಗುಳಬಲ್ಲದು! ಈ ಮೀನು ತನ್ನ ಆಹಾರವನ್ನು ಬೇಟೆಯಾಡುವ ವಿಧಾನವೇ ಹೀಗೆ!

ಪ್ರಾಣಿ ಪ್ರಪಂಚದಲ್ಲಿ, ಆಹಾರ ಪಡೆಯುವುದಕ್ಕಾಗಿ ಅವುಗಳಲ್ಲಿ ಕಂಡು ಬರುವ ವಿವಿಧ ಮಾರ್ಪಾಡುಗಳು ಹಾಗೂ ಅವು ಬಳಸುವ ವಿಧಾನಗಳು ಬಹಳ ಕುತೂಹಲಕರ. ಆಹಾರ—ಪ್ರಾಣಿಗಳ ಹುಟ್ಟು, ಬೆಳವಣಿಗೆ, ವಂಶಾಭಿವೃದ್ಧಿ ಮುಂತಾದ ಕ್ರಿಯೆಗಳಿಗೆ ಅಗತ್ಯವಾದ ಶಕ್ತಿಯನ್ನು ಒದಗಿಸುತ್ತದೆ. ಮೀನುಗಳಲ್ಲಿ, ಅವು ತಿನ್ನುವ ಆಹಾರ, ಪಡೆದುಕೊಳ್ಳುವ ವಿಧಾನ ಬೇರಾವುದೇ ಪ್ರಾಣಿ ಸಂಗಡಕ್ಕಿಂತ ಹೆಚ್ಚು ವೈವಿಧ್ಯಮಯವಾಗಿದೆ. ಒಂದೊಂದು ಜಾತಿಯ



ಚಿತ್ರ: ೧ ಆರ್ಚರ್ ಮೀನು ನೀರಿನ ಹನಿಗಳಿಂದ ಕೀಟಗಳನ್ನು ಹೊಡೆಯುವ ವಿಧಾನ.

ಮೀನೂ ಒಂದೊಂದು ರೀತಿಯ ಆಹಾರಕ್ಕೆ ಹೊಂದಿಕೊಂಡಿರುತ್ತದೆ. ಹೀಗೆ ಮೀನುಗಳಲ್ಲಿ, ಅಂಗಾಂಗಗಳ ಮಾರ್ಪಾಡುಗಳು ಹಾಗೂ ಆಹಾರ ಪಡೆಯುವ ವಿಧಾನಗಳು ಅವುಗಳ ವಿಕಸನದ ಹಾದಿಯಲ್ಲಿ ತಮ್ಮ ಆಹಾರ ಹಾಗೂ ವಾಸಿಸುವ ಪರಿಸರಕ್ಕೆ ಹೊಂದಿಕೊಂಡು ಒಂದು ನಿರ್ದಿಷ್ಟ ರೂಪ ತಾಳುತ್ತವೆ. ಅಂತೆಯೇ, ಕೆಲವೊಂದು ಜಾತಿಯ ಮೀನುಗಳಲ್ಲಿ ಆಹಾರ ಪಡೆಯುವ ತುಂಬ ಕುತೂಹಲಕರ ವಿಧಾನಗಳು ಕಂಡುಬರುತ್ತವೆ. ಉದಾಹರಣೆಗೆ: ಆಳ ಸಮುದ್ರದಲ್ಲಿ ವಾಸಿಸುವ ಆ್ಯಂಗ್ಲರ್ ಮೀನು ತನ್ನ ಶಿರಭಾಗದಲ್ಲಿ ಜೈವಿಕ ಬೆಳಕನ್ನು ಬೀರುವ ತುದಿಯಿರುವ ಕೋಲಿನಂತಹ ರಚನೆಯನ್ನು ಹೊಂದಿದ್ದು, ಅದರ ಮೂಲಕ ಸುತ್ತಮುತ್ತಲ ಮೀನುಗಳನ್ನು ತನ್ನ ವಿಶಾಲವಾದ ಬಾಯಿಯೆಡೆಗೆ ಆಕರ್ಷಿಸಿ ಭಕ್ಷಿಸುತ್ತದೆ. ಇನ್ನೂ ಅತ್ಯಂತ ವಿಸ್ಮಯಕರ ಆಹಾರ ಪಡೆಯುವ ವಿಧಾನ ಕಂಡುಬರುವುದು ಆರ್ಚರ್ ಮೀನಿನಲ್ಲಿ. ಇದನ್ನು ಮತ್ಸ್ಯಪ್ರಪಂಚದ "ಬಿಲ್ಲುಗಾರ" ಎಂದೇ ಕರೆಯಬಹುದು. ಇವು ಭಾರತದಿಂದ ಹಿಡಿದು ಶಾಂತ ಸಾಗರದ ವರೆಗೆ (ಹೆಚ್ಚಾಗಿ ಆಗ್ನೇಯ ಏಶಿಯ) ಸಮುದ್ರ ತೀರ ಪ್ರದೇಶ, ನದಿ, ಕೆರೆ ಮುಂತಾದ ಕಡೆಗಳಲ್ಲಿ ವಾಸಿಸುತ್ತವೆ. ಆರ್ಚರ್ ಮೀನುಗಳಲ್ಲಿ ಆರು ವಿಧಗಳಿವೆ.

ಆರ್ಚರ್ ಮೀನುಗಳ ಮುಖ್ಯ ಆಹಾರ ವಿವಿಧ ರೀತಿಯ ಕೀಟಗಳು. ಇವು ಕೀಟಗಳನ್ನು ಹೊಡೆದುರುಳಿಸುವಲ್ಲಿ ತೋರುವ ಚಾಕಚಕ್ಯತೆಯು ನಮ್ಮ ಬೇಟೆಗಾರನಿಗಿಂತೇನೂ ಕಡಿಮೆಯಿಲ್ಲ. ಇವು ತಮ್ಮ ಬಾಯನ್ನೇ 'ಆಯುಧ'ವನ್ನಾಗಿಯೂ ನೀರಿನ ಹನಿಗಳನ್ನೇ 'ಗುಂಡು' ಗಳನ್ನಾಗಿಯೂ ಬಳಸುತ್ತವೆ. ನೀರಿನ ಮೇಲ್ಭಾಗದಲ್ಲಿ ಸುಳಿದಾಡುತ್ತಿರುವ ಹಾಗೂ ಸಸ್ಯಗಳ ಮೇಲೆ ಕುಳಿತ ಕೀಟಗಳನ್ನು ಸ್ವಲ್ಪವೂ ಗುರಿ ತಪ್ಪದಂತೆ ತನ್ನ ಬಾಯಿಂದ ನೀರಿನ ಹನಿಗಳನ್ನು ಬಲು ಬಿರುಸಿನಿಂದ ಅವುಗಳ ಮೇಲೆ ಚಿಮ್ಮಿಸಿ ಅವುಗಳು ಆಧಾರ ತಪ್ಪಿ ನೀರಿಗೆ ಬೀಳುವಂತೆ ಮಾಡಿ ಕಬಳಿಸುತ್ತದೆ. ಇದಕ್ಕೆ ಸಹಕಾರಿಯಾಗಿ ಈ ಗುರಿಕಾರನ ದೃಷ್ಟಿ ಕೂಡ ಸೂಕ್ಷ್ಮ. ಕೀಟಗಳು ನೀರಿನ ಮೇಲೆ ಸುಮಾರು ೫-೬ ಅಡಿಗಳಷ್ಟು ದೂರವಿದ್ದಾಗಲೂ ಅವುಗಳತ್ತ ಗುರಿ ಇಡಬಲ್ಲದು. ಬೇಟೆಯು ಕಣ್ಣಿಗೆ ಬಿದ್ದಾಕ್ಷಣ ಆರ್ಚರ್ ಅದರೆಡೆಗೆ ನಿಧಾನವಾಗಿ ಧಾವಿಸಿ ಗುರಿಯಿಟ್ಟು ನೀರಿನ ಹನಿ ಗುಂಡುಗಳ ಮಳೆಗರೆಯುತ್ತದೆ (ಚಿತ್ರ-೧). ಆ ಬಿರುಸಿನ






ಚಿತ್ರ: ೨ ಅ. ಆರ್ಚರ್ ಮೀನಿನ ಬಾಯಿ ಮತ್ತು ನಾಲಿಗೆ. ಆ. ಬಾಯಿಯ ಮೇಲ್ಛಾವಣಿ.

ಹೊಡೆತಕ್ಕೆ ಕೀಟವು ನೀರಿಗುರುಳಿ ಮೀನಿಗೆ ಆಹುತಿಯಾಗುತ್ತದೆ. ನೀರಿನ ಮೇಲ್ಮೈ ಹತ್ತಿರದಲ್ಲಿ ಹಾರಾಡುತ್ತಿರುವ ಕೀಟಗಳೂ ಸಹ ಆರ್ಚರ್ ಇಟ್ಟ ಗುರಿಯಿಂದ ತಪ್ಪಿಸಿಕೊಳ್ಳಲಾರವು.

ಆರ್ಚರ ಮೀನಿನ ಈ ವಿಶಿಷ್ಟ ಗುಣವನ್ನು ಬೊಟೆವಿಯಾದ ಹೋಮೇಲ್ ಎಂಬಾತ ಪ್ರಪ್ರಥಮವಾಗಿ ಕ್ರಿಸ್ತಶಕ ೧೭೬೪ರಲ್ಲಿ ವರದಿ ಮಾಡಿದ. ಹಾಗೂ ಇದನ್ನು "ಬಿಲ್ಲುಗಾರ" ಮೀನು ('ಜ್ಯಾಕ್ಯುಲೇಟರ್' ಅಥವಾ 'ಶೂಟಿಂಗ್ ಫಿಶ್') ಎಂದು ಕರೆದ. ಆದರೆ, ದುರದೃಷ್ಟವಾಶಾತ್, ಈ ವರದಿಯನ್ನು ಯಾರೂ ನಂಬಲೇ ಇಲ್ಲ. ಇಂತಹ ಮೀನೊಂದು ಪ್ರಕೃತಿಯಲ್ಲಿರುವುದು ಸಾಧ್ಯವೇ ಇಲ್ಲ ಎಂದು ಜನ ಭಾವಿಸಿದ್ದರೇನೋ. ಮುಂದೆ ಕ್ರಿಸ್ತಶಕ ೧೯೦೨ರಲ್ಲಿ ರಶಿಯದ ಜೋಲೋಟ್ನಿಸ್ಕೀ ಎಂಬ ಮತ್ಸ್ಯಜೀವಶಾಸ್ತ್ರಜ್ಞನು ಶತಮಾನದ ಹಿಂದೆಯೇ ವರದಿ ಮಾಡಿದ ಹೋಮೆಲ್ಲನ ಅಭಿಪ್ರಾಯವನ್ನು ತನ್ನ ಸಂಶೋಧನೆಯ ಮೂಲಕ ದೃಢೀಕರಿಸಿದ. ಇದು ಹಲವಾರು ಜೀವಶಾಸ್ತ್ರಜ್ಞರಲ್ಲಿ ಕುತೂಹಲ ಕೆರಳಿಸಿ ಈ ಮೀನಿನ ಕಾರ್ಯ ವೈಖರಿಗೆ ಅನುಕೂಲವಾಗಿರುವ ಅಂಗಾಂಗಗಳ ರಚನೆಯೂ ಬೆಳಕಿಗೆ ಬರುವಂತಾಯಿತು. ಡಾ. ಸ್ಮಿತ್ ಎಂಬ ವಿಜ್ಞಾನಿಯು ನೀರನ್ನು ಬಹು ದೂರ ಬಿರುಸಿನಿಂದ ಚಿಮ್ಮಿಸಲು ಅನುಕೂಲವಾಗಿರುವ ಈ ಮೀನಿನ ಬಾಯಿಯ ಅಂಗರಚನೆಯನ್ನು ವಿವರವಾಗಿ ಅಭ್ಯಸಿಸಿದ. ಇದರ ಬಾಯಿಯ ಮೇಲ್ಛಾವಣಿಯುದ್ದಕ್ಕೂ ಕಿರಿದಾದ ಓಣಿಯಂತಹ ರಚನೆಯಿದ್ದು, ಅದರ ತುದಿಯಲ್ಲಿ ಅಲಕೆಯಾಕಾರದ ತೆರವು. ಇದೆ. (ಚಿತ್ರ—೨). ಮೀನು ತನ್ನ ನಾಲಿಗೆಯನ್ನು ಬಾಯಿಯ ಮೇಲ್ಛಾವಣಿಗೆ ಒತ್ತಿದಾಗ ಆ ಓಣಿಯು ಒಂದು ಕೊಳವೆಯಂತಾಗುತ್ತದೆಯಲ್ಲದೆ ಕಿವಿರು ಮುಚ್ಚಿಗೆಯಲ್ಲಿ ಒತ್ತಡವೇರ್ಪಡುತ್ತದೆ. ಅತೀ ತೆಳುವಾದ, ಮೆತ್ತಗಿನ ನಾಲಿಗೆಯ ತುದಿ ಅಲಕೆಯಾಕಾರದ ತೆರವಿನಲ್ಲಿ ಕವಾಟದಂತೆ ವರ್ತಿಸುತ್ತಾ ನೀರನ್ನು ಒತ್ತಡದಲ್ಲಿರಿಸಿಕೊಳ್ಳುತ್ತದೆ. ಈ ಸ್ಥಿತಿಯಲ್ಲಿ ಮೀನು ನಾಲಿಗೆಯ ತುದಿಯನ್ನು ಮೆಲ್ಲಗೆ ಕೆಳಗೆ ಬಗ್ಗಿಸಿದಾಗ, ಬಾಯಿಯಲ್ಲಿನ ನೀರು ಹನಿ ಹನಿಯಾಗಿ ಕೊಳವೆಯಿಂದ ಚಿಮ್ಮಿ ಹೊರಬರುತ್ತವೆ. ಹೀಗೆ ನಾಲಿಗೆಯನ್ನು ನಿಯಂತ್ರಿಸುವುದರಿಂದ ನೀರಿನ ಹನಿಗಳನ್ನು ಸಾಲು ಸಾಲಾಗಿ ಬಲು ಬಿರುಸಿನಿಂದ ಸುಮಾರು ಆರು ಅಡಿ ದೂರದವರೆಗೂ ಈ ಮೀನು ಚಿಮ್ಮಿಸಬಲ್ಲದು. ಕೀಟಗಳೇ ಈ ಮೀನಿನ ಮುಖ್ಯ ಆಹಾರವಾದ್ದರಿಂದ ಇದಕ್ಕೆ ನೀರಿನೊಳಗಿನ ದೃಷ್ಟಿಗಿಂತಲೂ ಹೊರಗಿನ ದೃಷ್ಟಿ ಪ್ರಾಮುಖ್ಯವಾದುದು. ಅದಕ್ಕನುಗುಣವಾಗಿ ಕಣ್ಣಿನಲ್ಲಿ ಕೆಲವು ಸೂಕ್ಷ್ಮ ಮಾರ್ಪಾಡುಗಳುಂಟಾಗಿವೆಯಲ್ಲದೆ, ಅದು ತನ್ನ ಕಣ್ಣುಗಳನ್ನು ಸುತ್ತಲೂ ತಿರುಗಿಸಬಲ್ಲದು. ಆರ್ಚರ್ ಮೀನು ಚಿಕ್ಕ ಮರಿಯಿದ್ದಾಗಲೇ ನೀರಿನ ಹನಿಗಳನ್ನು ಕೆಲವೇ ಇಂಚುಗಳಷ್ಟು ದೂರ ಚಿಮ್ಮಿಸಲು ಕಲಿಯುತ್ತದೆ. ಮರಿ ಬೆಳೆಯುತ್ತಾ ಹೋದಂತೆ ಅವುಗಳ ಈ ಸಾಮರ್ಥ್ಯವೂ ಹೆಚ್ಚುತ್ತಾ ಹೋಗಿ ಪ್ರಬುದ್ಧ ಮೀನು ಸುಮಾರು ಆರು ಅಡಿ ದೂರದವರೆಗೂ ನಿಖರವಾಗಿ ಗುರಿ ಇಡಬಲ್ಲ ಶಕ್ತಿಯನ್ನು ಪಡೆಯುತ್ತದೆ.

ಡಾ. ಸ್ಮಿತ್‌ರವರ ಮನೆಯ ಕೊಳದಲ್ಲಿ ವಾಸಿಸುತ್ತಿದ್ದ ಆರ್ಚರ್ ಮೀನುಗಳು ಅವರ ಗೆಳೆಯರಿಗೊಂದು ಆಕರ್ಷಣೀಯ ದೃಶ್ಯವಾಗಿತ್ತು. ನಮ್ಮ ವಿಹಾರಧಾಮಗಳಲ್ಲೂ ಪ್ರವಾಸಿಗರಿಗೆ ಈ ಮೀನು ಒಂದು ಮನೋರಂಜನೀಯ ವಸ್ತುವಾಗಬಹುದಲ್ಲವೆ? ✡



# ತ್ಯಾಗದಿಂದ ನಮ್ಮನ್ನುಳಿಸಿ

ಲಾಂಗೂಲಾಚಾರ್ಯ

ಈ ಭಾರತದಲ್ಲಿ ನಾನು ತುಂಬಾ ಪ್ರೀತಿಸುವ ಶಬ್ದಗಳಲ್ಲಿ ಸತ್ಯ ಮತ್ತು ಸೇವೆಯ ನಂತರ ತ್ಯಾಗ ಎಂಬುದು ಬರುತ್ತದೆ. ನಿಜವಾಗಿ ಈ ದೇಶಕ್ಕಾಗಿ ಇಷ್ಟೆಲ್ಲ ಜನರು ಇಷ್ಟೆಲ್ಲ ತ್ಯಾಗ ಮಾಡದೆ ಹೋಗಿದ್ದರೆ ಈಗ ನಾವು ಇಷ್ಟೆಲ್ಲ ತೊಂದರೆಗೆ ಈಡಾಗುತ್ತಿರಲಿಲ್ಲವೆಂದು ನಾನು ನಂಬುತ್ತೇನೆ. ಈಗ ಕೂಡ ಜನರು ಭಾರತ ಮಾತೆಗಾಗಿ, ಕರ್ನಾಟಕ ಮಾತೆಗಾಗಿ ಮತ್ತು ಇನ್ನಿತರ ಮಾತೆಯರಿಗಾಗಿ ತ್ಯಾಗ ಮಾಡುತ್ತಲೇ ಇರುವುದನ್ನು ನೋಡಿದರೆ, ನನಗೆ ಭವಿಷತ್ತಿನ ಬಗ್ಗೆ ಬಹಳ ಭಯವಾಗುತ್ತದೆ.

ನಮ್ಮ ಪುಣ್ಯಭೂಮಿಯಾದ ಭಾರತಭೂಮಿ ಮೊದಲಿನಿಂದಲೂ ತ್ಯಾಗಕ್ಕೆ ಹೆಸರಾದದ್ದು. ಇಲ್ಲಿ ಯಾರೂ ತ್ಯಾಗವನ್ನು ಹೊರತು ಬೇರೇನನ್ನೂ ಮಾಡಲಿಲ್ಲ. ಇಲ್ಲಿ ಅರಸರು ದೇಶ ದೇಶಗಳ ಮೇಲೆ ದಂಡೆತ್ತಿಹೋಗಿ ಮಾರಾಂತವರನ್ನು ಸೀಳಿ ಅವರ ಸಂಪತ್ತನ್ನು ಸುಲಿಗೆ ಮಾಡಿ ತರುತ್ತಿದ್ದರು; ಆಮೇಲೆ ಭಾರಿ ಯಜ್ಞಗಳನ್ನು ಮಾಡಿ ಆಕಾಶವನ್ನು ಹೊಗೆಯಿಂದಲೂ ಊರನ್ನು ಮಂತ್ರ ಕೋಲಾಹಲದಿಂದಲೂ ತುಂಬಿ, ಸುಡದೇ ಉಳಿದದ್ದನ್ನೆಲ್ಲ ಬ್ರಾಹ್ಮಣರಿಗೆ ದಾನ ಮಾಡಿ ಕೇವಲ ಮುತ್ತಿನ ಥಾಲಿಯನ್ನು ಮಾತ್ರ ಉಳಿಸಿಕೊಳ್ಳುತ್ತಿದ್ದರು. ಎಂಥಾ ಅದ್ಭುತ ತ್ಯಾಗ! ಆದರೆ ಅಷ್ಟೆಲ್ಲ ಸುಲಿಗೆಯನ್ನು ಮಾಡಿದ್ದು ಅನ್ಯಾಯ ವಲ್ಲವೆ? ಎಂದು ನೀವು ಕೇಳುತ್ತೀರಿ. ಹೌದು; ಆದರೆ ಸುಲಿಗೆ ಮಾಡಿ ತಾರದಿದ್ದರೆ ತ್ಯಾಗ ಮಾಡುವುದು ಹೇಗೆ?

ಶ್ರೀರಾಮ ತಂದೆಯ ಮಾತನ್ನು ಉಳಿಸುವುದಕ್ಕಾಗಿ ರಾಜ್ಯತ್ಯಾಗ ಮಾಡಿದ; ಅಗಸನ ಮಾತಿನಿಂದ ಉಳಿದುಕೊಳ್ಳುವದಕ್ಕಾಗಿ ಹೆಂಡತಿಯನ್ನು ತ್ಯಾಗಮಾಡಿದ. ಒಂದನೇ ತ್ಯಾಗವನ್ನು ಮಾಡುವ ಮಜ್ಜಿಗೆ ಬಿದ್ದಿರದಿದ್ದರೆ ಅವನು ಎರಡನೇ ತ್ಯಾಗದಿಂದ ತಪ್ಪಿಸಿಕೊಳ್ಳಬಹುದಾಗಿತ್ತು. ಆದರೆ ತ್ಯಾಗ ಮಾಡದಿದ್ದರೆ ರಾಮಚಂದ್ರನಿಗೆ ಜೈಸಿಯೇ ಅನಿಸುತ್ತಿರಲಿಲ್ಲ. ಅವನು ಒಂದು ತ್ಯಾಗದಿಂದ ಇನ್ನೊಂದು ತ್ಯಾಗಕ್ಕೆ ಜಿಗಿಯುತ್ತಿದ್ದ.

ಧರ್ಮರಾಜನ ಕೇಸು ಅದಕ್ಕಿಂತಲೂ ಕಷ್ಟವಾಗಿತ್ತು. ಅವನು ಸತ್ಯಕ್ಕಾಗಿ ರಾಜ್ಯತ್ಯಾಗ ಮಾಡಬೇಕಾಯಿತು; ಆಮೇಲೆ ರಾಜ್ಯಕ್ಕಾಗಿ ಸತ್ಯವನ್ನೇ ತ್ಯಾಗ ಮಾಡಬೇಕಾಯಿತು.

ನಮ್ಮ ರಾಜಕಾರಣಿಗಳು ಜೀವನದುದ್ದಕ್ಕೂ ತ್ಯಾಗ ಮಾಡಿದರು. ಅವರು ಶಾಲಾತ್ಯಾಗ ಮಾಡಿದರು; ನೌಕರಿ ತ್ಯಾಗ ಮಾಡಿದರು; ಪ್ರ್ಯಾಕ್ಟೀಸು ತ್ಯಾಗ ಮಾಡಿದರು; ಮನೆಮಾರು ತ್ಯಾಗ ಮಾಡಿದರು; ಆಸ್ತಿ ತ್ಯಾಗ ಮಾಡಿದರು; ಹೆಂಡರು ಮಕ್ಕಳ ಜವಾಬ್ದಾರಿ ತ್ಯಾಗ ಮಾಡಿದರು. ಮತ್ತೆ ಇದನ್ನೆಲ್ಲ ಸ್ವಂತಕ್ಕಾಗಿ ತ್ಯಾಗ ಮಾಡದೆ, ದೇಶಕ್ಕಾಗಿ ತ್ಯಾಗ ಮಾಡಿದರು.

ನಿಜ, ಕೆಲವರು ಕುಹಕಿಗಳೇನೋ ಹೇಳುತ್ತಾರೆ, ಇದರಲ್ಲಿ ಎಷ್ಟೋ ಅನುಕೂಲ ತ್ಯಾಗಗಳಾಗಿದ್ದವೆಂದು. ದೇಶಕ್ಕಾಗಿ ಶಾಲಾತ್ಯಾಗ ಮಾಡದೇ ಬಿಟ್ಟಿದ್ದರೆ ಶಾಲೆಯೇ ಅವರನ್ನು ತ್ಯಾಗ ಮಾಡುತ್ತಿತ್ತು; ಪರೀಕ್ಷೆಗಳಲ್ಲಿ ಮೇಲೆ ಬೀಳುವಷ್ಟು ಮಿದುಳು ಅವರಲ್ಲಿರಲಿಲ್ಲ. ಕೆಲವರು ಮಕ್ಕಳಿಂದ ದೇಶಕ್ಕಾಗಿ ಈ ದೇಶದಲ್ಲಿ ಶಾಲಾ ತ್ಯಾಗ ಮಾಡಿಸಿ ಪರದೇಶಗಳಲ್ಲಿ ಶಾಲೆಗೆ ಹಾಕಿದರು. ಪ್ರ್ಯಾಕ್ಟೀಸು ಮೊದಲೇ ಅವರ ಹತ್ತಿರ ಬಾರದಿದ್ದರಿಂದ, ದ್ರಾಕ್ಷಿ ತ್ಯಾಗ ಮಾಡಿದ

ನರಿಯಣ್ಣನಂತೆ ಅವರೂ ಪ್ರ್ಯಾಕ್ಟೀಸು ತ್ಯಾಗ ಮಾಡಿದರು. ಈ ತ್ಯಾಗಮೂರ್ತಿಗಳಲ್ಲಿ ಅನೇಕರಿಗೆ ಸ್ವಂತವಾಗಿ ಒಂದು ರೂಪಾಯಿ ಕೂಡ ಗಳಿಸಿ ಗೊತ್ತಿರಲಿಲ್ಲ. ಅವರು ತಮ್ಮಲ್ಲಿಲ್ಲದ್ದನ್ನು ಧಾರಾಳ ವಾಗಿ ತ್ಯಾಗ ಮಾಡಿಬಿಟ್ಟರು—ಇತ್ಯಾದಿ ಕುಹಕಿ ಗಳ ಇವೆಲ್ಲ ಟೀಕೆಗಳನ್ನು ನಾನು ಒಪ್ಪುವದಿಲ್ಲ. ಇವರೆಲ್ಲ ತ್ಯಾಗ ಮಾಡುತ್ತಿದ್ದಾಗ ಸಂಭಾವಿತ ಮನುಷ್ಯರೇ ಆಗಿದ್ದರೆಂದು ನಾನು ನಂಬಿದ್ದೇನೆ. ಭಾರತಮಾತೆ, ಕರ್ನಾಟಕಮಾತೆ ಮತ್ತು ಇತರ ಮಾತೆಯರಿಗಾಗಿ ಅವರು ಅತ್ಯಂತ ನಿಃಸ್ವಾರ್ಥ ದಿಂದಲೇ ತ್ಯಾಗ ಮಾಡಿದರು. ಅಥವಾ ತ್ಯಾಗ ಮಾಡುತ್ತಿದ್ದೇವೆಂದು ಅವರು ನಂಬಿದ್ದರು.

ಆಮೇಲೆ ಒಂದು ದಿನ ಹೇಳದೆ ಕೇಳದೆ ಸ್ವರಾಜ್ಯ ಬಂತು: ಅದೇ ಎಲ್ಲ ತೊಂದರೆಗಳ ಮೂಲವಾಯಿತು. ಏಕೀಕರಣ ಮೊದಲಾದವು ಬಂದವು: ಇದು ಇನ್ನಷ್ಟು ತೊಂದರೆಗಳನ್ನು ತಂದಿತು. ಆಮೇಲೆ ಈ ತ್ಯಾಗಿಗಳಲ್ಲಿ ಅನೇಕರಿಗೆ ತ್ಯಾಗ ಮಾರ್ಗ ಬಂದಾಗಿಹೋಯಿತು. ಇನ್ನು ಏನನ್ನು, ಹೇಗೆ, ಯಾರಿಗಾಗಿ ತ್ಯಾಗ ಮಾಡ ಬೇಕೆಂದೇ ಅವರಿಗೆ ಹೊಳೆಯಲಿಲ್ಲ.

ವಾಸ್ತವಿಕವಾಗಿ ಆ ನಂತರ ತ್ಯಾಗ ಮಾಡಬಹು ದಾದ ವಸ್ತು ಒಂದೇ ಎಂದು ಅವರಿಗೆ ಗೋಚರ-ವಾಯಿತು. ಅದೆಂದರೆ ಮಾನ ಮರ್ಯಾದೆ; ನೀತಿ–ನಿಷ್ಠೆ. ಇವುಗಳನ್ನು ತ್ಯಾಗ ಮಾಡುವಷ್ಟು ಪರಮ ತ್ಯಾಗಬುದ್ಧಿ ಇಲ್ಲದಿದ್ದವರು ಪ್ರಪಂಚದಲ್ಲಿ ತ್ಯಾಗ ಮಾಡಬಾರದ್ದು ಕೂಡ ಇದೆಯೆಂದು ಗೋಗರೆದರು. ಆದರೆ ಯಾರಿಗೂ ಅವರನ್ನು ಕೇಳಲು ಪುರುಸೊತ್ತು ಇರಲಿಲ್ಲ. ಗೋಗರೆದವರು ಅಡವೀ ಪಾಲಾಗಿ ಗಾಂಧೀ ಪುರಾಣವನ್ನು ಓದ-ಬೇಕಾಯಿತು. ಆದರೆ ಅವರಿಗೆ ಶ್ರೋತೃಗಳು ಸಿಗಬೇಕಲ್ಲ.

ಆಗ ದೇಶದಲ್ಲಿ "ತ್ಯಾಗ–ಭೋಗ ಸಮನ್ವಯ" ಮನ್ವಂತರ ಪ್ರಾರಂಭವಾಯಿತು. ತ್ಯಾಗಭೋಗ ಸಮನ್ವಯ ಎಂದರೆ ಹಿಂದೆ ಮಾಡಿದ ತ್ಯಾಗಗಳಿಗೆ ಸಮವಾದ ಅಂದರೆ ಅಸಲು ಚಕ್ರಬಡ್ಡಿ ಸಮೇತ ವಾದ ಭೋಗಗಳನ್ನು ಅನುಭವಿಸುವುದು. ಎಷ್ಟೋ ವೇಳೆ ಮಾರವಾಡಿ, ಪಠಾಣಿ ದರದಲ್ಲಿ ಬಡ್ಡಿ ಲೆಕ್ಕಾಚಾರವಾಯಿತು. ಕೆಲ ವೇಳೆ ಅಸಲನ್ನೇ ಮ್ಯಾನಿಪ್ಯುಲೇಟ್ ಮಾಡುವ ಅಗತ್ಯವೂ ಕಾಣಿಸಿತು. ರಾಜಕಾರಣಿಗಳ ಅಧಿಕೃತ ಚರಿತ್ರ-ಕಾರರು ತಮ್ಮ ದಾತೃಗಳು ಪರಿತ್ಯಾಗ ಮಾಡಿದ ಸಾವಿರಗಟ್ಟಳೆಯ ಪ್ರ್ಯಾಕ್ಟೀಸಿನ ಕಥೆಗಳನ್ನು ಸೃಷ್ಟಿಸತೊಡಗಿದರು.

ಅವರನ್ನು ನಾನು ದೂರುವದಿಲ್ಲ. ತಪ್ಪು ಅವರದಲ್ಲ, ನಮ್ಮದು. ಏಕಾದಶಿ ಉಪವಾಸ ಮಾಡದೆ ಇದ್ದವರಾರಿಗೂ ದ್ವಾದಶಿಯ ದೋಸೆಗೆ ಹಕ್ಕಿಲ್ಲವೆಂದು ನಾವು ನಂಬುತ್ತೇವೆ. ಇದರಿಂದಾಗಿ ಏಕಾದಶಿ ಆಹಾರತ್ಯಾಗ ಮಾಡುವವರೆಲ್ಲರೂ ದ್ವಾದಶೀ ದೋಸೆಯ ಚಿಂತೆಯಲ್ಲಿರುತ್ತಾರೆ ಮಾತ್ರವಲ್ಲ, ದ್ವಾದಶೀ ದೋಸೆಯನ್ನು ಅಪೇಕ್ಷಿ-ಸುವವರೆಲ್ಲರೂ ಏಕಾದಶೀ ನಿರ್ಜಲೋಪವಾಸದ ಕ್ಲೇಮುಗಳನ್ನು ಸಾಕ್ಷಿ ಪುರಾವೆ ಸಹಿತವಾಗಿ ಮುಂದೊಡ್ಡಬೇಕಾಗುತ್ತದೆ.

ನಾನು ತ್ಯಾಗವನ್ನು ದ್ವೇಷಿಸುವದು ಇದಕ್ಕಾಗಿ, ಅಂದರೆ ತ್ಯಾಗದ ಸಾಕ್ಷಿ ಸೃಷ್ಟನೆಯಾಗುತ್ತಿ-ದೆಂಬುದಕ್ಕಾಗಿ, ಅಲ್ಲ. ನಿಜವಾಗಿ ದೇವರ ಪ್ರೀತಿ ಗಾಗಿ ಏಕಾದಶಿ ಮಾಡುತ್ತಿದ್ದೇವೆಂದು ನಂಬಿ ನಡೆದವರು ಕೂಡ, ದ್ವಾದಶಿಯ ಪ್ರಸಾದ ವಿತರಣೆಯಲ್ಲಿ ನಡೆದ ಸುಗ್ಗಾಟದಲ್ಲಿ ಹಸಿವೆ ತಾಳಲಾರದೆ ಎರಡೂ ಕೈಗಳಿಂದ ತ್ಯಾಗ ಭೋಗ ಸಮನ್ವಯ ಮಾಡಿಕೊಳ್ಳುವುದನ್ನು ನೋಡಿ ನನಗೆ ಕಣ್ಣೀರು ಬರುತ್ತದೆ. ಈ ಸಂಭಾವಿತ ಜನರನ್ನು ಈ ಅವಸ್ಥೆಗೆ ಇಳಿಸಿದ ತ್ಯಾಗವನ್ನು ನೋಡಿ ನನಗೆ ಸಿಟ್ಟು ಬರುತ್ತದೆ. ಈ ಬಡಪಾಯಿಗಳು ತ್ಯಾಗದ ಮಬ್ಬಿಗೆ ಬಿದ್ದಿರದಿದ್ದರೆ, ಅವರು ತಮ್ಮ ತಮ್ಮ ನಿರುಪದ್ರವಿ ಸ್ವಾರ್ಥಗಳನ್ನು ಅನುಭವಿಸುತ್ತ ಇದ್ದಿದ್ದರೆ, ದೇಶಕ್ಕೆ ಸ್ವಾತಂತ್ರ್ಯ ಬರುವುದು ತಡವಾಗುತ್ತಿರಲಿಲ್ಲ; ಆಗಿದ್ದರೂ ಚಿಂತೆ ಇರಲಿಲ್ಲ; ದೇಶಕ್ಕಾಗಿ ಅನ್ನ–ನೀರು ಬಿಟ್ಟು ಊರೂರು ಅಲೆದವರೇ ಮಕ್ಕಳಿಗಾಗಿ ಪರದೇಶಗಳು ಕಳಿಸಿದ ಹಾಲಿನ ಪುಡಿಯನ್ನು ಕಳ್ಳಪೇಟೆಗೆ ಕಳಿಸುವ ದೃಶ್ಯಗಳು ಕಾಣಿಸುತ್ತಿರಲಿಲ್ಲ. ❀

(‹ಕಸ್ತೂರಿ› ೧೯೭೦ನೆಯ ಎಪ್ರಿಲ್ ಸಂಚಿಕೆ ಯಿಂದ ಈ ಲೇಖನವನ್ನು ಎತ್ತಿಕೊಡುತ್ತಿದ್ದೇವೆ. —ಸಂಪಾದಕ)

ರಾಜೇಶ್ವರಿ ಎಸ್.

# ಹಿಂದಿರುಗಿ ಬಾ ಮಿತ್ರ

ಸೂರ್ಯ ಕಾಡುಗಳಿಂದಾಚೆ ಅಸ್ತಮಿಸುತ್ತಿದ್ದ. ಅವನ ಕಿರಣಗಳು, ಬಂಡೆಗಳು, ನದಿ ನೀರನ್ನು ದಾಟಿ ನಮ್ಮನ್ನು ಸ್ಪರ್ಶಿಸುತ್ತಿದ್ದವು. ರಘು ಹಾಡುತ್ತಲೇ ಇದ್ದ. ಮ್ಯಾನೇಜರ್ ರಾತ್ರಿಯಾಗುತ್ತಿದೆಯೆಂದು ಎಚ್ಚರಿಸಿದರು. ನಮಗಾರಿಗೂ ಏಳಲು ಮನಸ್ಸಿಲ್ಲ. ರಘುವಿನ ಮಧುರ ಕಂಠಕ್ಕೆ ಕಾಡು ಮಾರ್ದನಿ ಕೊಡುತ್ತಿತ್ತು. ಅವನ ಕಣ್ಣುಗಳು ನಮ್ಮಿಂದಾಚೆ, ಕಾಡಿನಿಂದಾಚೆ ದೂರದ ನೀಲ ಕ್ಷಿತಿಜದಲ್ಲಿ ನೆಟ್ಟಿದ್ದವು— ಯಾವುದೋ ನೆನಪನ್ನು ಸವಿಯುತ್ತಿರುವಂತೆ "ಪ್ರೌಟ್ಕೆ ಅ..." (ಹಿಂದಿರುಗಿ ಬಾ) ಬಾರಿ ಬಾರಿ ಆವರ್ತಿಸುತ್ತಿದ್ದ. ಕಾಳಿನದಿ ಕಾಳಿಯಾಗಿರದೆ ಲಲಿತೆಯಾಗಿ ತೋರುತ್ತಿದ್ದಳು. ಗಣೇಶಗುಡಿಯಲ್ಲಿ ಹಲವಾರು ವರ್ಷಗಳನ್ನು ಕಳೆದು ಹಿಂಸ್ರ ಪ್ರಾಣಿಗಳ ಪರಿಚಯವಿದ್ದ ಮ್ಯಾನೇಜರ್ ನಮ್ಮನ್ನು ಬಿಡಲೊಲ್ಲರು. ಡಿಸೆಂಬರ್ ೩೧ ನಮಗೆಲ್ಲ ಒಂದು ವರುಷದ ಲೆಕ್ಕ ತೀರಿದ ಸಂತೋಷ. ಮತ್ತೆ ಪುನಃ ಅದೇ ಬ್ಯಾಂಕು; ಅದೇ ಯಾಂತ್ರಿಕತೆ ಇದ್ದೇ ಇದೆ. ರಘು ಹಾಡಿನ ಕೊನೆಯ ಚರಣಗಳನ್ನು ಪುನಃ ಪುನಃ ಹಾಡುತ್ತಿದ್ದ. ಮತ್ತೆ ತಟ್ಟನೆ ನಿಲ್ಲಿಸಿಬಿಟ್ಟ.

ಗಣೇಶ ಗುಡಿಯ ಗಿಡಬಂಡೆಗಳು ನನಗೆ ಈ ಎರಡು ವರುಷದ ಅವಧಿಯಲ್ಲಿ ಚಿರಪರಿಚಿತವಾಗಿದ್ದವು. ನಾನೂ ರಘುವೂ ಸ್ವಲ್ಪ ದೂರ ಮಾತಾಡುತ್ತ ನಡೆದೆವು. ನನ್ನ ಮಾತಿಗೆ ರಘು ಅನ್ಯಮನಸ್ಕನಾಗಿ ಹ್ಞೂಗುಡುತ್ತಿದ್ದವ ತಟ್ಟನೆ ನಿಂತುಬಿಟ್ಟ. ಸಮೀಪದ ಬಂಡೆಯೊಂದರ ಮೇಲೆ ಕಾಲನ್ನು ನೀರಲ್ಲಿ ಇಳಿಬಿಟ್ಟು ಕುಳಿತುಕೊಂಡೆವು. ಕಿರಣನ ಹಾಡು ಕೇಳಿ ಬರುತ್ತಿತ್ತು. ಮಂಗಳೂರಿನವನಾದ ಅವನು ತುಳುಗೀತೆಯೊಂದನ್ನು ಹಾಡುತ್ತಿದ್ದ. "ರಾಜು, ಈ ಜೀವನ ಇಷ್ಟೆಯೆ?" ಯೋಚನೆಯಲ್ಲಿ ಮುಳುಗಿದ್ದ ರಘು ತಟ್ಟನೆ ಏನೋ ಹೇಳುವಂತೆ ಬಾಯಿ ತೆರೆದ. ಆದರೆ ಅಷ್ಟರಲ್ಲಿ ಜೀಪಿನವನ ಸಿಳ್ಳನ್ನು ಕೇಳಿ ನಾವೆಲ್ಲ ಹೊರಡಬೇಕಾಯಿತು.

ರಘು ನನ್ನ ರೂಂ-ಮೇಟ್ ಆಗಿ ಅರ್ಧ ರೂಂ ಆವರಿಸಿದ್ದ. ಅದರೊಟ್ಟಿಗೆ ನನ್ನ ಹೃದಯವನ್ನೂ ಪೂರ್ತಿಯಾಗಿ ಆವರಿಸಿಬಿಟ್ಟಿದ್ದ. ನಿಜ ಹೇಳಬೇಕೆಂದರೆ ರಘುವೆಂದರೆ ಬ್ಯಾಂಕಿನ ಸ್ತ್ರೀ ಸಹೋದ್ಯೋಗಿಗಳು ಮಾರು ದೂರದಲ್ಲಿ ನಿಂತು ಮಾತಾಡಿಸುವರು. ಕುಡುಕ ಎಂಬ ಬಿರುದನ್ನೂ ಹೊತ್ತ ರಘು ಎಲ್ಲ ಚಾಳಿಗಳೂ ಕರಗತವಾದವನು.



ದಿನಕ್ಕೆ ಮೂರು ಸಿಗರೇಟ್ ಪ್ಯಾಕ್ ಖಾಲಿ ಮಾಡುತ್ತಿದ್ದ. ಆದರೂ ಮಹಾ ಸಂಪ್ರದಾಯವಾದಿಯೆನಿಸಿದ್ದ ನನ್ನ ಹೃದಯವನ್ನು ಗೆದ್ದುಬಿಟ್ಟಿದ್ದ. ಆರೋಗ್ಯವಾಗಿಯೇ ಇದ್ದನಾದರೂ ಒಂದು ದಿನ ಇಷ್ಟಕ್ಕಿದ್ದಂತೆ ಡ್ಯೂಟಿಗೆ ಬರುವದಿಲ್ಲವೆಂದು ಹೇಳಿದ. ಅರ್ಥವಾಗದವನಂತೆ ಅವನ ಮುಖ ನೋಡಿದೆ.

"ಒಂದು ಒಳ್ಳೆಯ ಮಾಲು ಸಿಕ್ಕಿದೆ ಕಣೋ! ಬರ್ತಿಯೇನೋ?" ಕಣ್ಣು ಹೊಡೆದ. ನನ್ನ ಎದೆ ಹೊಡೆತ ಒಂದು ಸಲ ನಿಂತಂತಾಯಿತು. ಇವನಿಗೆ ಕಾಮಕೇಳಿಗೆ ಹಗಲು ರಾತ್ರಿಯೆಂದಿಲ್ಲವೇ? "ನೀನು ಹೋಗಿ ಬಾ, ನಾಸಿವತ್ತು ಆರಾಮಾಗಿಲ್ಲ," ಸಬೂಬು ಹೇಳಿದೆ. "ನೀನು ಯಾವಾಗಲೂ ಹೀಗೇ ಹೇಳುತ್ತಿ. ಒಂದು ಬಾರಿ ಬಾರಲ್ಲ. ಜೀವನ ಎಂದರೆ ಏನೆಂದು ತಿಳಿದುಕೊ!" ಎಂದು ಸಿಳ್ಳು ಹಾಕುತ್ತ ಹೊರಟು ಹೋದ.

ಎಲ್ಲರ ದೃಷ್ಟಿಯಲ್ಲಿ ನಾನಿನ್ನೂ ಹುಡುಗ. ಮಹಿಳಾ ಸಹೋದ್ಯೋಗಿಗಳು ನನ್ನೊಡನೆ ಸಲಿಗೆಯಿಂದ ಮಾತನಾಡುತ್ತಿದ್ದರು. ಕುರ್ಚಿಯಲ್ಲಿ ಕುಳಿತು ತಲೆ ತಗ್ಗಿಸಿ ಬರೆಯುತ್ತಿದ್ದರೆ ಹತ್ತಿರವೇ ನಿಂತು ಏನಾದರೂ ಕೇಳುತ್ತಿದ್ದರು. ಒಂದೊಂದು ಸಲ ನಾನು ತಲೆ ಎತ್ತಿದಾಗ ಅವರ ಎದೆಗೆ ನನ್ನ ತಲೆ ತಾಗಿಬಿಡುತ್ತಿತ್ತು. ಆಗ ಏನೋ ಒಂದು ತರಹ ಕಸಿವಿಸಿ. ಮನೆಯಲ್ಲಿ ಅರ್ಧ ಡಜನ್ ಸಹೋದರಿಯರುಳ್ಳ ನನ್ನಿಂದ ರೋಮಾಂಚಕಾರೀ ಭಾವನೆಗಳು ಸ್ವಲ್ಪ ದೂರವೇ ಉಳಿದಿದ್ದವು. ರಘು ನೀಡುತ್ತಿದ್ದ ಉಪದೇಶಗಳೆಲ್ಲ ಕ್ಷಣಕಾಲ ಪರಿಣಾಮ ಬೀರಿ ಮಾಯವಾಗುತ್ತಿದ್ದವು.

ಇಬ್ಬರೂ ಊಟ ಮುಗಿಸಿ ಬಂದೆವು. ನನ್ನ ಕಣ್ಣುಗಳು ಎಳೆಯುತ್ತಿದ್ದವು. ಮಲಗುತ್ತಿದ್ದಂತೆಯೆ ಗಾಢ ನಿದ್ರೆಯಲ್ಲಿ ಮುಳುಗಿ ಬಿಟ್ಟೆ. ರಾತ್ರಿ ಇದ್ದಕ್ಕಿದ್ದಂತೆ ಯಾರೋ ನನ್ನನ್ನು ಅಪ್ಪಿ ಹಿಡಿದಿರುವಂತೆ ಅನಿಸಿತು. ಕಣ್ಣಿನಿಂದ ನಿದ್ದೆ ಬಿಡೆಲೊಲ್ಲೆನೆಂಬಂತೆ ಹಿಡಿದಿತ್ತು. ಆದರೂ ಹಿಡಿತ ಬಿಗಿಯಾಗುತ್ತಿರುವ ಅರಿವು. ಮೈ ಮೇಲಿನ ಬಟ್ಟೆಯನ್ನು ಕಳಚುತ್ತಿರುವಂತೆ, ನನ್ನ ತುಟಿಯ ಮೇಲೆ ಇನ್ನಾರದೋ ತುಟಿ, ಮೀಸೆ. ತಟ್ಟನೆ

ಎದ್ದು ಲೈಟು ಹಾಕಿದೆ. ರಘು ಅರೆ ನಗ್ನ-ನಾಗಿ ನಿಂತಿದ್ದ. ತಟ್ಟನೆ ಎಚ್ಚೆತ್ತವನಂತೆ. "ಅರೆ, ರಾಜು ನೀನು!" ಮತ್ತೆ ಮಲಗಿಕೊಂಡ. ಬೆಳಿಗ್ಗೆದ್ದಾಗ ಈ ಸಲ ವಿಷಯ ಯಾರಿಗೂ ಹೇಳಬೇಡವೆಂದ. ಬೆಳಗಿನ ಹೊತ್ತು ಸಾಮಾನ್ಯವಾಗಿ ಬಾಲ್ಕನಿಯಲ್ಲಿ ನಿಂತು ಅವನು ಶಾಲೆ ಕಾಲೇಜಿಗೆ ಹೋಗುವ ಬಾಲೆಯರನ್ನು ದಿಟ್ಟಿಸಿ ನೋಡುತ್ತಿದ್ದ. ನಾನೂ ಒಂದೊಂದು ಸಲ ಅವನೊಂದಿಗೆ ಹೊತ್ತು ಕಳೆಯುತ್ತಿದ್ದೆ. "ರಾಜು, ನೀನು ಹುಡುಗಿಯರನ್ನು ಯಾವ ಉಡುಪಿನಲ್ಲಿ ನೋಡಲು ಇಷ್ಟಪಡುತ್ತಿ?" ಅವನ ಪ್ರಶ್ನೆಗೆ ಏನು ಹೇಳಬೇಕೆಂದೇ ತೋಚಲಿಲ್ಲ ನನಗೆ. "ಸೀರೆಯಲ್ಲಿ" ಎಂದುಬಿಟ್ಟೆ. "ಹಾಗಿದ್ದಾ...ಅಲ್ಲಿ ನೋಡು. ಐ ಲೈಕ್ ದ್ಯಾಟ್ ಡ್ರೆಸ್" ಎಂದು ಬೆರಳು ಮಾಡಿದ. ರಸ್ತೆಯಲ್ಲಿ ಇಬ್ಬರು ಹುಡುಗಿಯರು ಹೋಗುತ್ತಿದ್ದರು. ಒಬ್ಬಳು ಚೂಡಿದಾರ, ಇನ್ನೊಬ್ಬಳು ಪ್ಯಾಂಟ್ ತೊಟ್ಟಿದ್ದಳು. "ಅವರ ತೊಡೆಯ ನಡುವೆ ನೋಡು!" ಕಿವಿಯಲ್ಲಿ ಪಿಸುಗುಟ್ಟಿದ. ಗಾಳಿಗೆ ಚೂಡಿದಾರ ಹಾಕಿದವಳ ಮೇಲಂಗಿ ಕಾಲುಗಳೆಡೆಗೆ ಹೋಗಿತ್ತು. ಅವಳ ತೊಡೆಯ ನಡುವಿನ ಭಾಗ ಸ್ಪಷ್ಟವಾಗಿ ಆಕೃತಿ ತಳೆದಂತೆ ಕಾಣುತ್ತಿತ್ತು. ಪ್ಯಾಂಟಿನ ಒಳ ತೊಡೆಯ ನಡುವೆ ಇನ್ನೂ ಚೆನ್ನಾಗಿ ಗೋಚರಿಸುತ್ತಿತ್ತು. ಏನೋ ಅನಿಸಿ ಮುಖ ತಿರುಗಿಸಿಬಿಟ್ಟೆ. ರಘು ಅವರಿಬ್ಬರೂ ಮರೆಯಾಗುವವರೆಗೆ ಅವರ ಎದೆಯ, ನಿತಂಬದ ಕುಲುಕಾಟವನ್ನು ನೋಡುತ್ತ ನಿಂತ. ಒಂದೊಂದು ಬಾರಿ ಬರೀ ಹಳ್ಳಿ ಹೆಂಗಸರು-ಬುಟ್ಟಿ ಹೊತ್ತುಕೊಂಡು ಸೆರಗನ್ನು ತಲೆ ತುಂಬಾ ಹೊದ್ದುಕೊಂಡವರು ಕಾಣಿಸುತ್ತಿದ್ದರು. ಆಗಲೆಲ್ಲ ಅತ ಗೊಣಗುತ್ತಿದ್ದ-"ಛತ್...ಹಳ್ಳಿ ಜಾತ್ರಿ ಜನಗಳು!"

ದಿನ ಕಳೆದಂತೆ ಅವನಂತೆ ನಾನೂ ಹುಡುಗಿಯರ ಫಿಗರ್ ಬಗ್ಗೆ ವಿಶ್ಲೇಷಣೆ ಮಾಡತೊಡಗಿದೆ. "ಓ... ನೀನೂ ದಾರಿಗೆ ಬರುತ್ತಿರುವೆ" ರಘು ಆನಂದದಿಂದ ಚಪ್ಪಾಳೆ ತಟ್ಟಿ ನುಡಿದಿದ. ನನಗೂ ಚೂಡಿದಾರ, ಪ್ಯಾಂಟ್ ತೊಟ್ಟ ಹುಡುಗಿಯರನ್ನು ನೋಡುವುದೆಂದರೆ ಇಷ್ಟ



ವೆನಿಸುತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅವರ ಶರೀರದ ಅಂಗ ಪ್ರತ್ಯಂಗಗಳು ಸರಿಯಾಗಿ ಈ ಡ್ರೆಸ್‌ನಲ್ಲಿ ಆಕಾರ ಪೂರ್ಣವಾಗಿ ಗೋಚರಿಸುತ್ತವೆ. ಗೋಪುರದಂತಹ ಅಥವಾ ಹೊಯ್ದಾಡುವ ಎದೆಗಳು ನನ್ನ ಎದೆಯನ್ನೂ ತಲ್ಲಣಿಸತೊಡಗಿದವು.

*

ದಾಂಡೇಲಿಯಿಂದ ಬಸ್ಸು ಏರಬೇಕಿತ್ತು. ನಿನ್ನೆಯಷ್ಟೇ ನನಗೂ ರಘುವಿಗೂ ಟ್ರಾನ್ಸ್‌ಫರ್ ಆರ್ಡರ್ ಬಂದುದು. ರಘು ಮಂಗಳೂರಿಗೆ, ನಾನು ಬೆಂಗಳೂರಿಗೆ. ಪ್ರಕೃತಿಯ ಮಡಿಲಲ್ಲಿ ಬೆಳೆದ ನನಗೆ ಬೆಂಗಳೂರು ಎಷ್ಟು ಮಾತ್ರಕ್ಕೂ ಇಷ್ಟವೆನಿಸಲಿಲ್ಲ. ರಘುವಿನ ಊರೇ ಮಂಗಳೂರು. "ನೀನು ಲಕ್ಕಿ" ಎಂದೆ ರಘುವಿಗೆ. "ಎಲ್ಲಿಯ ಲಕ್ ಮಾರಾಯ. ನಮ್ಮ ನಮ್ಮ ನಸೀಬು ಅಷ್ಟೆ," ನಿಡುಸುಯ್ದ ಆತ. ರಘು ಇಷ್ಟೊಂದು ನಿರಾಶನಾಗಿದ್ದನ್ನು ನಾನು ಎಂದೂ ನೋಡಿರಲಿಲ್ಲ. "ಸಮಾಧಾನ ಮಾಡಿಕೋ ರಘು" ಎಂದ. ನನ್ನ ಎದೆಯೂ ಭಾರವಾಗಿತ್ತು. ನನ್ನಲ್ಲೂ ಗಂಡಸುತನವಿದೆ. ಹೆಣ್ಣಿನ ಬಗೆಗೆ ನನ್ನಲ್ಲೂ ಭಾವನೆಗಳಿವೆ, ಎಂಬುದನ್ನು ಆತ ಹುಡುಕಿಕೊಟ್ಟಿದ್ದ. ರಘು ನನ್ನ ಜೊತೆ ಬಸ್‌ಸ್ಟ್ಯಾಂಡ್ ವರೆಗೆ ಹೊರಟ. ಕೊನೆಯ ಬಾರಿಗೆ ನಮ್ಮ ಆ ರೂಮನ್ನು— ನಾನೂ ಅವನೂ ಕೂಡಿ ಕಳೆದ ಕಷ್ಟ ಸುಖಗಳ ನೆನಪನ್ನು ಹೊತ್ತ, ನಮ್ಮ ನಮ್ಮ ಪ್ರಾಥಮಿಕ ನೈಸರ್ಗಿಕ ಬಯಕೆಗಳ ಸಾಕ್ಷಿಯಾದ ರೂಮನ್ನು ಕಣ್ಣಲ್ಲಿ ತುಂಬಿಕೊಂಡೆ. ಎದೆಯಲ್ಲಿ ಏನೋ ಒಂದು ಮಿಡಿತ. ರಘು ನಾಳೆ ಹೋಗುವವನು. ಇವತ್ತು ಬೆಳಿಗ್ಗೆಯಿಂದ ಒಂದೇ ಸಮನೆ ಸಿಗರೇಟ್ ಸೇದುತ್ತಿದ್ದ. ಕೆಮ್ಮುತ್ತಿದ್ದ ಕೂಡ. ಬಸ್ಸು ಹೊರಡುವವರೆಗೆ ರಸ್ತೆಯಲ್ಲಿ ರಘುವಿನೊಡನೆ ಮಾತನಾಡುತ್ತ ನಿಂತೆ. "ರಾಜು" ಅವನ ದನಿಯಲ್ಲಿ ಏನೋ ವಿಚಿತ್ರ ಕಂಪನ. "ನನ್ನ ದಿನಗಳು ಇನ್ನು ಕೇವಲ ಆರು ತಿಂಗಳುಗಳು. ಅದಕ್ಕೋಸ್ಕರ ಹೆಚ್ಚಿನ ಚಿಕಿತ್ಸೆಗೆ ಮಂಗಳೂರಿಗೆ ಹೋಗಲು ಅರ್ಜಿ ಹಾಕಿದ್ದೆ. ಅವನ ದನಿ ಭಾರವಾಗಿತ್ತು. ಷಾಕ್ ಹೊಡೆದಂತಾಯಿತು ನನಗೆ. ತಟ್ಟನೆ ಅವನ ಎರಡೂ ಭುಜಗಳನ್ನು ಹಿಡಿದು ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ. ಅವನ ಕಣ್ಣುಗಳು ದೂರದ ಕ್ಷಿತಿಜದಲ್ಲಿ ನೆಟ್ಟಿದ್ದವು. ಅದೇ "ಲೌಟ್‌ಕೆ ಆ..." ಹಾಡುವಾಗಿನ ನೆನಪಿನಲ್ಲಿ ಮುಳುಗಿದ ಕಣ್ಣು, ಮುಖ. "ನನ್ನ ಗಂಟಲಿನಲ್ಲಿ ಕ್ಯಾನ್ಸರ್ ಆಗಿದೆ. ನಿನ್ನ ಈ ದೋಸ್ತನನ್ನು ಮರೆಯುವುದಿಲ್ಲವಷ್ಟೆ!" ಪುನಃ ಸಿಗರೇಟ್ ಹಚ್ಚಿದ. ಡ್ರೈವರ್ ಹಾರ್ನ್ ಮಾಡುತ್ತಿದ್ದ. ವರಘುವನ್ನೊಮ್ಮೆ ಬಲವಾಗಿ ಅಪ್ಪಿ ತಟ್ಟನೆ ಕೊಸರಿ ಬಸ್ಸನ್ನು ಹತ್ತಿಬಿಟ್ಟೆ. ಕಾಣಿಸುವವರೆಗೆ ಕೈ ಬೀಸುತ್ತಿದ್ದ. ಸೂರ್ಯ ಮುಳುಗುತ್ತಿದ್ದ. ಗಣೇಶಗುಡಿ ದೂರದೂರವಾಗುತ್ತಿತ್ತು. ಕಾಳಿ ಹರಿಯುವ ದನಿ ಕ್ಷೀಣವಾಗಿ ದೂರದ ಕಾಡಿನಲ್ಲಿ ಲೀನವಾಗುತ್ತಿರುವಂತೆ, ಏನೋ ನೋವು ಹೃದಯವನ್ನೆಲ್ಲ ಆವರಿಸಿ ನರ ನರವನ್ನೂ ವ್ಯಾಪಿಸಿದಂತೆ, ಈಗ ತಾನೇ ಅಪ್ಪಿಕೊಂಡ ರಘುವಿನ ಮೈಯ ಬಿಸಿ ನನ್ನ ದೇಹದಲ್ಲೂ ಸೇರಿಕೊಂಡಂತೆ...ಆದರೆ ಬಸ್ಸು ಮುಂದೆ ಚಲಿಸಿದಂತೆಲ್ಲ ಪ್ರತಿ ನಿಮಿಷವೂ ನನ್ನಿಂದ ಎಷ್ಟು ದೂರವಾಗುತ್ತಿದ್ದಾನೆ ನನ್ನ ರಘು! ಪಶ್ಚಿಮದ ಕೆಂಪು ಬಾನಿನೊಡನೆ ಕಪ್ಪು ಕಪ್ಪಾಗಿ ತೋರುವ ಕಾಡು. ರಸ್ತೆಯುದ್ದಕ್ಕೂ ಹಬ್ಬಿರುವ ಕಾಡನ್ನು ಹಿಂದಕ್ಕೆ ತಳ್ಳಿ "ಸ್ಲೊ" ಗುಡುತ್ತ ಸಾಗಿರುವ ಬಸ್ಸು. ಪುನಃ ಅದೇ ಮುಖ... ದೂರದ ಕ್ಷಿತಿಜದಲ್ಲಿ ನೆಟ್ಟ ಕಣ್ಣುಗಳು. "ಇಕ ಪಲ್ ಹೈ ಹಸನಾ, ಇಕ ಪಲ್ ಹೈ ರೋನಾ... ದುನಿಯಾ ಹೈ ದೋ ದಿನ್ ಕಾ ಮೇಲಾ..." (ಒಮ್ಮೆ ನಗು, ಮರುಕ್ಷಣವೇ ಅಳು. ಈ ಪ್ರಪಂಚವೇ ಎರಡು ದಿನದ ಮೇಳ) ಅವನ ದನಿ ಇನ್ನೂ ಕಿವಿಯಲ್ಲಿ ಗುಂಯ್-ಗುಡುತ್ತಿತ್ತು. ನನ್ನ ದೇಹದಲ್ಲಿ ಎಲ್ಲೋ ಏನೋ ಕಳೆದುಕೊಂಡಂತೆ. ಸೀಟಿಗೆ ತಲೆ ಆನಿಸಿ ಬಿಡಲಾರದೆ ಬಿಡುವ ಗಣೇಶಗುಡಿಯನ್ನು ನೋಡಲಾರದೆ ಕಣ್ಣುಮುಚ್ಚಿದೆ. ✡

('ವಿನೀತಾ'ರವರ ಹಿಂದಿ ಕಥೆಯ ಸ್ಫೂರ್ತಿಯಿಂದ)



# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದಭಂಡಾರವು ಹಣದ ಭಾಂಡಾರಕ್ಕಿಂತಲೂ ಅನಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಸ್ವಯು
(ಅ) ಪ್ರಜ್ಞೆ (ಆ) ಅಸ್ತಿ (ಇ) ಧ್ವನಿ (ಈ) ಬಿಡುಗಡೆ

೨. ಅಂತಿಲೇ
(ಅ) ಕರಳು (ಆ) ಕೊನೆಯ (ಇ) ಸಾಲು (ಈ) ಹತ್ತಿರ

೩. ಕಾವಣ
(ಅ) ಕಡಾಯಿ (ಆ) ಬಿಸಿ (ಇ) ಹಂದರ (ಈ) ಕೆಲಸ

೪. ಜಜಿಯಾ
(ಅ) ನುಗ್ಗಾಗುವುದು (ಆ) ಒಂದು ತೆರಿಗೆ (ಇ) ರಶಿಯದ ಒಂದು ಪ್ರಾಂತ (ಈ) ಮಲ್ಲಿಗೆ ಹೂ

೫. ಧೃತಿ
(ಅ) ಉಪಾಯ (ಆ) ಧೈರ್ಯ (ಇ) ಭೂಮಿ (ಈ) ವಂಚಕ

೬. ಪಥಿಕ
(ಅ) ರೋಗಿಗಳ ಆಹಾರ (ಆ) ಬುತ್ತಿ (ಇ) ಪ್ರಯಾಣಿಕ (ಈ) ಮೂರ್ತಿ

೭. ಮಾಸಿ
(ಅ) ಕಪ್ಪು (ಆ) ಮಾಂಸದ ಚೂರು (ಇ) ತಿಂಗಳ ಕೊನೆಯ ದಿನ (ಈ) ಒಂದು ತೂಕ

೮. ಸುದತಿ
(ಅ) ಸುಂದರ ಹಲ್ಲುಳ್ಳವಳು (ಆ) ಸೊಗಸಾದ ನಡಿಗೆಯುವಳು (ಇ) ಧರ್ಮ ಕಾರ್ಯ (ಈ) ಹಾದರಗಿತ್ತಿ

೯. ಲಹರಿ
(ಅ) ತೆರೆ (ಆ) ಚುಕ್ಕಾಣಿ (ಇ) ತ್ವರಿತ (ಈ) ಉಪ್ಪು

೧೦. ಶುಕ್ಲ
(ಅ) ಕಪ್ಪು (ಆ) ಒಣಗಿದ (ಇ) ಬಿಳಿಯ (ಈ) ಸುಲಭ

೧೧. ನೂಕು
(ಅ) ನಡೆ (ಆ) ಸಾಧ್ಯವಾಗು (ಇ) ಅವಸರ (ಈ) ನೀಡು

೧೨. ಮಂದಸ
(ಅ) ಈಜಿ ಚೇರ್ (ಆ) ಒಂದು ಪರ್ವತ (ಇ) ಶಾಲೆ (ಈ) ಪೆಟ್ಟಿಗೆ



೧. **ಸ್ವಯ** (ಅ) ಪ್ರಜ್ಞೆ; ತಾನೆಂಬ ಅರಿವು. ಉದಾ:— ಸ್ವಯವಿಲ್ಲದಂತೆ ಮಲಗಿದ್ದ. [ಸಂ. ಸ್ವಯಂ = ತಾನು – ಎಂಬುದರಿಂದ]

೨. **ಅಂತಿಲೇ**( ಈ) ಹತ್ತಿರ, ಸಮೀಪದಲ್ಲಿ. ಉದಾ:— ತನ್ನ ಅಂತಿಲೇ ಇದ್ದದ್ದನ್ನು ಎಲ್ಲೆಲ್ಲೋ ಹುಡುಕಿದ. [ಸಂ. ಅಂತಿಕ = ಹತ್ತಿರ – ಎಂಬುದರಿಂದ]

೩. **ಕಾವಣ** (ಇ) ಹಂದರ, ಚಪ್ಪರ; ಹಸಿರ ಬಳಿಗಳಿಂದ ಮಾಡಿದ ಚಪ್ಪರ ಉದಾ:— ಕಾವಣಗಳಲ್ಲಿ ವಿಹರಿಸಿದ. [ಸಂ. ಕಾಯಮಾನ = ಎಲೆಮನೆ]

೪. **ಜಜಿಯಾ** (ಅ) ಒಂದು ತೆರಿಗೆ; ಮುಸ್ಲಿಂ ದೇಶಗಳಲ್ಲಿ ಪರಧರ್ಮೀಯರಿಗೆ ವಿಧಿಸುವ ರಕ್ಷಣಾ ತೆರಿಗೆ. [ಅರಬ್ಬಿ, ಜಜಿಯಃ]

೫. **ಧೃತಿ** (ಅ) ಧೈರ್ಯ, ಆತ್ಮವಿಶ್ವಾಸ; ಸಹನೆ, ತಾಳುವಿಕೆ. ಉದಾ:— ಸರಕಾರಿ ನೀತಿಯಿಂದ ಪೋಲೀಸರು ಧೃತಿಗೆಟ್ಟರು. [ಸಂ. ಧೃ = ತಾಳು = ವಿನಿಂದ]

೬. **ಪಥಿಕ** (ಇ) ಪ್ರಯಾಣಿಕ, ದಾರಿಗ, ದೂರ ದೇಶಕ್ಕೆ ಹೋಗಿರುವವ. ಉದಾ:— ಪಥಿಕರಿಗಾಗಿ ವಸತಿ ಸೌಕರ್ಯಗಳನ್ನು ನಿರ್ಮಿಸಿದ. [ಸಂ.]

೭. **ಮಾಸಿ** (ಈ) ಒಂದು ತೂಕ, ವಿಶೇಷವಾಗಿ ಬೆಳ್ಳಿ ಬಂಗಾರಗಳನ್ನು ತೂಗುವಲ್ಲಿ ಬಳಸುವ ಎಂಟು ಗುಂಜಿಯ ತೂಕ. [ಸಂ. ಮಾಷ = ಉದ್ದು, ಅವರೆ]

೮. **ಸುದತಿ** (ಅ) ಸುಂದರಿ, ಸುಂದರವಾದ ಹಲ್ಲುಗಳುಳ್ಳವಳು. ಉದಾ:— ಸುದತಿಯರ ತಿಳಿನಗೆ. [ಸಂ. ಸು. = ಒಳ್ಳೆಯ + ದತಿ=ದಂತವುಳ್ಳ]

೯. **ಲಹರಿ** (ಅ) ತೆರೆ. ತರಂಗ; ತೆರೆಗಳಂತೆ ಯಥೇಚ್ಛವಾಗಿ ವರ್ತಿಸುವಿಕೆ. ಉದಾ:— ವಿಚಾರ ಲಹರಿ. [ಸಂ.]

೧೦. **ಶುಕ್ಲ** (ಇ) ಬಿಳಿಯ, ಸ್ವಚ್ಛವಾದ; (ಆ ಬಣ್ಣದ್ದಿರುವುದರಿಂದ) ವೀರ್ಯ. ಉದಾ:— ಶುಕ್ಲಪಕ್ಷ = ಚಂದ್ರ ಗಾತ್ರದಲ್ಲಿ ಬೆಳೆಯುತ್ತಿರುವ (ಬಿಳಿ) ಪಕ್ಷ. [ಸಂ.]

೧೧. **ನೂಕು** (ಅ) ಸಾಧ್ಯವಾಗು, ನೀಗು. ಉದಾ:— ಅವನಿಂದ ಆ ಕೆಲಸ ನೂಕಲಿಕ್ಕಿಲ್ಲ. [ಕನ್ನಡ, ನೂಂಕು]

೧೨. **ಮಂದಸ** (ಈ) ಪೆಟ್ಟಿಗೆ; ಮಂಟಪ. ಉದಾ:— ಮಂದಸದಲ್ಲಿರುವ ಆಭರಣ. [ಸಂ, ಮಂಜೂಷಾ]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ ಸರಿಯಿದ್ದರೆ | ... | ಸಾಧಾರಣ |
| ೯–೧೦ ,, | ... | ಉತ್ತಮ |
| ೧೧–೧೨ ,, | ... | ಅತ್ಯುತ್ತಮ |

ಜನರಿಂದ ತೀವ್ರವಾದ ವಿರೋಧವನ್ನೂ ನಿಂದೆ ಅವಮಾನಗಳನ್ನೂ ಎದುರಿಸಬೇಕಾಗುತ್ತದೆ. ಆದರೆ ಒಮ್ಮೆ ಈ ಬದಲು ಎಲ್ಲರಿಗೆ ಒಪ್ಪಿಗೆ ಯಾಯಿತೆಂದರೆ ವಿರೋಧಗಳೆಲ್ಲ ಕರಗಿಹೋಗುತ್ತವೆ.

ಈಗ ಹಿಂದೂ ಜನರಲ್ಲಿಯ ಒಂದು ರೂಢಿಯ ಬಗ್ಗೆ ಕೆಲವು ವಿಚಾರಗಳನ್ನು ಇಲ್ಲಿ ವಾಚಕರ ಮುಂದೆ ಇಡಲಾಗಿದೆ. ಹಿಂದೂಗಳ ರೂಢಿಯಂತೆ, ಸ್ತ್ರೀ ಮುತ್ತೈದೆಯಾಗಿ ತೀರಿಕೊಂಡರೆ ಅಥವಾ ಹೆಂಡತಿ ಇದ್ದ ಪತಿ ಕಾಲವಶನಾದರೆ ಮೃತರ ದೇಹದ ಜೊತೆಗೆ ಸ್ತ್ರೀಯ ಮಂಗಲಸೂತ್ರವನ್ನು ಚಿತೆಯ ಮೇಲೆ ಇಡಲಾಗುತ್ತದೆ. ಮುಂಬಯಿಯ ಹತ್ತಿರದ ಕಲ್ಯಾಣದಲ್ಲಿದ್ದ ಒಬ್ಬ ಸಾಮಾಜಿಕ ಕಾರ್ಯಕರ್ತ ಶ್ರೀ ಗಂಗಾಧರ ದಿನಾಕರ ಘಾರಪುರೆ ಎಂಬುವರಿಗೆ ಈ ರೂಢಿ ರುಚಿಸಲಿಲ್ಲ. ಸ್ತ್ರೀಯರು ಸೌಭಾಗ್ಯದ ಸಂಕೇತವೆಂದೂ ಪವಿತ್ರವೆಂದೂ ತಮ್ಮ ದಾಂಪತ್ಯಜೀವನವಿಡೀ ಧರಿಸಿದ ಮಂಗಳಸೂತ್ರ ದಿವಂಗತ ಪತಿಯ ಇಲ್ಲವೆ ಪತ್ನಿಯ ಶವದೊಂದಿಗೆಯೇ ಅಗ್ನಿಗೆ ಆಹುತಿ ನೀಡುವುದು ಒಂದು ಬಗೆಯ ಭಾವನಾತ್ಮಕ ಸಮಾಧಾನಕ್ಕಾಗಿ. ಶವದೊಂದಿಗೆಯೇ ಚಿತೆಯೇರಿದ ಈ ಚಿನ್ನ ಹೋಗುವುದಾದರೂ ಎಲ್ಲಿಗೆ ಎಂಬುದನ್ನು ಕಂಡುಹಿಡಿಯಲು ಶ್ರೀ ಘಾರಪುರೆ ನಿರ್ಧರಿಸಿದರು. ಕಲ್ಯಾಣದ ಸ್ಮಶಾನದ ಸುತ್ತಮುತ್ತಲ ಪ್ರದೇಶ ಆಗ ಕಳ್ಳಭಟ್ಟಿ ತಯಾರಕರ, ಚಟುವಟಿಕೆಗಳ ಕೇಂದ್ರವಾಗಿತ್ತು. ಚಿತೆ ಸ್ವಲ್ಪ ಶಾಂತವಾಗುವಷ್ಟರಲ್ಲೇ ಇವರಲ್ಲಿಯ ಕೆಲವರು ಮರೆಯಿಂದ ಹೊರಬಂದು ಚಿತೆಯನ್ನು ಆರಿಸಿ, ಸರಿಸಿ ಅಲ್ಲಿ ಸಿಗಬಹುದಾದ ತುಸು ಬಂಗಾರವನ್ನು ಜೇಬಿಗಿಳಿಸುತ್ತಿದ್ದರು. ದಾನ ಸತ್ಪಾತ್ರದಲ್ಲಾಗಬೇಕಂತೆ. ಆದರೆ ಜೀವನವಿಡೀ ಪವಿತ್ರವೆನಿಸಿದ್ದ ಮಂಗಲಸೂತ್ರದ ಚಿನ್ನ ಯಾರೋ ಸಮಾಜಘಾತುಕರ ಕೈಗೆ ಬೀಳುವುದು ಅವರ ಹಿಂದಿನ ಪವಿತ್ರ ಭಾವನೆಯ ಅಣಕವಲ್ಲದಿದ್ದರೆ ಇನ್ನೇನು? ಈ ವಿಚಾರವನ್ನು ಅವರು ಎಲ್ಲರೆದುರು ಮಂಡಿಸಲು ಆರಂಭಿಸಿದರು. ಕೇಳಿದವರೆಲ್ಲ ತಲೆ ದೂಗಿದರು. ಆದರೆ ಪ್ರತ್ಯಕ್ಷ ರೂಢಿಯನ್ನು ಮುರಿಯಲು ಯಾರೂ ಮುಂದೆ ಬರಲಿಲ್ಲ. ಕೇವಲ ಕೃತಿಶೂನ್ಯ ಚರ್ಚೆ ನಡೆಯುತ್ತಿತ್ತು.

ನೀರಿನಲ್ಲಿದ್ದ ಅಲೆಗಳು ವಿರಳವಾಗಿ ಶಾಂತವಾಗುವಂತೆ ಒಳ್ಳೆಯ ವಿಚಾರಗಳೂ ಕೃತಿಯ ಬೆಂಬಲವಿಲ್ಲದೇ ಹೋದರೆ ಅಳಿದುಹೋಗುತ್ತವೆ. ಹೊಸ ವಿಚಾರಗಳನ್ನು ಸಮಾಜದಲ್ಲಿ ಬಿಂಬಿಸುವವರಿಗೆ ತಾವೇ ಮುಂದಾಗಬೇಕಾಗುತ್ತದೆ. ಮಂಗಲಸೂತ್ರದಂಥ ಭಾವನಾಪ್ರಧಾನ ವಿಷಯಗಳು ಅತ್ಯಂತ ಸೂಕ್ಷ್ಮವಾಗಿರುತ್ತವೆ. ಆದ್ದರಿಂದ ಇಂತಹ ವಿಷಯಗಳಲ್ಲಿ ಇದ್ದ ರೂಢಿ ಮುರಿಯಲು ಮುಂದಾಗುವವರಿಗೆ ತಮ್ಮ ಬುದ್ಧಿ ವಿಚಾರಗಳ ಮೇಲೆ ವಿಶ್ವಾಸವೂ ಧೈರ್ಯವೂ ಬೇಕಾಗುತ್ತವೆ. ಶ್ರೀ ಘಾರಪುರೆಯವರು ಸಾವರಕರರ ಅನುಯಾಯಿಯಾಗಿದ್ದರು. ಆದ್ದರಿಂದ ಬುದ್ಧಿಗೆ ಸರಿ ತೋರಿದ್ದನ್ನೇ ಮಾಡುವ ಧೈರ್ಯ ಅವರಲ್ಲಿತ್ತು. ೧೯೪೮ರ ಡಿಸೆಂಬರ್ ೧೭ ರಂದು ದುರ್ದೈವದಿಂದ ಅವರ ಪತ್ನಿ ಮರಣ ಹೊಂದಿದರು. ಈ ದುಃಖದ ಪ್ರಸಂಗದಲ್ಲಿಯೂ ಅವರು ತಮ್ಮ ಮನಸ್ಸನ್ನು ಶಾಂತವಾಗಿಟ್ಟುಕೊಂಡು ತಮ್ಮಲ್ಲಿದ್ದ ವಿಚಾರಗಳನ್ನು ಕಾರ್ಯರೂಪಕ್ಕಿಳಿಸಲು ಮುಂದೆ ಬಂದರು. ತಮ್ಮ ಪತ್ನಿಯ ಮಂಗಲ ಸೂತ್ರವನ್ನು ಕಲ್ಯಾಣದ ಬ್ರಾಹ್ಮಣ ಸಭೆಗೆ ದಾನ ಮಾಡಿದರು. ಅಂದಿನಿಂದ ಈ ಹೊಸ ರೂಢಿ ಸಮಾಜದಲ್ಲಿ ಬೇರೂರಿ ಕಲ್ಯಾಣದ ಬ್ರಾಹ್ಮಣ ಸಭೆಗೆ ೧೧,೦೦೦ ರೂಪಾಯಿಗಳಿಗೂ ಮಿಕ್ಕಿ ದಾನಗಳು ಬಂದಿವೆ.

ಸಮಾಜದ ರೂಢಿಯನ್ನು ಮುರಿಯುವ ಧೈರ್ಯ ತೋರಿಸಿದ ಶ್ರೀ ಘಾರಪುರೆಯವರ ಜೀವನವೂ ಗಮನೀಯವಾಗಿದೆ. ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಒಬ್ಬ ಸಾಮಾನ್ಯ ವ್ಯಕ್ತಿ

(ಜಗತ್ತಿಗೆ ಹೊರತಾದ ಜನ)" ಎಂಬ ಶೀರ್ಷಿಕೆಯ ಕಾರ್ಯಕ್ರಮದಲ್ಲಿ ಪ್ರಸಾರ ಮಾಡಿದರು.

ಕಲ್ಯಾಣಕ್ಕಿಂತ ಠಾಣೆಯಲ್ಲಿ ಮಂಗಲಸೂತ್ರ ದಾನಕ್ಕೆ ಹೆಚ್ಚು ಬೆಂಬಲ ಸಿಕ್ಕಿತು. ಠಾಣೆಯ "ಬ್ರಾಹ್ಮಣ ಶಿಕ್ಷಣ ಮಂಡಳಕ್ಕೆ ೧೯೬೦ರಿಂದ ೬೦–೭೦ ಸಾವಿರ ರೂಪಾಯಿಗಳು ದೊರಕಿವೆ. ೧೯೭೯-೮೦-೮೧ ಈ ಮೂರು ವರ್ಷಗಳಲ್ಲಿ ೧೮೦೦೦ ರೂಪಾಯಿಗಳಿಗಿಂತ ಹೆಚ್ಚು ಹಣ ದೊರಕಿತೆಂದು ಆ ಸಂಸ್ಥೆ ತನ್ನ ವಾರ್ಷಿಕ ಲೆಕ್ಕ ಪತ್ರ ವರದಿಗಳಲ್ಲಿ ತೋರಿಸಿದೆ.

ಸಮಾಜಕ್ಕೆ ಉಪಯೋಗವಾಗುವಂತಹ ಈ ರೂಢಿಯನ್ನು ತಮ್ಮ ಸ್ವಂತ ಪ್ರಯತ್ನದಿಂದ ಜನಪ್ರಿಯ ಮಾಡಿದ ಈ ಇಬ್ಬರೂ ಸಮಾಜ ಸೇವಕರು ಈಗ ಕಾಲವಶರಾಗಿದ್ದಾರೆ. ಸಮಾಜ ಕಾರ್ಯಗಳಿಗೆ ಲಕ್ಷಾಂತರ ರೂಪಾಯಿಗಳನ್ನು ದೊರಕಿಸಿಕೊಡುವ ಶಕ್ತಿಯಿದ್ದ ಈ ರೂಢಿ ನಿಂತು ಹೋಗುವ ಭಯವಿದೆ. ಈ ವಾಡಿಕೆ ಇನ್ನು ಮುಂದೂ ನಡೆಯಬೇಕೆಂದು ಮತ್ತು ಹಿಂದೂ ಸಮಾಜದ ಎಲ್ಲೆಡೆಗೂ ಹಬ್ಬಬೇಕೆಂದೂ ಈ ಲೇಖನದ ಮಾಧ್ಯಮದಿಂದ ನಾನೊಂದು ಅಳಿಲು ಸೇವೆ ಸಲ್ಲಿಸಲು ಇಚ್ಛಿಸುತ್ತೇನೆ. ಈ ವಿಷಯದ ವೃತ್ತಾಂತಗಳು ಮಹಾರಾಷ್ಟ್ರದ ಹಲವಾರು ಸಾಪ್ತಾಹಿಕ ದೈನಿಕ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿವೆ. ಅದರ ಒಳ್ಳೆಯ ಪರಿಣಾಮಗಳೂ ಕಂಡುಬರುತ್ತಿವೆ.

ಓದುಗರ ಗಮನಕ್ಕಾಗಿ ಕೆಲವೊಂದು ಮುಖ್ಯಾಂಶಗಳನ್ನು ಇಲ್ಲಿ ಮಂಡಿಸಲಾಗಿದೆ. ಅಂತ್ಯವಿಧಿಯ ಕಾಲಕ್ಕೆ ಮಂಗಲಸೂತ್ರವನ್ನು ಚಿತೆಯ ಮೇಲಿಡಬೇಕೆಂದು ಧರ್ಮಶಾಸ್ತ್ರಗಳಲ್ಲಿ ಎಲ್ಲೂ ಹೇಳಿಲ್ಲ. ಬಂಗಾರ ಸುಡುವುದಿಲ್ಲವಾದ್ದರಿಂದ ಅದನ್ನು ಯಾರಾದರೂ ತೆಗೆದುಕೊಳ್ಳುತ್ತಾರೆ ಅಥವಾ ಬೂದಿಯೊಂದಿಗೆ ಅದನ್ನು ನೀರಿಗೆ ಹಾಕಲಾಗುತ್ತದೆ. ಈ ಎರಡೂ ಪ್ರಕಾರಗಳಲ್ಲಿ ಪವಿತ್ರ ಮಂಗಲಸೂತ್ರದ ಸದುಪಯೋಗವಾಗದೇ ಅದು ವ್ಯರ್ಥವಾಗಿ ಹೋಗುತ್ತದೆ. ಮೃತರ ಆತ್ಮಕ್ಕೆ ಶಾಂತಿ ಲಭಿಸಲೆಂದು ದಾನ ಧರ್ಮ ಮಾಡುವುದು ವಾಡಿಕೆ. ಆದ್ದರಿಂದ ಪವಿತ್ರ ಮಂಗಲಸೂತ್ರದ ಬಂಗಾರವನ್ನು ದೀನದಲಿತರಿಗೆ, ಬಡವರಿಗೆ, ವನವಾಸಿಗಳಿಗೆ, ಅನಾಥರಿಗೆ, ರೋಗಪೀಡಿತರಿಗೆ ಉಪಯೋಗವಾಗುವಂತೆ ಯಾವುದಾದರೂ ಸಂಸ್ಥೆಗೆ ದಾನ ಮಾಡುವುದು ಹೆಚ್ಚು ಶ್ರೇಯಸ್ಕರ. ಬಂಗಾರವು ದೇಶದ ಸಂಪತ್ತಾಗಿದ್ದರಿಂದ ಮತ್ತು ದೇಶಕ್ಕೆ ಅದರ ಅತ್ಯಂತ ಅವಶ್ಯಕತೆ ಇದ್ದುದರಿಂದ ಅದನ್ನು ನೀರಿಗೆ ಹಾಕುವುದು ಒಂದು ಅಪರಾಧವೇ ಸರಿ. ಘಾರಪುರೆ ಮತ್ತು ಜೋಶಿಯವರಂಥ ಒಬ್ಬಿಬ್ಬರು ವ್ಯಕ್ತಿಗಳು ಮಾಡಿದ ಪ್ರಯತ್ನಗಳು ಬಹಳ ದೂರ ಪ್ರಸಾರವಾಗುವುದು ಕಠಿಣ. ಆದ್ದರಿಂದ ಈ ವಿಚಾರಗಳನ್ನು ಸಾಮಾಜಿಕ ಸಂಸ್ಥೆಗಳು, ವೃತ್ತಪತ್ರಗಳು ಎತ್ತಿ ಹಿಡಿದಲ್ಲಿ ಹೆಚ್ಚು ಉಪಯೋಗ ವಾಗುವುದು. ವನವಾಸೀ ಕಲ್ಯಾಣ ಆಶ್ರಮ, ಅನಾಥಾಶ್ರಮ, ಅನಾಥ ಮಹಿಳಾಶ್ರಮ ಕುಷ್ಠ ರೋಗಿಗಳ ಆಶ್ರಮದಂತಹ ಸಂಸ್ಥೆಗಳು ಈ ವಿಚಾರಗಳನ್ನು ಗಮನಿಸಬೇಕೆಂದು ನನ್ನ ಆಗ್ರಹದ ವಿನಂತಿ. ❁

---

ಈ ವಿಷಯದಲ್ಲಿ ಹೆಚ್ಚಿನ ವಿವರಗಳು ಬೇಕಾದಲ್ಲಿ ಕೆಳಗೆ ಕೊಟ್ಟ ವಿಳಾಸಕ್ಕೆ ಸಂಪರ್ಕ ಸಾಧಿಸಬಹುದು. ಯಾವ ಸಂಸ್ಥೆಗಾದರೂ ಮಂಗಲಸೂತ್ರದಾನ ಸಿಕ್ಕರೆ ಅದನ್ನು ವೃತ್ತ ಸಂಕಲನಕ್ಕಾಗಿ ಈ ಕೆಳಗಿನ ವಿಳಾಸಕ್ಕೆ ತಿಳಿಸಬೇಕೆಂದು ವಿನಂತಿ.

**ಸೌ. ವಸುಧಾ ಘಾರಪುರೆ**
೨/೧೫ ಪೀ ಆ್ಯಂಡ್ ಟೀ ಕಾಲನೀ
ಗುಲ್ ಟೇಕಡೀ, ಪುಣೆ ೪೧೧೦೦೧

ವಿಜ್ಞಾನವೂ ಈಗ
ಉಪನಿಷತ್ತುಗಳ
ದಾರಿಯನ್ನೇ
ಹಿಡಿದಿದೆಯೇ ?

ಡಾ. ಕೆ. ಚಿದಾನಂದ

# ವಿಶ್ವದ ಏಕದರ್ಶಿತ್ವ

ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟ ರೀತಿಯಲ್ಲಿ ಜಗತ್ತಿನ ಎಲ್ಲವೂ ನನ್ನಲ್ಲಿ ಪೋಣಿಸಲ್ಪಟ್ಟಿವೆ ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಆಧುನಿಕ ವಿಜ್ಞಾನ ಕೂಡ ಇದೇ ರೀತಿಯ ಮಾತನ್ನು ತನ್ನ ಕಾರ್ಯಕ್ಷೇತ್ರಕ್ಕೆ ಅನ್ವಯಿಸಿ ಹೇಳಲಾರಂಭಿಸಿದೆ. ಮಣಿಗಳನ್ನು ದಾರವು ಒಟ್ಟುಗೂಡಿಸುವಂತೆ ವಿಶ್ವದ ಎಲ್ಲಾ ಕಣಗಳನ್ನು ಪೋಣಿಸುವ ಸರ್ವವ್ಯಾಪಿಯಾದ ಸಂಬಂಧವೊಂದಿದೆ ಎಂಬುದು ವಿಜ್ಞಾನದ ಸಂಶೋಧನೆಗಳಿಂದ ಬೆಳಕಿಗೆ ಬಂದಿದೆ.

## ಬೆಲ್-ಪ್ರಮೇಯ

ವಿಶ್ವದ ಕಾರ್ಯ-ಕಾರಣ ಸಂಬಂಧ ಮತ್ತು ಆಗುಹೋಗುಗಳ ಕುರಿತು ಹೇಳುವಾಗ ವಿಜ್ಞಾನಿ ನ್ಯೂಟನ್ ನಿಯತಿವಾದಿಯಾಗಿರುತ್ತಿದ್ದ. ಯಾವುದೊಂದು ವಸ್ತುವಿನ ಪ್ರಸಕ್ತ ಸ್ಥಿತಿ ಮತ್ತು ಅದರ ಮೇಲೆ ಪ್ರಯೋಗಿಸಲ್ಪಡುವ ಶಕ್ತಿಯ ವಿವರಗಳು ತಿಳಿದಿದ್ದರೆ, ಆ ವಸ್ತುವಿನ ಮುಂದಿನ ಸ್ಥಿತಿಯನ್ನು ಕರಾರುವಾಕ್ಕಾಗಿ ಅರಿಯಬಹುದೆನ್ನುವುದು ನ್ಯೂಟನ್ನನ ಸಿದ್ಧಾಂತವಾಗಿತ್ತು. ಅಣುಕಣಗಳ ಸೂಕ್ಷ್ಮಾತಿಸೂಕ್ಷ್ಮ ಪ್ರಪಂಚದಲ್ಲಿ ನಿಯತಿತತ್ವವು (determinism) ಸೋಲುವುದೆಂದೂ, ಅಲ್ಲಿ ಅನಿಶ್ಚಿತತಾ ತತ್ವವು (uncertainty principle) ಆಳುವುದೆಂದೂ ವಿಜ್ಞಾನಿ ಹೈಸನ್‌ಬರ್ಗ್ ವಿವರಿಸಿದ. ಅನಿಶ್ಚಿತತಾ ತತ್ವದ ಪ್ರಕಾರ ಒಂದು ಎಲೆಕ್ಟ್ರಾನಿನ ಸ್ಥಾನ ಮತ್ತು ವೇಗಗಳಲ್ಲಿ ಎರಡನ್ನೂ ಒಟ್ಟಿಗೆ ನಿಷ್ಕೃಷ್ಟವಾಗಿ ತಿಳಿಯುವುದು ಅಸಾಧ್ಯ. ಎಲೆಕ್ಟ್ರಾನಿನ ಸ್ಥಾನದ ಕುರಿತು ನಾವು ಹೆಚ್ಚು ಸ್ಪಷ್ಟವಾಗಿ ತಿಳಿಯುತ್ತಾ ಹೋದಂತೆ ಅದರ ವೇಗದ ಕುರಿತಾದ ವಿವರಗಳು ಅಸ್ಪಷ್ಟವಾಗುತ್ತಾ ಹೋಗುತ್ತವೆ. ಅದೇ ರೀತಿ ವೇಗವನ್ನು ನಿಷ್ಕೃಷ್ಟವಾಗಿ ತಿಳಿಯಹೋದಾಗ ಎಲೆಕ್ಟ್ರಾನಿನ ಸ್ಥಾನದ ವಿವರಗಳು ಹೆಚ್ಚು ಹೆಚ್ಚು ಅನಿಶ್ಚಿತವಾಗುತ್ತಾ ಹೋಗುತ್ತವೆ. ಅಣುಕಣಗಳ ಸೂಕ್ಷ್ಮ ಜಗತ್ತಿನಲ್ಲಿ ಕಾರ್ಯ-ಕಾರಣ ಸಂಬಂಧ ಇರುವುದಿಲ್ಲವೆಂದು ಹೈಸನ್‌ಬರ್ಗ್‌ನ ಅನಿಶ್ಚಿತತಾ ತತ್ವವು ಸೂಚಿಸುತ್ತದೆ. ಆದರೆ ಐನ್‌ಸ್ಟೈನನು ಕೊನೆಯವರೆಗೂ ಈ ಅನಿಶ್ಚಿತತಾ ತತ್ವವನ್ನು ಒಪ್ಪಲಿಲ್ಲ. 'ಜಗತ್ತಿನ ವ್ಯವಹಾರದಲ್ಲಿ ಭಗವಂತನು ಪಗಡೆಯಾಟ ಆಡುವುದಿಲ್ಲ' ಎಂದು ಅವನು ಅನಿಶ್ಚಿತತಾ ತತ್ವವನ್ನು ಖಂಡಿಸುತ್ತಿದ್ದ. ೧೯೩೫ರಲ್ಲಿ ಅವನು ಪಡೋಲಸ್ಕಿ ಮತ್ತು ರೋಸೆನ್ ಎಂಬ

ಇಬ್ಬರು ವಿಜ್ಞಾನಿಗಳೊಡಗೂಡಿ EPR ಪರಿಣಾಮ ಎಂಬ ಪರಿಕಲ್ಪನೆಯನ್ನು ಪ್ರಕಟಿಸಿದ. ಈ ಪರಿಕಲ್ಪನೆಯ ಪ್ರಕಾರ, ಅಣುವಿನೊಳಗಿನ ವಿದ್ಯಮಾನಗಳಲ್ಲಿ ಕಾರ್ಯ-ಕಾರಣ ಸಂಬಂಧವು ಅಸ್ತಿತ್ವದಲ್ಲಿಲ್ಲವೆಂದಾದರೆ ಅಣುಜಗತ್ತಿನ ಒಂದೇ ರೀತಿಯ ಎರಡು ಕಣಗಳು ವಿಶ್ವದಲ್ಲಿ ಪರಸ್ಪರ ಎಷ್ಟೇ ಅಂತರದಲ್ಲಿದ್ದರೂ ಅವುಗಳೆರಡನ್ನು ಸೇರಿಸುವ ಸುಪ್ತ ಸಂಬಂಧವೊಂದು ಅಸ್ತಿತ್ವದಲ್ಲಿರಬೇಕಾಗುತ್ತದೆ. ಆದರೆ ಅಂತಹ ಸಂಬಂಧದ ಸುಳಿವು ಆಗ ಕಂಡುಬಂದಿರಲಿಲ್ಲ. ಅಂತಹ ಸಂಬಂಧದ ಅಸ್ತಿತ್ವಕ್ಕೆ ಸಾಕ್ಷಿಯಿಲ್ಲವಾದುದರಿಂದ ಅನಿಶ್ಚಿತತಾ ತತ್ವವು ಮಿಥ್ಯವೆಂಬುದು ಐನ್‌ಸ್ಟೈನನ ವಾದವಾಗಿತ್ತು.

ಜೆ. ಎಸ್. ಬೆಲ್ ಎಂಬ ವಿಜ್ಞಾನಿಯು ೧೯೬೪ರಲ್ಲಿ EPR ಪರಿಣಾಮವನ್ನು ಗಣಿತದ ಒಂದು ಪ್ರಮೇಯದ ರೂಪದಲ್ಲಿ ಪ್ರಕಟಿಸಿದ. ಈ ಬೆಲ್ ಪ್ರಮೇಯದ ಪ್ರಕಾರ ಮೂಲಭೂತವಾದ ಹಂತದಲ್ಲಿ ಈ ಜಗತ್ತಿನಲ್ಲಿ ಬೇರೆ ಬೇರೆಯಾಗಿ ತೋರುವ ಭಾಗಗಳು ನಿಕಟವಾದ ಸಂಬಂಧದಿಂದ ಬಂಧಿತವಾಗಿರುತ್ತವೆ. ಹಲವಾರು ವರ್ಷಗಳ ವರೆಗೆ ಬೆಲ್ ಪ್ರಮೇಯವು ಬರೀ ತಾತ್ವಿಕ ಕುತೂಹಲವಾಗಿ ಉಳಿದಿತ್ತು. ಆದರೆ ಇತ್ತೀಚೆಗೆ ಅದಕ್ಕೆ ಪ್ರಾಯೋಗಿಕವಾದ ಸಮರ್ಥನೆ ದೊರೆತಿದೆ. ಡೇವಿಡ್ ಬಾಮ್ ಎಂಬ ವಿಜ್ಞಾನಿಯು ಬೆಲ್-ಪ್ರಮೇಯವನ್ನು ಪ್ರಾಯೋಗಿಕವಾಗಿ ದೃಢಪಡಿಸುವ ವಿವರಗಳನ್ನು ಪ್ರಕಟಿಸಿದ. ಜಾನ್ ಕ್ಲೋಸರ್ ಮತ್ತು ಸ್ಟುವರ್ಟ್ ಫ್ರೀಡ್‌ಮನ್ ಎಂಬಿಬ್ಬರು ವಿಜ್ಞಾನಿಗಳು ಒಂದೇ ರೀತಿಯ ಎರಡು ಬೆಳಕಿನ ಕಣಗಳನ್ನು ಪರಸ್ಪರ ಎಷ್ಟೇ ಅಂತರದಲ್ಲಿ ಇರಿಸಿದರೂ, ಅವು ಸುಪ್ತವಾದ ಸಂಬಂಧವನ್ನು ಹೊಂದಿರುತ್ತವೆ ಎಂಬುದನ್ನು ತೋರಿಸಿಕೊಡುವ ಮೂಲಕ ಬೆಲ್-ಪ್ರಮೇಯದ ತಥ್ಯವನ್ನು ದೃಢಪಡಿಸಿದರು. ಒಂದು ಕಣದ ಮೇಲೆ ಅವರು ನಡೆಸಿದ ಪ್ರಯೋಗಗಳು ತಕ್ಷಣ ದೂರದಲ್ಲಿರುವ ಅದೇ ರೀತಿಯ ಇನ್ನೊಂದು ಕಣದ ಮೇಲೆ ಪ್ರಭಾವ ಬೀರುವುದನ್ನು ಅವರು ಕಂಡುಕೊಂಡರು. ಇದನ್ನೇ ಒಂದು ಸಾಮಾನ್ಯವಾದ ಒಂದು ಉದಾಹರಣೆಯ ಮೂಲಕ ವಿವರಿಸುವುದಾದರೆ, ಒಂದೇ ರೀತಿಯ ಎರಡು ಕಾರುಗಳಲ್ಲಿ ಒಂದು ನವದೆಹಲಿ ಮತ್ತು ಇನ್ನೊಂದು ಮೈಸೂರಿನಲ್ಲಿ ಇದ್ದಾಗ, ನವದೆಹಲಿಯ ಕಾರಿಗೆ ಕಲ್ಲೆಸೆದ ವಿಷಯವು ತಕ್ಷಣ ಮೈಸೂರಿನಲ್ಲಿರುವ ಕಾರಿಗೆ ತಿಳಿದುಬಿಡುತ್ತದೆ.

ಐನ್‌ಸ್ಟೈನರ ಸಿದ್ಧಾಂತದ ಪ್ರಕಾರ ಜಗತ್ತಿನಲ್ಲಿ ಬೆಳಕಿನ ವೇಗವನ್ನು ಮೀರುವ ವೇಗವು ಇನ್ನೊಂದಿಲ್ಲ. ಹೀಗೆ ಅತ್ಯುಚ್ಚವಾದ ಬೆಳಕಿನ ವೇಗವನ್ನು ಮಾನದಂಡವನ್ನಾಗಿ ಇರಿಸಿಕೊಂಡಾಗ ಪರಸ್ಪರ ಬಹುದೂರದಲ್ಲಿ ಇರಿಸಲ್ಪಟ್ಟಿರುವ ಎರಡು ಏಕರೀತಿಯ ಕಣಗಳ ನಡುವೆ ಮಾಹಿತಿಯ ಸಂವಹನವು ನಡೆಯಲು ಅತ್ಯಲ್ಪ ಕಾಲಾವಧಿಯಾದರೂ ಬೇಕಾಗುತ್ತದೆ. ಆದರೆ ಬೆಳಕಿನ ಏಕರೀತಿಯ ಕಣಗಳ ಮೇಲೆ ಪ್ರಯೋಗ ನಡೆಸಿದಾಗ ಅವುಗಳ ನಡುವಣ ಸಂವಹನವು ತಕ್ಷಣ, ಎಂದರೆ ಕಾಲನಷ್ಟವೇನೂ ಇಲ್ಲದೇನೇ ನಡೆಯುವುದೆಂಬ ಆಶ್ಚರ್ಯಕರವಾದ ವಿಷಯವು ತಿಳಿದುಬಂದಿದೆ. ಎರಡು ಕಣಗಳ ನಡುವಣ ಈ ಸಂವಹನವು ದೇಶ ಕಾಲಾತೀತವಾಗಿರುವಂತೆ ತೋರಿಬರುತ್ತದೆ. ಬೆಳಕಿನ ವೇಗವೇ ಅತ್ಯುಚ್ಚವಾದುದು ಎಂಬ ಐನ್‌ಸ್ಟೈನ್ ತತ್ವದ ಬುನಾದಿಯನ್ನು ಈ ಫಲಿತಾಂಶ ತುಸು ಅಲುಗಿಸಿದೆ. ಬೆಳಕಿನ ವೇಗಕ್ಕೂ ಮೀರಿದ ವೇಗದಲ್ಲಿ ಎರಡೂ ಕಣಗಳ ನಡುವೆ ನಡೆಯುವ ಸಂವಹನವನ್ನು ಭವಿಷ್ಯತ್ತಿನಲ್ಲಿ ವ್ಯವಹಾರ ಉದ್ದೇಶಗಳಿಗಾಗಿ ತರಲು ಸಾಧ್ಯವಾಗುವುದು ಎಂದು ಜೇಕ್ ಸರ್ಫಾಟಿ ಎಂಬ ವಿಜ್ಞಾನಿ ೧೯೭೫ರಲ್ಲಿ ಅಭಿಪ್ರಾಯಪಟ್ಟ.

ಬೆಲ್-ಪ್ರಮೇಯವು ಗಹನವಾದ ಮತ್ತು ಗಮನಾರ್ಹವಾದ ವೈಜ್ಞಾನಿಕ ಆವಿಷ್ಕಾರ. ನ್ಯೂಟನ್ ಸಿದ್ಧಾಂತ ಮತ್ತು ಐನ್‌ಸ್ಟೈನ್ ಸಿದ್ಧಾಂತಗಳಿಗೆ ನಿಲುಕದ ಒಂದು ಮೂಲಭೂತ

ನ್ಯೂಟ್ರಾನುಗಳು ಪರಮಾಣು ಕೇಂದ್ರದಲ್ಲಿ ಒಟ್ಟಿಗೆ ಸುಭದ್ರವಾಗಿ ಹಿಡಿದಿಡಲ್ಪಡುತ್ತವೆ. ದುರ್ಬಲ ನ್ಯೂಕ್ಲಿಯರ್ ಶಕ್ತಿಯಿಂದಾಗಿ ವಿದ್ಯುತ್ ವಿಕಿರಣವು (radio activity) ಸಂಭವಿಸುತ್ತದೆ. ಈ ನಾಲ್ಕೂ ಶಕ್ತಿಗಳ ಏಕತ್ವವನ್ನು ತೋರಿಸಿಕೊಡಲು ಐನ್‌ಸ್ಟೈನನು ಬಹಳವಾಗಿ ಶ್ರಮಿಸಿದ. ಇತ್ತೀಚಿಗೆ ವಿಜ್ಞಾನಿಗಳು ಈ ನಾಲ್ಕೂ ಶಕ್ತಿಗಳ ಹಿಂದಿರುವ ಏಕತ್ವವನ್ನು ತೋರಿಸಿಕೊಡುವ ದಿಕ್ಕಿನಲ್ಲಿ ಮುನ್ನಡೆಯುತ್ತಿದ್ದಾರೆ.

## ವಂಶವೃಕ್ಷ

ವಿಕಾಸವಾದದ ದೃಷ್ಟಿಯಿಂದ ನೋಡಿದಾಗಲೂ ಮಾನವನು ಇತರ ಜೀವಿಗಳೊಡನೆ ಏಕತ್ವವನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಉತ್ಕ್ರಾಂತಿಪಥದಲ್ಲಿ ವಾನರನಿಂದ ನರನ ಸೃಷ್ಟಿಯಾಯಿತು ಎಂದು ವಿಜ್ಞಾನಿ ಡಾರ್ವಿನ್ ಹೇಳಿದಾಗ ಕ್ಯಾಥೊಲಿಕ್ ಧರ್ಮವಾದಿಗಳು ಅವನನ್ನು ಧರ್ಮದ್ರೋಹಿಯೆಂದು ಕರೆದರು. ಆದರೆ ಜೀವಿಗಳೆಲ್ಲಾ ಒಂದೇ ವಂಶವೃಕ್ಷದ ಕುಡಿಗಳು ಮತ್ತು ಬಂಧುಗಳು ಎಂಬುದನ್ನು ಡಾರ್ವಿನ್ನನ ವಿಕಾಸವಾದವು ಸೂಚಿಸುವಷ್ಟು ಪ್ರಭಾವಶಾಲಿಯಾಗಿ ಪ್ರಾಯಶಃ ಯಾವ ಧರ್ಮಗ್ರಂಥವೂ ವಿವರಿಸುವುದಿಲ್ಲ. ಏಕಾಣು ಜೀವಿಯ ರೂಪದಿಂದ ಪ್ರಾರಂಭವಾದ ಜೀವವು ಸಸ್ಯ, ಮೀನು, ಹಕ್ಕಿ, ಪ್ರಾಣಿ ಮತ್ತು ಮಾನವನಾಗಿ ವಿಕಾಸಗೊಂಡಿದೆಯೆಂದು ತೋರಿಸಿಕೊಟ್ಟ ವಿಜ್ಞಾನವು ಜೀವ ಜಗತ್ತಿನಲ್ಲಿ ಮನುಷ್ಯ ಮತ್ತು ಇತರ ಜೀವಿಗಳ ನಡುವಣ ನಿಕಟ ಸಂಬಂಧವನ್ನು ಸ್ಪಷ್ಟಪಡಿಸಿದೆ. ಜೀವದ ವಿಶಾಲ ವಂಶ ವೃಕ್ಷದಲ್ಲಿ ಮಾನವನು ತುದಿಯಲ್ಲಿರುವ ಒಂದು ಪುಟ್ಟ ರೆಂಬೆ. ಇತರ ಜೀವಿಗಳೊಡನೆ ರಕ್ತ ಸಂಬಂಧವನ್ನು ಹೊಂದಿರುವ ಅವನು ಜೀವ ಜಂತುಗಳ ಬಹು ದೊಡ್ಡ ಕುಟುಂಬವೊಂದರ ಪ್ರಭಾವಶಾಲೀ ಸದಸ್ಯ. ಈ ಏಕತ್ವವನ್ನು ಅರಿತಾಗಲೇ ಅವನು ಶ್ರೇಷ್ಠನೆನಿಸುತ್ತಾನೆ.

## ಏಕತ್ವ

ಅನೇಕದಲ್ಲಿ ಏಕವನ್ನು ಕಾಣುವುದು ಮತ್ತು ಸರ್ವವ್ಯಾಪಿಯಾದ ಏಕತ್ವವನ್ನು ಗ್ರಹಿಸುವುದು ಆಧ್ಯಾತ್ಮ ಜ್ಞಾನದ ಗುರಿಯೆಂದು ಹೇಳಲ್ಪಟ್ಟಿದೆ. ಸರ್ವವ್ಯಾಪಿಯಾದ ಏಕತ್ವದತ್ತ ಈಗ ವಿಜ್ಞಾನದ ಹಲವು ವಿಭಾಗಗಳು ಬೊಟ್ಟು ಮಾಡಿ ತೋರಿಸತೊಡಗಿವೆ. ಸರ್ವವ್ಯಾಪಿಯಾದ ಏಕತ್ವದ ಅರಿವು ಅಧ್ಯಾತ್ಮ ಮತ್ತು ವಿಜ್ಞಾನಗಳಲ್ಲಿ ಮಾತ್ರವಲ್ಲದೆ ಸಮಾಜದಲ್ಲೂ ಮೂಡಿಬರಬೇಕು. ವಿಶ್ವದ ಪ್ರತಿಯೊಂದು ಕಣವೂ ಇತರ ಕಣಗಳೊಡನೆ ನಿಕಟವಾದ ಸಂಬಂಧವನ್ನು ಹೊಂದಿರುವಂತೆ ಪ್ರತಿಯೊಂದು ವ್ಯಕ್ತಿಯೂ ಮಾನವ ಕುಲದೊಡನೆ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಇನ್ನೂ ಹೇಳುವುದಾದರೆ ವ್ಯಕ್ತಿಯಲ್ಲಿ ಸಮಷ್ಟಿ ಅಡಗಿದೆ. 'ಅಯಂ ಆತ್ಮಾಬ್ರಹ್ಮ' (ಈ ಆತ್ಮವೇ ಬ್ರಹ್ಮ.) ಎಂಬುದರ ಅರ್ಥವೇ ಇದು, ಪ್ರತಿಯೊಂದು ವ್ಯಕ್ತಿಯ ಒಳಿತು ಕೆಡುಕಿನಲ್ಲಿ ಸಂಪೂರ್ಣ ವಿಶ್ವದ ಒಳಿತು ಕೆಡುಕು ಅವಲಂಬಿಸಿದೆ. ವ್ಯಕ್ತಿಯ ಉದ್ಧಾರದಿಂದಲೇ ಸಮಷ್ಟಿಯ ಉದ್ಧಾರ ಸಾಧ್ಯ. ಲೋಕದ ಯಾವುದೇ ಸಮಸ್ಯೆಯ ಪರಿಹಾರವು ಜಾತಿ, ಮತ, ದೇಶ, ಭಾಷೆಗಳ ಪರಿಮಿತ ಮತ್ತು ಸೀಮಿತ ಕ್ಷೇತ್ರದೊಳಗಿಂದ ಸಾಧ್ಯವಿಲ್ಲ. ಎಲ್ಲಾ ಭಾವನೆ, ಆಶೆ-ಆಕಾಂಕ್ಷೆಗಳು ವ್ಯಕ್ತಿಯ ಪರಿಧಿಯನ್ನು ದಾಟಿ, ವಿಸ್ತರಿಸಿ ಸಂಪೂರ್ಣ ಮನುಕುಲವನ್ನು ಆವರಿಸಬೇಕು. ಸರ್ವ ವ್ಯಾಪಿಯಾದ ಏಕತ್ವವನ್ನು ಗ್ರಹಿಸುವುದೇ ನಮ್ಮ ಮುಂದಿನ ಹೆಗ್ಗುರಿಯಾಗಬೇಕು.

✡



# ನೊಬೆಲ್ ಬಹುಮಾನ ಪ್ರಶ್ನಾತೀತವೆ ?

**ಮುರಳೀಧರ ಖಜಾನೆ**

ಪ್ರತಿ ವರ್ಷದ ಅಕ್ಟೋಬರ್ ತಿಂಗಳಲ್ಲಿ ಒಂದು ರೀತಿಯ ಕಾತರ ಇಡೀ ಜಗತ್ತನ್ನೇ ಆವರಿಸಿರುತ್ತದೆ. ಏಕೆಂದರೆ, ಆ ತಿಂಗಳಲ್ಲಿ ಆ ವರ್ಷ ಭೌತಶಾಸ್ತ್ರ, ರಸಾಯನ ಶಾಸ್ತ್ರ, ವೈದ್ಯಕೀಯ, ಸಾಹಿತ್ಯ, ಶಾಂತಿ ಮುಂತಾದ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನೆ ಮಾಡಿದವರಿಗೆ ನೊಬೆಲ್ ಪಾರಿತೋಷಕ ನೀಡಿ ಗೌರವಿಸಲಾಗುತ್ತದೆ. ಹಾಗಾಗಿ ಪ್ರತಿವರ್ಷ–ಈ ವರ್ಷದ ನೊಬೆಲ್ ಬಹುಮಾನ ಯಾವ ದೇಶಕ್ಕೆ ಯಾರ ತೋಳತೆಕ್ಕೆಗೆ ಬೀಳುವವೋ ಎಂಬ ಕಾತರ ಆಯಾ ಕ್ಷೇತ್ರಗಳಲ್ಲಿ ಕಾಡುತ್ತಿರುತ್ತದೆ. ಎಷ್ಟೋ ಸಾರಿ, ಎಷ್ಟೋ ಜನಕ್ಕೆ ಆಶ್ಚರ್ಯ ಹುಟ್ಟಿಸುವ ರೀತಿಯಲ್ಲಿ ಬಹುಮಾನ ದೊರೆತಿದ್ದೂ ಇದೆ. ಲೋಕಕ್ಕೆ ಅಂತಾರಾಷ್ಟ್ರೀಯ ಪ್ರಸಿದ್ಧ ಬಹುದಾದ ಏಕೈಕ ಬಹುಮಾನವಿದು.

ಆಗಾಗ ಈ ಪ್ರಶಸ್ತಿಯ ಬಗ್ಗೆ ವಿರೋಧ, ಅಸಮಾಧಾನ ವ್ಯಕ್ತವಾಗುವುದುಂಟು. ಅದರಲ್ಲೂ ಈ ಪ್ರಶಸ್ತಿಯನ್ನು ಸ್ಥಾಪಿಸಿದವನು ಮನುಕುಲದ ನಾಶಕ್ಕೆ ಕಾರಣವಾದ ಡೈನಮೈಟನ್ನು ತಯಾರಿಸಿ ಹಣ ಸಂಪಾದಿಸಿದವನು ಎಂಬುದೇ ಮೂಲ ಕಾರಣ. ಅಷ್ಟೇ ಅಲ್ಲ, ಎಷ್ಟೋಸಾರಿ ಈ ಬಹುಮಾನ ಎಲ್ಲ ರೀತಿಯಿಂದಲೂ ಅರ್ಹರಾದವರಿಗೆ ಸಿಕ್ಕದೆ ತೀರಾ ಸಾಮಾನ್ಯರಿಗೆ ಸಿಕ್ಕಿರುತ್ತದೆ. ಬಹುಮಾನ ನೀಡಿಕೆಯಲ್ಲಿ ಸಾಕಷ್ಟು ರಾಜಕೀಯವೂ ನಡೆದಿರುತ್ತದೆ. ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಬಂಡೆದ್ದ ಲೇಖಕರಿಗೆ ಬೇಕೆಂದೇ ಈ ಬಹುಮಾನ ನೀಡುತ್ತಾರೆ, ಇತ್ಯಾದಿ ಸಾಕಷ್ಟು ಅಸಮಾಧಾನವಿದೆ. ಇದುವರೆಗೂ ನೊಬೆಲ್ ಪ್ರಶಸ್ತಿ ಪಡೆದವರ ಪಟ್ಟಿ ನೋಡಿದರೆ ಈ ಆಪಾದನೆಗಳು ಸುಳ್ಳು ಎಂದೇನೂ ಅನಿಸುವುದಿಲ್ಲ. ಹಾಗಾಗಿ ಈಚೆಗೆ ನೊಬೆಲ್ ಬಹುಮಾನಕ್ಕೆ ಮೊದಲಿದ್ದ ಪಾವಿತ್ರ್ಯ ಕಡಿಮೆಯಾಗಿದೆ. ಇದೀಗ ಪಶ್ಚಿಮ ರಾಷ್ಟ್ರಗಳ ಸೌಂದರ್ಯ ಸ್ಪರ್ಧೆಯಂತೆಯೇ ಇದೂ ನಡೆಯುತ್ತಿದೆ. ನೊಬೆಲ್ ಪಾರಿತೋಷಕ ನೀಡುವಲ್ಲಿ ಪಕ್ಷಪಾತ, ಸ್ವಚ್ಛಂದತೆ ಎದ್ದು ತೋರುತ್ತಿದೆ. ಆಲ್ಫ್ರೆಡ್ ನೊಬೆಲ್ ಇಚ್ಛಿಸಿದಂತೆ ಪ್ರಶಸ್ತಿ ವಿತರಣೆಯಾಗುತ್ತಿಲ್ಲ ಎಂಬ ಭಾವನೆ ಎಲ್ಲೆಲ್ಲೂ ಎದ್ದು ಕಾಣುತ್ತಿದೆ. ಹಾಗಾದರೆ ನೊಬೆಲ್‌ನ ಇಚ್ಛೆ ಏನಿತ್ತೆಂದು ತಿಳಿಯಬೇಕಾದರೆ, ನೊಬೆಲ್ ಉಯಿಲಿನಲ್ಲಿ ಆತ ಏನು ಬರೆದಿದ್ದಾನೆ ಎಂದು ಅರಿಯುವುದು ಅನಿವಾರ್ಯವಾಗುತ್ತದೆ.

ಈ ಉಯಿಲು ಬಹಳ ಸ್ಪಷ್ಟವಾಗಿದೆ. ಆದರೆ ಇದುವರೆಗೆ ಬಹುಮಾನಗಳನ್ನು ನೀಡಿರುವ ದಾಖಲೆಗಳನ್ನು ಗಮನಿಸಿದರೆ ಉಯಿಲಿಗೆ ಸೂಕ್ಷ್ಮವಾಗಿ ಮೋಸವಾಗುತ್ತಿರುವುದು ಕಂಡುಬರುತ್ತದೆ. ಈಗಾಗಲೇ ನೀಡಿರುವ ಸುಮಾರು ೫೦೦

ಪ್ರಶಸ್ತಿಗಳಲ್ಲಿ ಅತೀ ಹೆಚ್ಚು ಪ್ರಶಸ್ತಿ ಪಡೆದಿರುವುದು ಅಮೇರಿಕ ಮತ್ತು ಪಶ್ಚಿಮ ಯುರೋಪಿಯನ್ ರಾಷ್ಟ್ರಗಳು. ಇದನ್ನು ಬಿಟ್ಟು ಹೊರ ರಾಷ್ಟ್ರಗಳು ಕೇವಲ ೫% ರಷ್ಟು ಮಾತ್ರ ಬಹುಮಾನ ಪಡೆದಿವೆ. ಮಾನವ ಜನಾಂಗದ ಸುಮಾರು ಕ್ಷಿರಪ್ಪಿರುವ ತೃತೀಯ ವಿಶ್ವದ ರಾಷ್ಟ್ರಗಳು ಪಡೆದಿರುವದು ಕೇವಲ ಒಂದು ಡಜನ್ ಪ್ರಶಸ್ತಿಗಳಷ್ಟೇ. ಅಲ್ಲದೆ ನೋಬೆಲ್ ಪ್ರಶಸ್ತಿ ಕೆಲವೇ ನಿರ್ದಿಷ್ಟ ಕ್ಷೇತ್ರಗಳಿಗೆ ಸಂಬಂಧಪಟ್ಟಿದ್ದು ಜಗತ್ತಿನ ಎಷ್ಟೋ ಪ್ರಮುಖ ಕ್ಷೇತ್ರಗಳು ಇದರಿಂದ ಹೊರತಾಗಿವೆ. ಹಾಗೆಂದು ಪಾರಿತೋಷಕದ ನಿಬಂಧನೆಗಳನ್ನು ಬದಲಾಯಿಸಲು ಸಾಧ್ಯವಿಲ್ಲ. ಅದು ಉಯಿಲಿನ ಉಲ್ಲಂಘನೆಯಾಗುತ್ತದೆಯೆಂದು ಕೆಲವರ ಭಾವನೆ. ಆದರೆ ಇದಕ್ಕೆ ವಿರುದ್ಧವಾಗಿ ನೊಬೆಲ್ ಪಾರಿತೋಷಕದ ಇತರೆ ಕ್ಷೇತ್ರಗಳೊಂದಿಗೆ

## ಆಲ್ಫ್ರೆಡ್ ನೊಬೆಲ್‌ನ ಉಯಿಲು

"ನನ್ನ ಉಳಿದಿರುವ ಆಸ್ತಿಯನ್ನೆಲ್ಲಾ ಈ ಕೆಳಗಿನಂತೆ ವಿನಿಯೋಗಿಸಬೇಕು: ನನ್ನ ಕಾರ್ಯನಿರ್ವಾಹಕರು ಭದ್ರತಾ ಸೆಕ್ಯೂರಿಟಿಗಳಲ್ಲಿ ಹೂಡಿದ ಬಂಡವಾಳವೇ ಧನವಾಗಬೇಕು. ಈ ಬಂಡವಾಳದ ಮೇಲೆ ಬರುವ ಬಡ್ಡಿಯ ಹಣವನ್ನು ಪ್ರತಿ ವರ್ಷವೂ ಬಹುಮಾನಗಳ ರೂಪದಲ್ಲಿ ವಿತರಣೆ ಮಾಡಬೇಕು. ಹೀಗೆ ಆಯಾ ವರ್ಷ ಬಹುಮಾನ ಪಡೆಯುವವರು ಹಿಂದಿನ ವರ್ಷಾವಧಿಯಲ್ಲಿ ಮಾನವಕುಲಕ್ಕೆ ತುಂಬಾ ಪ್ರಯೋಜನಕಾರಿಯಾದ ಅತ್ಯಂತ ಶ್ರೇಷ್ಠ ಕಾರ್ಯ ಮಾಡಿದವರಾಗಿರಬೇಕು. ಮೇಲೆ ಹೇಳಿದ ಬಡ್ಡಿ ಹಣವನ್ನು ಐದು ಸಮಾನ ಪಾಲುಗಳಾಗಿ ವಿಂಗಡಿಸಿ ಅದನ್ನು ಈ ರೀತಿ ಹಂಚಬೇಕು: ಭೌತಶಾಸ್ತ್ರ ಕ್ಷೇತ್ರದಲ್ಲಿ ಬಹು ಮುಖ್ಯ ಹೊಸ ಸಂಶೋಧನೆ ಮಾಡಿದವರಿಗೆ ಒಂದು ಪಾಲು; ಬಹು ಮುಖ್ಯ ರಸಾಯನಿಕ ಶೋಧನೆ ಅಭಿವೃದ್ಧಿ ಮಾಡಿದವರಿಗೊಂದು ಪಾಲು; ಶರೀರಶಾಸ್ತ್ರ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ಬಹು ಮುಖ್ಯವಾದುದನ್ನು ಕಂಡು ಹಿಡಿದವರಿಗೊಂದು ಪಾಲು, ಸಾಹಿತ್ಯ ಕ್ಷೇತ್ರದಲ್ಲಿ ಆದರ್ಶವಾದೀ ಪ್ರವೃತ್ತಿಯನ್ನು ಸಾರುವಂಥ ಅದ್ವಿತೀಯ ಕೃತಿ ರಚಿಸಿದವರಿಗೊಂದು ಪಾಲು; ದೇಶಗಳ ನಡುವಣ ಸೌಹಾರ್ದಕ್ಕಾಗಿ, ಸ್ಥಿರವಾಗಿರುವ ಸೈನ್ಯವನ್ನು ರದ್ದು ಪಡಿಸುವದಕ್ಕಾಗಿ, ಅಥವಾ ಕಡಿಮೆ ಮಾಡುವದಕ್ಕಾಗಿ, ಶಾಂತಿ ಅಧಿವೇಶನಗಳನ್ನು ಏರ್ಪಡಿಸಿ ಪ್ರೋತ್ಸಾಹಿಸುವುದಕ್ಕಾಗಿ ಬಹಳಷ್ಟು ಅಥವಾ ಅತ್ಯುತ್ತಮ ಕೆಲಸ ಮಾಡಿದವರಿಗೊಂದು ಪಾಲು. ಭೌತಶಾಸ್ತ್ರ ರಸಾಯನಶಾಸ್ತ್ರಗಳಿಗಾಗಿ ಇರುವ ಬಹುಮಾನವನ್ನು ಸ್ವಿಡೀಶ್ ವಿಜ್ಞಾನ ಅಕಾಡೆಮಿ ನೀಡಬೇಕು; ಶರೀರಶಾಸ್ತ್ರಕ್ಕಾಗಿ ಅಥವಾ ವೈದ್ಯಕೀಯಕ್ಕಾಗಿ ಇರುವ ಬಹುಮಾನವನ್ನು ಸ್ಟಾಕ್‌ಹೊಂನಲ್ಲಿರುವ ಕರೋಲೆನ್‌ಸ್ಕ ಇನ್‌ಸ್ಟಿಟ್ಯೂಟ್, ಹಾಗೂ ಸಾಹಿತ್ಯಕ್ಕಾಗಿ ಇರುವ ಬಹುಮಾನವನ್ನು ಸ್ಟಾಕ್‌ಹೊಂ ಅಕಾಡೆಮಿ ನೀಡಬೇಕು. ನಾರ್ವೆಜಿಯನ್ ಸ್ಟೋರ್ಟಿಂಗ್ ನೇಮಿಸುವ ಐದು ಜನರ ಒಂದು ಸಮಿತಿ ಶಾಂತಿ ನಾಯಕರಿಗಾಗಿರುವ ಬಹುಮಾನ ನೀಡುಬೇಕು. ಈ ಬಹುಮಾನಗಳನ್ನು ನೀಡವಲ್ಲಿ ಅಭ್ಯರ್ಥಿಗಳ ರಾಷ್ಟ್ರೀಯತೆಯನ್ನು ಪರಿಗಣಿಸಬಾರದೆಂದೇ ನನ್ನ ಸ್ಪಷ್ಟ ಆಶಯ. ಬಹುಮಾನಿತರು ಸ್ಕಾಂಡಿನೇಯುದವರಾಗಲಿ ಅಥವಾ ಆಗಿರದಿರಲಿ ಬಹುಮಾನಗಳು ಮಾತ್ರ ಎಲ್ಲ ರೀತಿಯಿಂದಲೂ ಅರ್ಹರಾದವರಿಗೆ ಸಲ್ಲುವಂತಾಗಬೇಕು.

ಪ್ಯಾರಿಸ್, ನವೆಂಬರ್ ೨೭, ೧೮೯೫

–ಆಲ್ಫ್ರೆಡ್ ಬೆರ್ನ್‌ಹಾರ್ಡ್ ನೊಬೆಲ್

೧೯೬೯ರಲ್ಲಿ ಅರ್ಥಶಾಸ್ತ್ರವನ್ನು ಸೇರಿಸಿದ್ದಾರೆ.

ವೈಜ್ಞಾನಿಕ ಕ್ಷೇತ್ರಗಳಲ್ಲಿ ನೀಡುತ್ತಿರುವ ಬಹುಮಾನ ಕೂಡ ಸಾಕಷ್ಟು ಗೊಂದಲ ಪೂರ್ಣವಾಗಿದೆ. ಏಕೆಂದರೆ, ವೈಜ್ಞಾನಿಕ ಕ್ಷೇತ್ರದಲ್ಲಿ ನಡೆಯುವ ಸಂಶೋಧನೆಗೆ ಪರೋಕ್ಷವಾಗಿ, ಅಪರೋಕ್ಷವಾಗಿ ಮತ್ತು ಸಮಾನಾಂತರವಾಗಿ ಸಾಕಷ್ಟು ಸಂಶೋಧನಾ ಸಂಸ್ಥೆಗಳು, ವಿಜ್ಞಾನಿಗಳು ಕೆಲಸ ಮಾಡಿದ್ದರೂ ಎಲ್ಲಾ ವಿಜ್ಞಾನಿಗಳು ಸಂಘಟಿತರಾಗಿ ಕೆಲಸ ನಡೆಸಿದ್ದರೂ ನೊಬೆಲ್ ಪ್ರಶಸ್ತಿ ದೊರೆಯುವುದು ಸಂಶೋಧನೆಯ ಮುಂಚೂಣಿಯಲ್ಲಿರುವವರಿಗೆ ಮಾತ್ರ.

ಆದರೆ ಈ ವಿಷಯಗಳಲ್ಲಿ ಎದ್ದಿರುವ ವಾದ ವಿವಾದಗಳು ಚರ್ಚೆಗಳು ಅಷ್ಟೊಂದು ಗಟ್ಟಿಯಾಗಿಲ್ಲದಿದ್ದರೂ ವಿಶ್ವ ಶಾಂತಿಗಾಗಿ ನೀಡುತ್ತಿರುವ ಬಹುಮಾನ ಮಾತ್ರ ಬಿಸಿ ಬಿಸಿ ವಾದ ವಿವಾದಗಳನ್ನೂ ಹುಟ್ಟು ಹಾಕುತ್ತಿದೆ. ಅದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳೂ ಇವೆ. ಇದು ನೊಬೆಲ್‌ನ ಉಯಿಲಿಗೆ ಬಗೆಯುತ್ತಿರುವ ದ್ರೋಹವೆಂದೇ ಹಲವರು ಕಟುವಾಗಿ ಟೀಕಿಸಿದ್ದಾರೆ.

೧೯೦೧ ರಲ್ಲಿ ಪ್ರಪ್ರಥಮವಾಗಿ ಶಾಂತಿ ಪ್ರಶಸ್ತಿಯನ್ನು ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಯ ಸ್ಥಾಪಕ ಜೀನ್ ಹೆನ್ರಿ ಡಾಂಟ್‌ನಿಗೆ ನೀಡಿದ ನಂತರ ಎಂಟು ದಶಕದಲ್ಲಿ ನಾರ್ವೆಜಿಯನ್ ಸಮಿತಿ ಒಂದು ಪರ್ಸನ್ ಅರ್ಹ ವ್ಯಕ್ತಿಗಳಿಗೆ ಪ್ರಶಸ್ತಿ ನೀಡುವಲ್ಲಿ ವಿಫಲವಾಗಿದೆ. ವಿವಾದಾತ್ಮಕ ವ್ಯಕ್ತಿಗಳಿಗೆ ಪ್ರಶಸ್ತಿ ನೀಡಿರುವುದರೊಂದಿಗೆ ಎಷ್ಟೋ ಅರ್ಹ ವ್ಯಕ್ತಿಗಳಿಗೆ ಪ್ರಶಸ್ತಿಯನ್ನು ನಿರಾಕರಿಸಿದೆ. ನಾರ್ವೇಜಿಯನ್ ಸಮಿತಿ ಈ ಪಾಪಪ್ರಜ್ಞೆಯಿಂದ ನರಳುತ್ತಲೇ ಇರಬೇಕಾಗುತ್ತದೆ.

ವಿಶ್ವಶಾಂತಿಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟ ಬರ್ಟ್ರಾಂಡ್ ರಸೆಲ್, ಗಾಂಧಿ, ನೆಹರೂ, ಟಿಟೋ ಹೀಗೆ ಎಷ್ಟೋ ಮಂದಿ ಈ ಶಾಂತಿ ಪ್ರಶಸ್ತಿಯಿಂದ ವಂಚಿತರಾಗಿದ್ದಾರೆ. ೧೯೪೭ರಲ್ಲಿ ನಾರ್ವೆಜಿಯನ್ ಸಮಿತಿ ನೋಬೆಲ್‌ನ ಇಚ್ಛೆ ಪೂರೈಸಬೇಕೆಂದಿದ್ದರೆ ಗಾಂಧಿಗೆ ಶಾಂತಿ ಪಾರಿತೋಷಕ ನೀಡಬೇಕಿತ್ತು. ಬದಲಾಗಿ ಈ ಸಮಿತಿ ಅಮೇರಿಕ ಹಾಗೂ ಬ್ರಿಟನ್ನಿನ ಎರಡು ಸಂಸ್ಥೆಗಳಿಗೆ ಪಾರಿತೋಷಕ ಹಂಚಿ ಕೈ ತೊಳೆದುಕೊಂಡಿತು. ೧೯೪೮ರಲ್ಲಾದರೂ ವಿಶ್ವಭ್ರಾತೃತ್ವಕ್ಕಾಗಿ ತಮ್ಮನ್ನೇ ಆಹುತಿ ಮಾಡಿಕೊಂಡ ಗಾಂಧಿಗೆ ಪಾರಿತೋಷಕ ದೊರಕಬೇಕಿತ್ತು. ಆದರೆ ಆ ವರ್ಷ ಶಾಂತಿ ಪಾರಿತೋಷಕಕ್ಕೆ ಸೂಕ್ತ ವ್ಯಕ್ತಿ ಸಿಗಲಿಲ್ಲವೆಂದು ಪ್ರಶಸ್ತಿಯನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ನಾರ್ವೆಜಿಯನ್ ಸಂಸ್ಥೆಯ ಪಕ್ಷಪಾತ ಧೋರಣೆಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇಕೆ?

೧೯೭೩-ನೊಬೆಲ್ ಸಮಿತಿಯ ಸತ್ವ ಪರೀಕ್ಷೆಯ ಕಾಲ. ವಿಯೆಟ್ನಾಂ ಯುದ್ಧವನ್ನು ನಿಲ್ಲಿಸುವ ಪ್ಯಾರಿಸ್ ಒಪ್ಪಂದಕ್ಕೆ ಪ್ರಯತ್ನಿಸಿದ ಹೆನ್ರಿ ಕಿಸಿಂಜರ್ ಹಾಗೂ ವಿಯೆಟ್ನಾಮಿನ ಲೇಡಕ್‌ಥೋರಿಗೆ ಶಾಂತಿ ಪಾರಿತೋಷಕವನ್ನು ನಾರ್ವೆಜಿಯನ್ ಸಮಿತಿ ಘೋಷಿಸಿತು. [ಈ ಹೆನ್ರಿ ಕಿಸಿಂಜರ್ ಕಾಂಬೋಡಿಯದಲ್ಲಿ ರಹಸ್ಯವಾಗಿ ಬಾಂಬ್ ಸ್ಫೋಟ ಹಾಗೂ ಚಿಲಿಯ ನರಮೇಧಕ್ಕೆ ಮೂಲ ಕಾರಣನಾದವರು.] ಈ ಆಯ್ಕೆಯನ್ನು ವಿರೋಧಿಸಿ ಸಮಿತಿಯ ಇಬ್ಬರು ಸದಸ್ಯರು ರಾಜೀನಾಮೆ ನೀಡಿದರು. 'ಥೋ' ಪ್ರಶಸ್ತಿಯನ್ನು ನಿರಾಕರಿಸಿದರು. ಅಲ್ಲದೆ ಇಲ್ಲೂ ವಿಪರ್ಯಾಸವೆಂದರೆ ಈ ಒಪ್ಪಂದದಿಂದ ವಿಯೆಟ್ನಾಂ ಯುದ್ಧ ನಿಲ್ಲಲಿಲ್ಲ. ಅಂತಿಮವಾಗಿ ಅದು ವಿಯೆಟ್ನಾಂನ ಮಿಲಿಟರಿ ವಿಜಯವಾಯಿತು.

ಇದೇ ರೀತಿ ನಡೆದ ಇನ್ನೊಂದು ಘಟನೆಯೆಂದರೆ ನಾರ್ವೇಜಿಯನ್ ಸಮಿತಿ 'ಅನ್ವರ್ ಸಾದತ್'ರನ್ನು ನೊಬೆಲ್ ಪ್ರಶಸ್ತಿಗೆ ಆರಿಸಿದ್ದು. ಅನ್ವರ್ ಸಾದತ್‌ರ ಹೆಸರನ್ನು ನೊಬೆಲ್ ಪ್ರಶಸ್ತಿಗೆ ಸೂಚಿಸಿದವರು ಹೆನ್ರಿ ಕಿಸಿಂಜರ್ ಮಹಾಶಯರೆ. ಈ ಪ್ರಶಸ್ತಿ ನೀಡಿದ್ದು ಕ್ಯಾಂಪ್

ಡೇವಿಡ್ ಒಪ್ಪಂದದ ಮೂಲಕ ಇಜಿಪ್ತ್ ಮತ್ತು ಇಸ್ರೇಲ್ ನಡುವಣ ವೈರತ್ವಕ್ಕೆ ಮಂಗಳ ಹಾಡುವಂಥದಾಗಿತ್ತು. ಜೊತೆಯಲ್ಲಿ ಮೈನ್‌ಕೆಮ್ ಬೇಗಿನ್‌ರ ಹೆಸರು ಸಹ ಸೂಚನೆಯಾಗಿತ್ತು.

ಆದರೆ ಪ್ರಶಸ್ತಿಯಿಂದ ಉತ್ತೇಜನ ದೊರೆತೋ ಏನೋ ಎಂಬಂತೆ ಇಸ್ರೇಲಿನ ಬೇಗಿನ್ ಲೆಬನಾನ್ ಮೇಲೆ ಎರಡು ಸಾರಿ ಆಕ್ರಮಣ ನಡೆಸಿದರು. ಅಂದಿನಿಂದ ಇಂದಿನ ವರೆಗೂ ಆ ಉಪಖಂಡದಲ್ಲಿ ಶಾಂತಿ ನೆಲೆಸುವ ಸೂಚನೆಗಳು ಕಂಡುಬರುತ್ತಿಲ್ಲ.

ಈ ಆಯ್ಕೆಗಳ ನಡುವೆಯೇ ವಿವಾದ ಎಬ್ಬಿಸಿದ ಮತ್ತೊಂದು ಆಯ್ಕೆ ಸೋವಿಯತ್ ವಿಜ್ಞಾನಿ ಆಂದ್ರೆಯಿ ಸಖರೋವ್‌ನನ್ನು ಆರಿಸಿದ್ದು. ಹೈಡ್ರೋಜನ್ ಬಾಂಬ್ ತಯಾರಿಸಿ ಸಖರೋವ್ ವಿವಾದಾತ್ಮಕ ವ್ಯಕ್ತಿಯಾಗಿದ್ದರೂ ಮನುಕುಲಕ್ಕೆ ಈತ ನೀಡಿರುವ ಕಾಣಿಕೆ ಅಪಾರ. ಯುರೋಪಿಯನ್ ರಾಷ್ಟ್ರಗಳ ಉಳಿವಿಗಾಗಿ ಹೆಲ್ಸಿಂಕಿ ಒಪ್ಪಂದವನ್ನು ವಿರೋಧಿಸಿ ಸಖರೋವ್ ಸೆರೆಮನೆ ಸೇರಿದ. ಆದರೆ ಅದು ವರೆಗೂ ಸಖರೋವ್‌ನನ್ನು ಗುರುತಿಸದ ನಾರ್ವೇಜಿಯನ್ ಸಮಿತಿ ಕಮ್ಯುನಿಸ್ಟ್ ರಾಷ್ಟ್ರವೊಂದರ ವಿರುದ್ಧ ಬಂಡೆದ್ದ ಒಬ್ಬ ವಿಜ್ಞಾನಿಯೆಂದೇ ಸಖರೋವ್‌ನನ್ನು ನೊಬೆಲ್ ಪಾರಿತೋಷಕಕ್ಕೆ ಆಯ್ಕೆ ಮಾಡಿತು.

೧೯೮೩ರಲ್ಲಿ ಆಯ್ಕೆಯಾದ ಪೋಲಿಶ್ ಕಾರ್ಮಿಕರ ನಾಯಕ ಲೆ ವಲೇಸಾನ ಆಯ್ಕೆ ಸಹ ಇಷ್ಟೇ ವಿವಾದಾತ್ಮಕ ಅಥವಾ ಇನ್ನೂ ಹೆಚ್ಚು ವಿವಾದಾತ್ಮಕವಾದುದು. ಇಡೀ ಪ್ರಪಂಚದಲ್ಲಿ ಶಕ್ತರಾಷ್ಟ್ರಗಳು ಶಸ್ತ್ರಾಸ್ತ್ರ ಪೈಪೋಟಿ ನಡೆಸುತ್ತಿರುವಾಗ ಇಡೀ ಪ್ರಪಂಚ ತಾರಾಸಮರದ ಅಂಚಿನಲ್ಲಿರುವಾಗ ನಿಶ್ಶಸ್ತ್ರೀಕರಣದ ಬಗ್ಗೆ ಕೂಗಿಟ್ಟ ಯಾರನ್ನೂ ಆರಿಸದೆ ನಾರ್ವೇಜಿಯನ್ ಸಮಿತಿ ಸೂಚನೆಗೊಂಡ ೭೯ ಜನರಲ್ಲಿ ಲೆ ವಲೇಸಾನನ್ನು ಆರಿಸಿತು. ಈ ಪಟ್ಟಿಯಲ್ಲಿ ಮಾನವೀಯ ಹಕ್ಕುಗಳಿಗಾಗಿ ಆಫ್ರಿಕದ ಕತ್ತಲ ಜೈಲಲ್ಲಿ ಕೊಳೆಯುತ್ತಿದ್ದ ಕರಿಯರ ಧ್ವನಿಯಾದ ನೆಲ್ಸನ್ ಮಾಂಡೆಲಾ, ಎರಡನೇ ಪೋಪ್ ಜಾನ್ ಪಾಲ್, ವಿಯೆಟ್ನಾಂ ಯುದ್ಧವನ್ನು ಟೀಕಿಸಿದ ಹಾಗೂ ಪ್ರಪಂಚದ ರಾಷ್ಟ್ರಗಳ ನಡುವಣ ಬಾಂಧವ್ಯಕ್ಕಾಗಿ ಅಧ್ಯಯನದ ಫುಲ್‌ಬ್ರೈಟ್ ವಿದ್ಯಾರ್ಥಿ ವೇತನ ಸ್ಥಾಪಿಸಿದ ಮತ್ತು ಅಣುಯುದ್ಧ ತಾರಾಸಮರವನ್ನು ಕಟುವಾಗಿ ಟೀಕಿಸಿ ವಿರೋಧಿಸಿದ ಜೇಮ್ಸ್ ಫುಲ್‌ಬ್ರೈಟ್ ಹಾಗೂ ಹರ್ಮನ್ ಸ್ಮೀನರ್ ಇದ್ದರೂ ನಾರ್ವೇಜಿಯನ್ ಸಮಿತಿ ವಲೇಸಾನನ್ನು ಆರಿಸಿತು. ಇದರಿಂದ ಪ್ರಪಂಚ ಶಾಂತಿಗಾಗಿ ಹೋರಾಟ ಮಾಡಿದ ಎಷ್ಟೋ ಜನಕ್ಕೆ ದಿಗ್ಭ್ರಮೆ ಕೂಡ ಆಯಿತು. ಪೋಲಿಶ್ ಕಾರ್ಮಿಕರ ಹೋರಾಟಕ್ಕೂ ವಿಶ್ವಶಾಂತಿಗೂ ಏನು ಸಂಬಂಧ ಎಂಬ ಸಂದೇಹ ಎಲ್ಲರನ್ನೂ ಕಾಡಿತು. ಅಲ್ಲದೆ ೧೯೮೩ರಲ್ಲಿ ಲೆ ವಲೇಸಾ ಖ್ಯಾತಿಯ ಉತ್ತುಂಗದಲ್ಲಿದಾಗ ಬಹುಮಾನ ಸಿಕ್ಕಲೇ ಇಲ್ಲ. ೧೯೮೩ರಲ್ಲಿ ಸಾಲಿಡಾರಿಟಿ ಯೂನಿಯನ್ ಕೊಚ್ಚಿ ಹೋಗಿತ್ತು. ಸಾಲಿಡಾರಿಟಿ ಯೂನಿಯನ್ನಿನ ಮೇಲೆ ಕಟುವಾದ ನಿರ್ಬಂಧ ಹೇರಲಾಗಿತ್ತು. ಇಂಥ ಸಮಯದಲ್ಲಿ ನಾರ್ವೇಜಿಯನ್ ಸಮಿತಿ ವಲೇಸಾನಿಗೆ ಈ ಬಹುಮಾನ ನೀಡಿದ್ದು ಅವರ ಅಂತರಾಳದ ಭಾವನೆಗಳಿಗೆ, ಕಾರಣಗಳಿಗೆ ಸ್ಪಷ್ಟ ರೂಪ ಕೊಟ್ಟಂತಾಯಿತು. ಆಗ ಹೆಚ್ಚು ಕಡಿಮೆ ಪೋಲೀಶ್ ಕಾರ್ಮಿಕರ ಸಂಘಟನೆ ಮುಚ್ಚುವ ಸ್ಥಿತಿಗೆ ಬಂದಿತ್ತು. ವಲೇಸಾನ ಕೀರ್ತಿಸೂರ್ಯನಿಗೆ ಗ್ರಹಣ ತಗುಲಿತ್ತು. ಆಗ ವಲೇಸಾ ಕಮ್ಯುನಿಸ್ಟ್ ರಾಷ್ಟ್ರಗಳ ಕಾರ್ಮಿಕರ ನಾಯಕ ಮಾತ್ರವಾಗಿರಲಿಲ್ಲ. ಅವನಿಗೆ ನಾಯಕನ ವರ್ಚಸ್ಸು ಕೂಡ ಬೆಳೆದಿತ್ತು. ಹಾಗಾಗಿ ಸೋಶ್ಯಲಿಸ್ಟ್ ಸರಕಾರದ ವಿರುದ್ಧ ನಡೆಯುತ್ತಿರುವ ಪ್ರತಿಭಟನೆಗೆ ಪುನಃ ಜೀವ ತುಂಬುವ ಉದ್ದೇಶದಿಂದಷ್ಟೇ ನಾರ್ವೇಜಿಯನ್ ಸಮಿತಿ ವಲೇಸಾನಿಗೆ ಈ ಬಹುಮಾನವನ್ನು ನೀಡಿತು. ವಲೇಸಾಗೆ ನೀಡಿದ ಈ ಬಹುಮಾನದಿಂದ ಇತರ ರಾಷ್ಟ್ರಗಳ ಕಾರ್ಮಿಕರ ಹೋರಾಟಕ್ಕೆ ಜೀವ

[illegible] ನಾರ್ವೇಜಿಯನ್ ಸಮಿತಿಯು ತಾನೆ. ಆದರೆ ಇದರಿಂದ ವಿಶ್ವಶಾಂತಿಗೆ ಕೊಡುಗೆ ಏನು ಎಂಬ ಪ್ರಶ್ನೆಗೆ ನಾರ್ವೇಜಿಯನ್ ಸಮಿತಿಯ ಉತ್ತರ ನಕಾರವೇ. ಇದು ಭೌತ ಶಾಸ್ತ್ರಕ್ಕೆ ನೀಡುವ ಪ್ರಶಸ್ತಿಯನ್ನು ಒಬ್ಬ ಖ್ಯಾತ ಕಲಾವಿದನಿಗೆ ನೀಡಿದಂತಿಲ್ಲವೇ?

ಹೀಗೆಯೇ ಹುಡುಕುತ್ತಾ ಹೋದರೆ ಎಷ್ಟೋ ಉದಾಹರಣೆಗಳು ಸಿಕ್ಕಬಹುದು. ಕಿಸಿಂಜರ್, ಬೇಗಿನ್, ಸಾದತ್, ವಲೇಸಾ, ಮುಂತಾದವರು ನಾರ್ವೇಜಿಯನ್ ಸಮಿತಿಯು ನಡೆಸುತ್ತಿರುವ ಪಕ್ಷಪಾತದ ಜೀವಂತ ಸಾಕ್ಷಿಗಳು.

ಸಾಹಿತ್ಯ ಪ್ರಶಸ್ತಿಯಲ್ಲೂ ಇಂತಹ ಉದಾಹರಣೆಗಳು ಸಾಕಷ್ಟಿವೆ. ಇಲ್ಲಿಯೂ ಎಲ್ಲಾ ರೀತಿಯಿಂದಲೂ ಅರ್ಹರಾದ ಲೇಖಕರಿಗೆ ಸಿಕ್ಕದೆ ತೀರಾ ಸಾಧಾರಣದವರಿಗೂ ಬಹುಮಾನ ಸಿಕ್ಕಿದೆ. ಇಲ್ಲಿ ಕಮ್ಯುನಿಸ್ಟ್ ದೇಶಗಳಲ್ಲಿ ಬಂಡೆದ್ದ ಲೇಖಕರಿಗೆ ಬೇಕೆಂದೇ ಬಹುಮಾನಗಳನ್ನು ನೀಡಲಾಗುತ್ತಿದೆ. ಟಾಲ್‌ಸ್ಟಾಯ್ ಹೆನ್ರಿ ಜೇಮ್ಸ್, ಮಾರ್ಸೆಲ್ ಪ್ರೂಸ್ಟ್, ಜೋಸೆಫ್ ಕಾನ್ರಾಡ್, ಜೇಮ್ಸ್ ಜಾಯ್ಸ್, ಕಾಫ್ಕಾ, ಡಿ. ಹೆಚ್. ಲಾರೆನ್ಸ್ ಮೊದಲಾದವರಿಗೆ ಪ್ರಶಸ್ತಿ ಬರಲೇ ಇಲ್ಲ. ಕಳೆದ ವರ್ಷದಲ್ಲಿ ವಿಲಿಯಂ ಗೋಲ್ಡಿಂಗ್‌ಗೆ ನೀಡಿದ ಬಹುಮಾನ ಸಾಕಷ್ಟು ವಿವಾದ ಅಲೆಯನ್ನೆಬ್ಬಿಸಿತು. ಆಯ್ಕೆ ಸಮಿತಿಯ ಸದಸ್ಯರೇ ಒಬ್ಬರು ಈ ಆಯ್ಕೆಯನ್ನು ವಿರೋಧಿಸಿದರು. ಇದು ಆಯ್ಕೆ ಸಮಿತಿಯಲ್ಲಿ ರಾಜಕೀಯ ನಡೆಯುತ್ತದೆನ್ನುವದಕ್ಕೆ ನಿದರ್ಶನವಷ್ಟೆ.

ಭೌತಶಾಸ್ತ್ರ ಮತ್ತು ರಸಾಯನ ಶಾಸ್ತ್ರಗಳಿಗಾಗಿರುವ ಬಹುಮಾನವನ್ನು ಸ್ವೀಡಿಶ್ ವಿಜ್ಞಾನ ಅಕಾಡೆಮಿ ನೀಡಬೇಕು. ಶರೀರ ಶಾಸ್ತ್ರಕ್ಕಾಗಿ ಅಥವಾ ವೈದ್ಯಕೀಯಕ್ಕಾಗಿ ಇರುವ ಬಹುಮಾನವನ್ನು ಸ್ಟಾಕ್‌ಹೋಂನಲ್ಲಿರುವ ಕರೊಲಿನ್‌ಸ್ಕ ಇನ್‌ಸ್ಟಿಟ್ಯೂಟ್ ಸಾಹಿತ್ಯಕ್ಕಾಗಿ ಇರುವ ಬಹುಮಾನವನ್ನು ಸ್ಟಾಕ್‌ಹೋಂ ಅಕಾಡೆಮಿ ನೀಡಬೇಕು. ನಾರ್ವೇಜಿಯನ್ ಸ್ಟೋರ್ಟಿಂಗ್ ನೇಮಿಸುವ ಐದು ಸದಸ್ಯರ ಒಂದು ಸಮಿತಿ ಶಾಂತಿಗಾಗಿ ಇರುವ ಬಹುಮಾನವನ್ನು ನೀಡಬೇಕೆಂಬುದು ನೊಬೆಲ್‌ನ ಆಶಯ. ಆಗ ಅವನ ಮನಸ್ಸಿನಲ್ಲಿದ್ದ ಆಶಯಕ್ಕೆ ಕಾರಣ ಆ ಕಾಲಕ್ಕೆ ನಾರ್ವೆಯ ಅಂತಾರಾಷ್ಟ್ರೀಯ ಶಾಂತಿ ಸ್ಥಾಪನಾ ಕೇಂದ್ರ. ಹಾಗಾಗಿ ಅಂತಾರಾಷ್ಟ್ರೀಯ ಶಾಂತಿಯ ಕಾರಣಕ್ಕೆ ನೀಡುವ ಈ ಈ ಬಹುಮಾನವನ್ನು ನಾರ್ವೇಜಿಯನ್ ಸ್ಟೋರ್ಟಿಂಗ್‌ನವರು ನೀಡಲಿ ಎಂಬುದು ನೊಬೆಲ್‌ನ ಆಶಯವಾಗಿತ್ತು.

ಅದು ಕಳೆದ ಶತಮಾನದಲ್ಲಾಯಿತು. ಈಗ ನಾಮ್‌ಸೆನ್ ನದಿಯಲ್ಲಿ ಸಾಕಷ್ಟು ನೀರು ಹರಿದಿದೆ. ನ್ಯಾಟೋ(NATO)ದ ಸದಸ್ಯ ರಾಷ್ಟ್ರವಾಗಿರುವ ನಾರ್ವೆ ನೋಬೆಲ್‌ನ ಕಾಲದಲ್ಲಿದ್ದಂತಿಲ್ಲ. ಅಂತೆಯೇ ಈಗ ಶಾಂತಿ ಬಹುಮಾನ ಕೂಡ ನೊಬೆಲ್‌ನ ಕಾಲದಲ್ಲಿದ್ದಂತಿಲ್ಲ. ❁

ಒಬ್ಬ ವೃದ್ಧ ಸಣ್ಣಮಕ್ಕಳು ಚೆಂಡು ಆಡುವುದನ್ನು ನೋಡುತ್ತ ಕುಳಿತಿದ್ದ. ಎದುರಿಗೆ ಸಣ್ಣ ಹುಡುಗ ಬಂದಾಗ "ಮಗು ನಿನ್ನ ಹೆಸರೇನು?" ಎಂದು ಕೇಳಿದ.

"... ರಾಜು ..." ಎಂದು ಬಂತು ಉತ್ತರ.

"ನಿನ್ನ ವಯಸ್ಸೆಷ್ಟು?"

"... ಒಂಭತ್ತು ..."

"ಒಂಭತ್ತು ವರ್ಷವಾದರೂ ನನ್ನ ಕೋಲು ನಿನಗಿಂತ ಎತ್ತರವಾಗಿದೆಯಲ್ಲೊ."

"ಹಾಗಾದರೆ ನಿಮ್ಮ ಕೋಲಿನ ವಯಸ್ಸೇನು?"

-ಕೆ. ಎಮ್. ವಿಜಯಕುಮಾರ

# ಇದುವೆ ಜೀವ ಇದು ಜೀವನ

ಮೊನ್ನೆ ನನ್ನ ಗೆಳತಿಯು ವಿದೇಶದಿಂದ ಬೆಂಗಳೂರಿಗೆ ಬಂದಿದ್ದಳು. ಅವಳಿಗೆ ೨-೩ ತಿಂಗಳು ರಜವಿತ್ತು. ನನ್ನ ಮತ್ತು ಅವಳ ವಿದ್ಯಾಭ್ಯಾಸ ಒಂದು ಹಳ್ಳಿಯಲ್ಲಿ ನಡೆದಿತ್ತು. ಆ ಹಳ್ಳಿಯನ್ನು ನೋಡಲು ನನಗೂ ತುಂಬಾ ಆಸೆಯಿತ್ತು. ಅವಳಿಗೂ ಆಸೆಯಿದ್ದ ಕಾರಣ ನಾನೂ ಅವಳೂ ಇಬ್ಬರೂ ಕೂಡಿಯೇ ಹೊರಟೆವು. ಆ ಹಳ್ಳಿಯಲ್ಲಿ ಅವಳ ತಾತನ ಮನೆಯಿತ್ತು. ತಾತನವರು ಆ ಕಾಲದ ದೊಡ್ಡ ಶ್ರೀಮಂತ ಜಮೀನುದಾರರಾಗಿದ್ದರು. ಆ ಜಮೀನುದಾರರ ನಿಧನದ ನಂತರ ಅವರ ಮಕ್ಕಳು ಯಾರೂ ಅಲ್ಲಿರದೆ ಎಲ್ಲರೂ ನಗರಗಳತ್ತ ಉದ್ಯೋಗ, ಉದ್ಯಮೆಗಳಿಗಾಗಿ ಹೊರಟು ಹೋಗಿದ್ದರು. ವಿಶಾಲವಾದ ಬಂಗಲೆಯೊಂದು ಅವರ ಹೆಸರಿಗಾಗಿ ಉಳಿದಿದ್ದಿತು. ಅದನ್ನು ಒಬ್ಬ ಮೇಲ್ವಿಚಾರಕ ನೋಡಿಕೊಳ್ಳುತ್ತಿದ್ದ.

ನಾನು ಮತ್ತು ನನ್ನ ಗೆಳತಿ ಬೆಳಗಿನ ಬಸ್ಸಿನಲ್ಲಿ ಹಳ್ಳಿಯನ್ನು ತಲಪಿದ್ದಾಯಿತು. ಬಂಗಲೆಯಲ್ಲಿ ಉಳಿದುಕೊಂಡು ನಾವು ಓದುತ್ತಿದ್ದ ಶಾಲೆಯನ್ನು ನೋಡಿಕೊಂಡು ಬರೋಣವೆಂದು ಹೊರಟೆವು. ಬಾಲ್ಯದ ನೆನಪುಗಳೇ ಅಪೂರ್ವ ಆನಂದ ಕೊಡುತ್ತವೆ. ಹಾಗೆ ಆ ಸವಿನೆನಪುಗಳನ್ನು ಮೆಲ್ಲುತ್ತಾ ಶಾಲೆಯ ಮುಖ್ಯೋಪಾಧ್ಯಾಯರನ್ನು ಭೇಟಿಯಾದೆವು, ಅವರು ನಮಗೆ ಹೊಸಬರು. ನನ್ನ ಗೆಳತಿಯು ತಾತನ ಮನೆಯಲ್ಲಿ ಒಂದು ಕೆತ್ತನೆಯ ಸುಂದರವಾದ ಗಡಿಯಾರವಿತ್ತು. ಅದನ್ನು ಅಲ್ಲಿ ಯಾರೂ ಉಪಯೋಗಿಸುತ್ತಿರಲಿಲ್ಲವಾದ್ದರಿಂದ ಅದನ್ನು ಶಾಲೆಗೆ ದಾನವಾಗಿ ಕೊಡುವ ಉದ್ದೇಶವಿದ್ದಿತು. ಆದ್ದರಿಂದ ನಾವಿಬ್ಬರೂ ಮುಖ್ಯೋಪಾಧ್ಯಾಯರಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದೆವು. ಆಗ ಅವರು, "ನೋಡಿ ತಾಯಿ, ನೀವು ಶಾಲೆಗೆ ಕೊಡುತ್ತಿರುವ ಕಾಣಿಕೆಯೇನೋ ಅತ್ಯಂತ ಅಮೂಲ್ಯವಾಗಿದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅದರ ಉಪಯೋಗ ಬೇಡ. ಏಕೆಂದರೆ, ಈಗಿನ ಆಧುನಿಕ ಯುಗದ ವಿದ್ಯುತ್ ಚಾಲಿತ ಗಡಿಯಾರಗಳೇ ಮಕ್ಕಳನ್ನು ಆಕರ್ಷಿಸುತ್ತವೆ. ಅಂಕಿಗಳು, ದೊಡ್ಡ ಮುಳ್ಳು, ಸಣ್ಣ ಮುಳ್ಳು, ಕಾಲು, ವರೆ, ಮುಕ್ಕಾಲು. ಎಂಬ ಹೇಳಿಕೆಯಲ್ಲಿ ಈಗ ಸಮಯವನ್ನು ಅಳೆಯಬೇಕಾಗಿಲ್ಲ. ದೊಡ್ಡ ಮುಳ್ಳು ಯಾವ ಅಂಕಿಯ ಮೇಲಿರುತ್ತದೋ ಅದನ್ನು ೫ ರಿಂದ ಗುಣಿಸಿ ಅಷ್ಟು ನಿಮಿಷಗಳೆಂದೂ, ಸಣ್ಣ ಮುಳ್ಳು ಯಾವ ಅಂಕಿಯ ಮೇಲೆ ಇರುತ್ತದೋ ಅಷ್ಟು ಗಂಟೆಯೆಂದು ನಿರ್ಧರಿಸಿಕೊಳ್ಳಲು ಈಗಿನ ಪೀಳಿಗೆಗೆ ಬಲು ಕಷ್ಟ. ಇದನ್ನು ಸರಳೀಕರಿಸಿದ ವಿದ್ಯುತ್ ಚಾಲಿತ ಗಡಿಯಾರಗಳು ಕರಾರುವಾಕ್ಕಾಗಿ ಸಮಯ ತೋರಿಸುತ್ತವೆ. ಈಗಿನ ಹುಡುಗರಿಗೆ ಸಮಯವನ್ನು ಕೇಳಿದರೆ, ಗುಣಿಸದೆ, ಭಾಗಿಸದೆ, ಒಮ್ಮೆಲೆ ೬-೨೬, ೯-೧೮, ೧೨-೩೪ ಎಂದು ಹೇಳಿಬಿಡುತ್ತಾರೆ. ಆದ್ದರಿಂದ ತಾಯಿ ನೀವು ಕೊಡುವುದಾದರೆ ಒಂದು ವಿದ್ಯುತ್ ಚಾಲಿತ ಗಡಿಯಾರವನ್ನೇ ಕೊಡಿ," ಎಂದು ಹೇಳಿದರು.

ಮುಖ್ಯೋಪಾಧ್ಯಾಯರ ಸಮಯೋಚಿತ ಸಲಹೆ ನನ್ನ ಗೆಳತಿಗೆ ಸಂಪೂರ್ಣವಾಗಿ ಹಿಡಿಸಿತು, ಅವಳು ಬೆಂಗಳೂರಿಗೆ ಬಂದು ವಿದ್ಯುತ್ ಚಾಲಿತ ಗಡಿಯಾರವನ್ನು ತೆಗೆದುಕೊಂಡು ಹೋಗಿ ಶಾಲೆಗೆ ಕೊಟ್ಟು ಬಂದಳು. ತಾತನ ಗಡಿಯಾರವನ್ನು ತನ್ನ ವಿದೇಶದ ಹೊಸ ಮನೆಯಲ್ಲಿ ಅಲಂಕಾರದ ವಸ್ತುವನ್ನಾಗಿ ಇರಿಸಿಕೊಳ್ಳುತ್ತೇನೆಂದಳು.

–ಶಾರದಾ ಶಾಮಣ್ಣ

ನಾವು ದಕ್ಷಿಣ ಭಾರತ ಪ್ರವಾಸದಲ್ಲಿದ್ದಾಗ ನಡೆದ ಘಟನೆಯಿದು. ಸುಮಾರು ೫೦ ಜನರಿದ್ದ ನಮ್ಮ ಟೂರಿಸ್ಟ್ ಬಸ್ಸು ಕನ್ಯಾಕುಮಾರಿಯತ್ತ ಪ್ರಯಾಣಿಸುತ್ತಿತ್ತು. ಮಧ್ಯರಾತ್ರಿಯ ಸಮಯ, ಪ್ರಯಾಣಿಕರೆಲ್ಲ ಗಾಢ ನಿದ್ರೆಯಲ್ಲಿದ್ದರು. ಆದರೆ, ಅಲ್ಲಿಯವರೆಗೆ ಸರಾಗವಾಗಿ ಸಾಗುತ್ತಿದ್ದ ಬಸ್ಸು, ಇದ್ದಕ್ಕಿದ್ದಂತೆ ರಸ್ತೆ ಬದಿಗೆ ಅರ್ಧ ವಾಲಿ ಗಿಡವೊಂದಕ್ಕೆ ಢಿಕ್ಕಿ ಹೊಡೆಯಿತು. ಅದೃಷ್ಟವಶಾತ್

ದೇನೂ ಅಪಘಾತವಾಗಿರಲಿಲ್ಲ. ಕೆಲವರಿಗೆ ಚಿಕ್ಕ ಪುಟ್ಟ ಗಾಯಗಳಾಗಿದ್ದವು. ಪ್ರಯಾಣಿಕರೆಲ್ಲ ಜಾಗರೂಕತೆಯಿಂದ ಕೆಳಗಿಳಿದರು. ಆದರೆ ನಂತರ ಸುತ್ತಲೂ ಕಣ್ಣಾಡಿಸಿದಾಗ ಎಲ್ಲರ ಮೈ ಜುಮ್ಮೆಂದಿತು. ಕಾರಣ, ರಸ್ತೆಯ ಪಕ್ಕದಲ್ಲೇ ಒಂದು ದೊಡ್ಡ, ಆಳವಾದ ಹೊಂಡ-ವಿತ್ತು. ಬಸ್ಸು ಇನ್ನೂ ಸ್ವಲ್ಪ ಹೆಚ್ಚು ವಾಲಿ-ದ್ದರೆ ಆ ಹೊಂಡಕ್ಕೆ ಬೀಳುತ್ತಿತ್ತು. ನಮ್ಮ ಅದೃಷ್ಟ ಚೆನ್ನಾಗಿತ್ತು.

ಆದರೆ ವಾಲಿ ನಿಂತಿದ್ದ ನಮ್ಮ ಬಸ್ಸನ್ನು ರಸ್ತೆಗೆ ಎಳೆದು ತರಲು ಇನ್ನೊಂದು ದೊಡ್ಡ ವಾಹನದ ಅವಶ್ಯಕತೆಯಿತ್ತು. ದಾರಿಯಲ್ಲಿ ಹೊರಟಿದ್ದ ಟ್ರಕ್ಕು, ಬಸ್ಸುಗಳನ್ನು ನಿಲ್ಲಿಸಿ ನಮ್ಮ ಅವಸ್ಥೆ ವಿವರಿಸಿದರೂ ಅವರು ನಮಗೆ ಸಹಾಯ ಮಾಡಲು ತಯಾರಾಗಲಿಲ್ಲ. ಕೆಲ ವಾಹನಗಳಂತೂ ನಾವು ಕೈ ಮಾಡಿದರೂ ನಿಲ್ಲಲೇ ಇಲ್ಲ. ದಟ್ಟವಾದ ಕಾಡು ಪ್ರದೇಶ. ಇನ್ನೇನಪ್ಪಾ ಮಾಡುವುದು ಎಂದು ಯೋಚಿಸುತ್ತಿದ್ದಂತೆಯೇ ಟೂರಿಸ್ಟ್ ಬಸ್ಸೊಂದು ಬರು-ತ್ತಿರುವುದು ಕಾಣಿಸಿತು. ಅದು ನಿಲ್ಲಬಹುದೆಂಬ ಭರವಸೆ ನಮಗಿರಲಿಲ್ಲ. ಆದರೂ ನಾವು ಕೈ ಮಾಡಿದೊಡನೆ ನಿಂತಿತು. ನಮ್ಮ ಪರಿಸ್ಥಿತಿ ಅರಿತುಕೊಂಡ ಆ ಬಸ್ಸಿನ ಚಾಲಕ, ತನ್ನ ಬಸ್ಸಿನ ಪ್ರಯಾಣಿಕರ ವಿರೋಧವನ್ನೂ ಲೆಕ್ಕಿ-ಸದೆ, ತಕ್ಷಣ ನಮಗೆ ಸಹಾಯ ಮಾಡಲು ತಯಾರಾದ. ಜಾಣತನದಿಂದ, ನಮ್ಮೆಲ್ಲರ ಸಹಾಯದಿಂದ, ಕಮರಿಗೆ ಬೀಳಲಿದ್ದ ನಮ್ಮ ಬಸ್ಸನ್ನು ರಸ್ತೆಗೆ ತಂದು ನಿಲ್ಲಿಸಿದ. ಇದರಲ್ಲಿ ಅವನ ಧೈರ್ಯವೂ ಪ್ರಶಂಸನೀಯವೆ. ಏಕೆಂದರೆ, ನಮ್ಮ ಬಸ್ಸನ್ನು ಎಳೆಯುವಲ್ಲಿ ಸ್ವಲ್ಪ ತಪ್ಪಾದರೂ ಅವನ ಬಸ್ಸೂ ಹೊಂಡಕ್ಕೆ ಬೀಳುತ್ತಿತ್ತು.

ಅವನ ಈ ಉಪಕಾರಕ್ಕೆ ಕೃತಜ್ಞತೆಯ-ನ್ನರ್ಪಿಸಿ ನಮ್ಮಲ್ಲೊಬ್ಬರು ಅವನಿಗೆ ೫೦ ರೂಪಾಯಿ ಕೊಡಲು ಮುಂದಾದರು. ಆದರೆ ಅವನು ಅದನ್ನು ವಿನಯಪೂರ್ವಕವಾಗಿ ತಿರ-ಸ್ಕರಿಸಿದಾಗ ನಮ್ಮೆಲ್ಲರ ಹೃದಯ ತುಂಬಿ ಬಂದಿತ್ತು.

ಕೊನೆಗೆ ನಮ್ಮ ಬಸ್ಸು ಮುಂದೆ ಹೊರಟ ಮೇಲೆಯೇ ಅವನು ತನ್ನ ಬಸ್ಸಿನ ಸಂಚಾರ ಮುಂದುವರಿಸಿದ.

-ಎಸ್ಸಾರ್ ವಾಸುದೇವರಾವ್

ಸುಮಾರು ೫೬-೫೮ ವರ್ಷಗಳ ಹಿಂದಿನ ಮಾತು. ನಮ್ಮಣ್ಣ ಆಗ ಮೈಸೂರಿನಲ್ಲಿ ವೆಸ್ಲಿಯನ್ ಮಿಷನ್ ಹೈಸ್ಕೂಲಿನ ಐದನೇ ಫಾರಂ (ಈಗಿನ ೯ನೇ ತರಗತಿ) ವಿದ್ಯಾರ್ಥಿ. ಅವರ ತರಗತಿಯಲ್ಲಿ ಸುಮಾರು ೨೫-೩೦ ವಿದ್ಯಾರ್ಥಿ-ಗಳು; ಮುಂದೆ ನಟಸಮ್ರಾಟನೆಂದು ಖ್ಯಾತಿ ಗಳಿಸಿದ ಮಹಮದ್ ಪೀರ್ ಕೂಡ ಒಬ್ಬ.

ಆಗ ರೆ. ಸ್ಪೆನ್ಸರ್ ಎಂಬುವರು ಹೈಸ್ಕೂಲಿನ ಪ್ರಿನ್ಸಿಪಾಲ್. ಅವರು ವಾರಕ್ಕೊಂದು ದಿನ 'ಅಡ್ರೆಸ್ ಪೀರಿಯಡ್' ಎಂದು ಒಂದು ಪೀರಿ-ಯಡ್ ತೆಗೆದುಕೊಳ್ಳುತ್ತಿದ್ದರು. ಆ ಪೀರಿಯಡ್-ನಲ್ಲಿ ಧರ್ಮ, ನೀತಿ, ರಾಜಕೀಯ, ಇತ್ಯಾದಿ ವಿಷಯಗಳ ಬಗ್ಗೆ ಪಠ್ಯೇತರ ವಿಷಯ ಮಾತ-ನಾಡುತ್ತಿದ್ದರು. ಒಂದು ದಿನ ಅಂದಿನ ರಾಜ-ಕೀಯದ ಬಗ್ಗೆ ಮಾತನಾಡುತ್ತಾ, "ಮಿಸ್ಟರ್ ಗಾಂಧಿ," ಎಂದರು. ಕೂಡಲೇ ಪೀರ್ ಎದ್ದು ನಿಂತು, "ಮಿಸ್ಟರ್ ಗಾಂಧಿ ಅಲ್ಲ; ಮಹಾತ್ಮಾ ಗಾಂಧಿ. ಅಂತಹ ಮಹಾನ್ ವ್ಯಕ್ತಿಯನ್ನು 'ಮಿಸ್ಟರ್' ಎಂದು ಕರೆದು ಅವಮಾನ ಮಾಡ-ಬೇಡಿ. ನಮಗೆ ಅವರು 'ಮಹಾತ್ಮಾ'; 'ದೇವರು'. ನಿಮ್ಮ ಮಾತನ್ನು ನಾನು ಪ್ರತಿಭಟಿಸುತ್ತೇನೆ," ಎಂದಾಗ ರೆ. ಸ್ಪೆನ್ಸರ್‌ರವರು ಮೂಕ-ರಾದರು. ವಿದ್ಯಾರ್ಥಿಗಳು, "ಭಲೇ, ಪೀರ್!" ಎಂದು ಕೂಗಿದರು.

—ಎಚ್. ಆರ್. ಸಿ. ರಾವ್



# ಗೂರ್ಖಾಲ್ಯಾಂಡ್ ಕೂಗಿನ ಹಿಂದೆ...

**ಟಿ. ಎಂ. ಸುಬ್ಬರಾಯು**

ಹೊಗೆ ಕಾಣಿಸಿಕೊಂಡಿದೆ. ಬೆಂಕಿ ಜೋರಾಗಿ ಹೊತ್ತಿ ಉರಿಯುವ ಸೂಚನೆಗಳು ಕಾಣಿಸುತ್ತಿವೆ. ರಾಷ್ಟ್ರೀಯ ಗೂರ್ಖಾ ವಿಮೋಚನಾ ರಂಗದ ನೇತಾರ ಸುಭಾಷ್ ಘೀಸಿಂಗ್ ಪಶ್ಚಿಮ ಬಂಗಾಲದ ಆಡಳಿತಕ್ಕೆ ಈಗಾಗಲೇ ಸಾಕಷ್ಟು ಕಿರಿಕಿರಿ ಉಂಟುಮಾಡಿದ್ದಾನೆ. ಕೇಂದ್ರ ಸರಕಾರಕ್ಕೆ ಇನ್ನೊಂದು 'ಶೂಲೆಯು' ಸ್ಪಷ್ಟ ಸೂಚನೆಯನ್ನು ಕೊಟ್ಟಿದ್ದಾನೆ. ಕೇಂದ್ರ ಹಾಗೂ ಪಶ್ಚಿಮ ಬಂಗಾಲ ಸರಕಾರಗಳು ಪರಸ್ಪರ ಆರೋಪ ಪ್ರತ್ಯಾರೋಪಗಳನ್ನು ನಡೆಸಲು ಕಾರಣವಾಗಿ ಭೂಗತನಾಗಿದ್ದಾನೆ.

ಪಶ್ಚಿಮ ಬಂಗಾಲದ ಉತ್ತರದಲ್ಲಿ, ಸಮುದ್ರ ಮಟ್ಟದಿಂದ ೩,೬೫೮ ಮೀಟರ್ ಎತ್ತರದಲ್ಲಿ ೩,೦೭೫ ಚದರ ಕಿಲೋಮೀಟರ್ ವಿಸ್ತೀರ್ಣ ಹೊಂದಿದ ದಾರ್ಜಿಲಿಂಗ್ ಜಿಲ್ಲೆ ಗೂರ್ಖಾರ ನೆಲೆವೀಡು. ಇದರ ನೆರೆಯ ಜಿಲ್ಲೆಗಳಾದ ಜಲ್ಪೈಗುರಿ, ಕೂಚ್‌ಬಿಹಾರ್‌ಗಳ ಕೆಲವೆಡೆ ಗೂರ್ಖಾರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಭಾರತವೂ ಸೇರಿದಂತೆ ಪ್ರಪಂಚದಾದ್ಯಂತ ವಾಸಿಸುತ್ತಿರುವ ಗೂರ್ಖಾರ ಒಟ್ಟು ಸಂಖ್ಯೆ ಇಪ್ಪತ್ತು ಲಕ್ಷ. ಇವರಲ್ಲಿ ನಲವತ್ತು ಸಾವಿರ ಮಂದಿ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ತಮ್ಮ ಅಸ್ತಿತ್ವವನ್ನು ಸಾಬೀತುಗೊಳಿಸುವ ನಿಮಿತ್ತ ಪ್ರತ್ಯೇಕ 'ಗೂರ್ಖಾಸ್ಥಾನ'ವೊಂದನ್ನು ರಚಿಸಬೇಕೆಂದು ರಾಷ್ಟ್ರೀಯ ಗೂರ್ಖಾ ವಿಮೋಚನಾರಂಗ ಒತ್ತಾಯಿಸಿದೆ. ಈ ರಂಗ ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿರುವ ಒಂದು ಸ್ವಯಂ ಘೋಷಿತ ಕೂಟ. ಇದರ ನೇತಾರ ಸುಭಾಷ್ ಘೀಸಿಂಗ್. ಈತನೇ ನೇಮಕ ಮಾಡಿಕೊಂಡಿರುವ ಇಪ್ಪತ್ತೆರಡು ಮಂದಿಯ ಕಾರ್ಯಕಾರೀ ಸಮಿತಿಯೊಂದಿದೆ. ಈ ಸಮಿತಿಯ ಸದಸ್ಯರಲ್ಲಿ ಬಹಳಷ್ಟು ಮಂದಿ ನಿವೃತ್ತ ಸೈನಿಕರು.

ಗೂರ್ಖಾರು ಹೆಚ್ಚಾಗಿ ವಾಸಿಸುತ್ತಿರುವ ದಾರ್ಜಿಲಿಂಗ್, ಇದರ ಆಸುಪಾಸಿನ 'ಟರೈ' ಎಂದು ಕರೆಸಿಕೊಳ್ಳುತ್ತಿರುವ ಕೂಚ್‌ಬಿಹಾರ್, ಜಲ್‌ಪೈಗುರಿ ಜಿಲ್ಲೆಗಳ ಕೆಲವು ಭಾಗಗಳನ್ನು ಸೇರಿಸಿ 'ಗೂರ್ಖಾರಾಜ್ಯ' ರಚಿಸಬೇಕೆಂಬುವುದಾಗಿ ರಾಷ್ಟ್ರೀಯ ಗೂರ್ಖಾ ವಿಮೋಚನಾರಂಗ ಇತ್ತೀಚಿನ ದಿನಗಳಲ್ಲಿ ಕೂಗು ಎಬ್ಬಿಸಿದೆ. ಅಸ್ಸಾಂ ಚಳವಳಿ, ಮಿಜೋರಾಮಿನಲ್ಲಿಯ ಅಶಾಂತಿ,

(ವಿವಿಧ ಮೂಲಗಳಿಂದ)

# ಹೋರಾಟದ ನೇತಾರ



ಡಾರ್ಜಿಲಿಂಗಿನ ಗೂರ್ಖಾಗಳ ಮನೆಯ ಗೋಡೆಯ ಮೇಲೆಲ್ಲ ಶೋಭಿಸುತ್ತಿರುವ ಗೂರ್ಖಾ ರಾಷ್ಟ್ರೀಯ ವಿಮೋಚನಾ ರಂಗದ ನಾಯಕ ಸುಭಾಷ್ ಘೀಸಿಂಗ್‌ನಿಗೆ ಈಗ ಐವತ್ತು ವರುಷ. ಹುಟ್ಟಿದ್ದು ೧೯೩೬ರಲ್ಲಿ ಡಾರ್ಜಿಲಿಂಗಿನ ಚಹ ತೋಟದ ಕೆಲಸಗಾರರ ಕುಟುಂಬವೊಂದರಲ್ಲಿ. ಹೆಸರು ಸುಭಾಷ್ ಘೀಸಿಂಗ್ ಎಂದಿದ್ದರೂ ಈತ ಬಂಗಾಳಿ ಅಥವಾ ಪಂಜಾಬಿ ಅಲ್ಲ, ಒಬ್ಬ ಬೌದ್ಧ ಮತಿಯ ಆದರೂ ಶಿವನ ಭಕ್ತ.

ಸೇಂಟ್ ರಾಬರ್ಟ್ಸ್ ಸ್ಕೂಲಿನಲ್ಲಿ ಓದಿದ ಘೀಸಿಂಗ್ ತನಸುಣಿ. ಆತ ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಗೂರ್ಖಾ ರೆಜಿಮೆಂಟಿಗೆ ಸೇರಿದ. ಪಂಜಾಬಿನಲ್ಲಿ ಸೈನ್ಯದಲ್ಲಿದ್ದಾಗಲೇ ಮೆಟ್ರಿಕ್ ಮುಗಿಸಿದ. ೧೯೬೧ರಲ್ಲಿ ಸೈನ್ಯವನ್ನು ತ್ಯಜಿಸಿ, ಪ್ರಾಥಮಿಕ ಶಾಲೆಯ ಉಪಾಧ್ಯಾಯನಾದ. ೧೯೬೪ರಲ್ಲಿ ಅಖಿಲ ಭಾರತ ಗೂರ್ಖಾಲೀಸ್‌ಗೆ ಸೇರುವುದರ ಮೂಲಕ ಅಧಿಕೃತವಾಗಿ ರಾಜಕೀಯಕ್ಕೆ ಪದಾರ್ಪಣೆ ಮಾಡಿದ. ೧೯೬೮ರಲ್ಲಿ 'ನೀಲೋ ಝಂಡಾ' ಸಂಘಟಿಸಿದ. ನಾಲ್ಕು ವರುಷಗಳ ನಂತರ 'ನೇಪಾಳೀ ಪಕ್ಷ' ಸ್ಥಾಪಿಸಿದ. ತುರ್ತುಪರಿಸ್ಥಿತಿಯ ಅವಧಿಯಲ್ಲಿ ಆ ಪಕ್ಷವನ್ನು ವಿಸರ್ಜಿಸಿ 'ಪ್ರಾಂತೋ ಸಂಘ'ವನ್ನು ಸ್ಥಾಪಿಸಿದ. ಆಗಲೇ ಗೂರ್ಖಾ ಜನರ ಮನಸ್ಸಿನಲ್ಲಿ 'ಪ್ರತ್ಯೇಕ ಪ್ರದೇಶ'ದ ಬೀಜವನ್ನು ಘೀಸಿಂಗ್ ಬಿತ್ತಿದ. ೧೯೭೭ರಲ್ಲಿ ಪಶ್ಚಿಮ ಬಂಗಾಳ ವಿಧಾನ ಸಭೆಗೆ ನಡೆದ ಚುನಾವಣೆಯಲ್ಲಿ ಸ್ವತಂತ್ರ ಉಮೇದುವಾರನಾಗಿ ಸ್ಪರ್ಧಿಸಿ ಪರಾಭವ ಹೊಂದಿದ. ೧೯೭೯ರಲ್ಲಿ ಗೂರ್ಖಾಲ್ಯಾಂಡಿನ ತನ್ನ ಕನಸನ್ನು ಬಹಿರಂಗಪಡಿಸಿದ. ಅವಿಶ್ರಾಂತನಾಗಿ ಗುಡ್ಡಬೆಟ್ಟಗಳನ್ನು ಸುತ್ತಿ, ಹಳ್ಳಿಹಳ್ಳಿಗೆ ಹೋಗಿ ಗೂರ್ಖಾ ಜನಕ್ಕೆ ಆಗುತ್ತಿರುವ ಅನ್ಯಾಯದ ಕುರಿತು ತಿಳುವಳಿಕೆ ನೀಡತೊಡಗಿದ. 'ಪ್ರಾಂತೋ ಸಂಘ'ಕ್ಕೆ ೧೯೮೦ರಲ್ಲಿ 'ಪ್ರಾಂತೀಯ ಮೋರ್ಚಾ' ಎನ್ನುವ ಹೊಸ ಹೆಸರಿಟ್ಟ. ಕೆಲವೇ ತಿಂಗಳಲ್ಲಿ ಅದನ್ನೂ ವಿಸರ್ಜಿಸಿದ. ಅನಂತರ ಹುಟ್ಟು ಹಾಕಿದ್ದು. ಜಿ. ಎನ್. ಎಲ್. ಎಫ್. — ಗೂರ್ಖಾ ರಾಷ್ಟ್ರೀಯ ವಿಮೋಚನಾ ರಂಗ.

'ಗೂರ್ಖಾಲ್ಯಾಂಡ್ ಆಂದೋಲನ ಆರ್ಥಿಕ ವಿಮೋಚನೆಗಾಗಿ ಅಲ್ಲ. ರಾಜಕೀಯ ಅಸ್ತಿತ್ವಕ್ಕಾಗಿ. ಗೂರ್ಖಾ ಸಮುದಾಯಕ್ಕೆ ದೊರೆಯಬೇಕಾದ ನ್ಯಾಯಬದ್ಧ ಘನತೆ ಗೌರವಗಳಿಗಾಗಿ' ಎಂಬುದು ಘೀಸಿಂಗನ ಹೇಳಿಕೆ. ತನ್ನ ಹೋರಾಟ ಪಶ್ಚಿಮ ಬಂಗಾಳ ಸರಕಾರದ ವಿರುದ್ಧವಲ್ಲ, ಕೇಂದ್ರದ ವಿರುದ್ಧ ಎನ್ನುತ್ತಾನೆ.

'ಭಾರತೀಯತ್ವ ಪಡೆಯುವ, ಭಾರತದಲ್ಲಿಯೇ ಅಂತರ್ಗತವಾದ ಗೂರ್ಖಾಲ್ಯಾಂಡ್ ನಿಮ್ಮ ಉದ್ದೇಶವಾದಲ್ಲಿ ಸ್ವಾತಂತ್ರ್ಯೋತ್ಸವವನ್ನು ಬಹಿಷ್ಕರಿಸುವಂತೆ ಕರೆ ನೀಡಿದ್ದು ಯಾಕೆ?' ಎನ್ನುವ ಪ್ರಶ್ನೆಗೆ ಘೀಸಿಂಗ್ ಹೀಗೆ ಉತ್ತರಿಸುತ್ತಾನೆ: 'ಭಾರತ ಸರಕಾರಕ್ಕೆ ಅರ್ಥವಾಗುವ ಭಾಷೆ ಎಂದರೆ ಆಂದೋಲನ ಮಾತ್ರ. ನಮ್ಮ ಆಂದೋಲನ ಖಾಲಿಸ್ಥಾನದ ಮಾದರಿಯದಲ್ಲ. ಭಾರತ ರಾಷ್ಟ್ರಧ್ವಜವನ್ನು ಸುಡುವಂತೆ ನಾವು ಕರೆ ಕೊಟ್ಟಿಲ್ಲ. ನಾವು ಯಾವಾಗಲೂ ರಾಷ್ಟ್ರಧ್ವಜಕ್ಕೆ ಗೌರವಿಸುತ್ತೇವೆ. ಸರಕಾರೀ ಸಮಾರಂಭಗಳನ್ನು ಮಾತ್ರ ನಾವು ಬಹಿಷ್ಕರಿಸುವಂತೆ ಕರೆ ಕೊಟ್ಟಿದ್ದೇವಷ್ಟೆ.'

ಖಾಲಿಸ್ಥಾನ ಚಳವಳಿಗಳು ಗೂರ್ಖಾರಾಜ್ಯ ರಚನೆಯ ಕೂಗಿಗೆ ಪ್ರೇರಕ ಅಂಶಗಳು ಎಂಬುದನ್ನು ತಳ್ಳಿ ಹಾಕುವಂತಿಲ್ಲ.

ಪ್ರತ್ಯೇಕ ಗೂರ್ಖಾರಾಜ್ಯ ಸ್ಥಾಪನೆಯನ್ನು ಈಡೇರಿಸಿಕೊಳ್ಳುವ ಮಾರ್ಗವಾಗಿ ಈಗಾಗಲೇ ವಿಮೋಚನಾರಂಗ ಹನ್ನೊಂದು ಅಂಶಗಳ ಕಾರ್ಯಾಚರಣೆಯನ್ನು ಹಮ್ಮಿಕೊಂಡಿದೆ. ಇದೇ ಕಳೆದ ಮೇ ೧೨ ರಿಂದ ೧೪ರ ತನಕ ಇಡೀ ದಾರ್ಜಿಲಿಂಗ್ ಜಿಲ್ಲೆಯಾದ್ಯಂತ ೧೫೦ ಗಂಟೆಗಳ ಸುದೀರ್ಘ ಅವಧಿಯ ಬಂದ್ ಹಾಗೂ ರಸ್ತೆ ತಡೆ ಚಳುವಳಿಗೆ ಕರೆ ಇತ್ತಿದ್ದ ವಿಮೋಚನಾರಂಗ, ಈ ಗುಡ್ಡಗಾಡು ಜಿಲ್ಲೆಯ ಜನಜೀವನವನ್ನು ಸುಮಾರು ಒಂದು ವಾರ ಕಾಲ ಸ್ತಬ್ಧಗೊಳಿಸಿತ್ತಲ್ಲದೆ ಸಾಕಷ್ಟು ಪ್ರಮಾಣದಲ್ಲಿ ಹಾನಿಯನ್ನೂ ಉಂಟುಮಾಡಿತ್ತು. ಪರಿಸ್ಥಿತಿ ತೀರಾ ಬಿಗಡಾಯಿಸಿ ಕುರ್ಸೆಂಗ್‌ನಲ್ಲಿ ಪೋಲೀಸರು ಗೋಳಿಬಾರು ಮಾಡಬೇಕಾಗಿ ಬಂಧು, ಇದರಿಂದ ಐವರು ಸತ್ತರು.

ನೇಪಾಲಿ ಕವಿ ಭಾನುಭಕ್ತರ ಹೆಸರಿನಲ್ಲಿ ನೀಡಲಾಗುತ್ತಿರುವ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭವು ಇದೇ ಜುಲೈ ಹನ್ನೊಂದರಂದು ನಡೆದಿದ್ದು, ರಾಷ್ಟ್ರೀಯ ಗೂರ್ಖಾ ವಿಮೋಚನಾರಂಗ ಈ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪಾಲ್ಗೊಳ್ಳಕೂಡದೆಂದು ಕರೆ ನೀಡಿತ್ತು. ನಾಲ್ವರು ಲೇಖಕರನ್ನುಳಿದು ಹೆಚ್ಚಿನ ನೇಪಾಳಿ ಸಾಹಿತಿಗಳು ಈ ಕರೆಗೆ ಮನ್ನಣೆ ಕೊಟ್ಟಿದ್ದರು.

"ಇದುವರೆಗೆ ನಿಜವಾದ ಅರ್ಥದಲ್ಲಿ ನಮ್ಮ ಕಾರ್ಯಾಚರಣೆ ಆರಂಭವಾಗಿಲ್ಲ. ಇನ್ನು ಮುಂದೆ ನಾವು ನಡೆಸಲಿರುವುದು ನಿಜವಾದ ಕಾರ್ಯಾಚರಣೆ" ಎಂಬುದಾಗಿ ಹೇಳಿರುವ ಸುಭಾಷ್ ಘೀಸಿಂಗ್ ಹನ್ನೊಂದು ಅಂಶಗಳನ್ನೊಳಗೊಂಡ ಕಾರ್ಯಾಚರಣೆಯ ಪರಿಪತ್ರವೊಂದನ್ನು ಬಿಡುಗಡೆಗೊಳಿಸಿದ್ದಾನೆ.

೧೯೮೭ರ ಅಂತ್ಯದೊಳಗೆ ಗೂರ್ಖಾ ರಾಜ್ಯಕ್ಕೆ ಕೇಂದ್ರ ಮಾನ್ಯತೆ ನೀಡಬೇಕು. ಇಲ್ಲವಾದಲ್ಲಿ, ಯೋಜಿತ ಗೂರ್ಖಾರಾಜ್ಯದಲ್ಲಿರುವ ಪಶ್ಚಿಮ ಬಂಗಾಲದ ಸರಕಾರೀ ಅಧಿಕಾರಿ ನೌಕರರನ್ನು ಉಚ್ಚಾಟಿಸಲಾಗುವುದು ಎಂಬುದಾಗಿ ಕೇಂದ್ರಕ್ಕೆ ರಾಷ್ಟ್ರೀಯ ಗೂರ್ಖಾ ವಿಮೋಚನಾರಂಗ ಎಚ್ಚರಿಕೆಯನ್ನು ನೀಡಿದೆ.

ಭಾರತ–ನೇಪಾಳ ದೇಶಗಳ ನಡುವಿನ ೧೯೫೦ರ ಒಡಂಬಡಿಕೆಯ ೭ನೇ ಕಲಮಿನ ಪ್ರತಿಗಳನ್ನು, ದೇಶದಾದ್ಯಂತ ವಾಸಿಸುತ್ತಿರುವ ಗೂರ್ಖಾರು ಇದೇ ಜುಲೈ ೨೭ ರಂದು ಅಪರಾಹ್ನ ೧೨–೩೦ಕ್ಕೆ ಸುಟ್ಟರು. ಇದು ಕಾರ್ಯಾಚರಣೆಯ ಮೊದಲ ಹಂತ.

೧೯೫೦ ರಲ್ಲಿ ನೇಪಾಳ–ಭಾರತ ಸರಕಾರಗಳು ಪರಸ್ಪರ ಮಾಡಿಕೊಂಡಿರುವ ಒಪ್ಪಂದ ಏಳನೆಯ ಕಲಮು ಭಾರತೀಯ ನೇಪಾಳಿಗಳ ಹಿತಾಶಕ್ತಿಗಳಿಗೆ ಕೆಡುಕನ್ನುಂಟುಮಾಡುತ್ತಿದೆ ಎಂಬುದು ಘೀಸಿಂಗ್‌ನ ಅಭಿಮತ.

ಆ ಒಡಂಬಡಿಕೆಯ ಏಳನೆಯ ಕಲಮು ಹೀಗಿದೆ: 'The Governments of India and Nepal agree to grant on a reciprocal basis, to the nationals of one country in the territories of the other the same privileges on the matter of residence, ownership of property, participation on trade and commerce, movement and other privileges of a similar nature.' ಈ ಕಲಮು ಮೂಲತಃ ಭಾರತೀಯ ನೇಪಾಳಿಗಳಿಗೆ, ಅದರಲ್ಲಿಯೂ ೧೯೫೦ರ ತರುವಾಯ ಭಾರತಕ್ಕೆ ಬಂದು ಗಡಿ ಪ್ರದೇಶ ಹಾಗೂ ಇನ್ನಿತರೆಡೆಗಳಲ್ಲಿ ನೆಲೆಸಿರುವ ನೇಪಾಳಿಗಳಿಗೆ ತೊಂದರೆ ಕೊಡುವಂತಹದ್ದಾಗಿದೆ ಎಂಬುದು ಘೀಸಿಂಗ್‌ನ ವಾದ. ಮಾತ್ರವಲ್ಲ, ಈ ಕಲಮು ನೇಪಾಳದ ನೇಪಾಳಿಗಳು ಮತ್ತು ಭಾರತೀಯ ನೇಪಾಳಿಗಳು ಎನ್ನುವ ಭೇದಭಾವಕ್ಕೆ ಆಸ್ಪದ ಕೊಟ್ಟಿದೆ

ಹೇಳುತ್ತಾನೆ ಘೀಸಿಂಗ್. ದಾರ್ಜಿಲಿಂಗ್ ಹಾಗೂ ಸುತ್ತಮುತ್ತ ವಾಸಿಸುತ್ತಿರುವ, ಹುಲ್ಲುಗಾವಲು, ಟೀ ತೋಟ ವ್ಯಾಪಾರ ವಹಿವಾಟುಗಳಲ್ಲಿ ನಿರತರಾಗಿರುವ ನೇಪಾಳಿಗಳ ಬಗ್ಗೆ, ಇತ್ತೀಚೆಗೆ ಮೇಘಾಲಯದಿಂದ ಉಚ್ಚಾಟಿಸಲ್ಪಟ್ಟ ನೇಪಾಳಿಗಳ ಬಗ್ಗೆ ಪಶ್ಚಿಮ ಬಂಗಾಲ ಸರಕಾರ ಮಲತಾಯಿ ಧೋರಣೆ ತೋರುತ್ತಾ ಬಂದಿದೆ ಎನ್ನುತ್ತಾನೆ ಘೀಸಿಂಗ್. ಹಲವು ಸೌಲಭ್ಯಗಳಿಂದ ವಂಚಿತರಾಗಿರುವ ಇವರೆಲ್ಲರ ಸಂಘಟನೆ ಆ ಮೂಲಕ ಗೂರ್ಖಾ ರಾಜ್ಯ ಸ್ಥಾಪನೆ ಈಗ ತುರ್ತಾಗಿ ಆಗಬೇಕಾಗಿರುವ ಕಾರ್ಯ ಎಂಬುದು ಘೀಸಿಂಗ್‌ನ ದೃಢ ನಿಲುವು.

ಸುಭಾಷ್ ಘೀಸಿಂಗ್ ಭಾರತದ ಗೂರ್ಖಾ ಜನರ ಉದ್ಧಾರಕ್ಕಾಗಿ ಪಣತೊಟ್ಟ ಪ್ರವಾದಿ ಎನಿಸಿದ್ದಾನೆ. ಕ್ರಾಂತಿಕಾರೀ ಸ್ವಭಾವದ ಈತ ಕಾದಂಬರಿಕಾರ ಕೂಡ. ಸುಮಾರು ಇಪ್ಪತ್ತು ಕಾದಂಬರಿಗಳನ್ನು ಈತ ಬರೆದಿದ್ದಾನೆ.

ಸುಭಾಷ್ ಘೀಸಿಂಗ್ ತನ್ನ ಬೇಡಿಕೆಗಳ ಪಟ್ಟಿಯನ್ನು ನೇಪಾಳದ ದೊರೆಗೆ ವಿಜ್ಞಾಪನಾ ಪತ್ರ ಸಲ್ಲಿಸಿದ್ದಾನೆ. ಅದೇ ಬಗೆಯ ಮನವಿಯನ್ನು ಅಮೇರಿಕ ಸಂಯುಕ್ತ ಸಂಸ್ಥಾನ, ಸೋವಿಯತ್ ರಶಿಯ, ಬ್ರಿಟನ್, ಫ್ರಾನ್ಸ್, ಚೀನ ದೇಶದ ಸರಕಾರಗಳಿಗೂ, ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿಯವರಿಗೂ ಕಳಿಸಿಕೊಟ್ಟಿದ್ದಾನೆ. ಇದರ ಉದ್ದೇಶವಿಷ್ಟೇ ಈ ವಿಷಯಕ್ಕೆ ರಾಷ್ಟ್ರೀಯ ಸ್ವರೂಪ ಕೊಟ್ಟು 'ಬೃಹತ್ ಗೂರ್ಖಾಲ್ಯಾಂಡ್' ನಿರ್ಮಾಣಕ್ಕೆ ಅನುವಾಗುವುದು. ಬೃಹತ್ ಗೂರ್ಖಾಲ್ಯಾಂಡ್ ಅವನ ಕಲ್ಪನೆಯಲ್ಲಿ ನೇಪಾಳ, ಸಿಕ್ಕಿಂ, ಉತ್ತರಪ್ರದೇಶದ ತರಾಯಿ ಭಾಗ, ಬಿಹಾರದ ಉತ್ತರದ ಕೆಲವು ಪ್ರದೇಶಗಳು, ಅಸ್ಸಾಂನ ಉತ್ತರ ಭಾಗ ಮತ್ತು ಪಶ್ಚಿಮ ಬಂಗಾಳದ ದಾರ್ಜಿಲಿಂಗ್ ಪ್ರದೇಶ.

ಗೂರ್ಖಾಲ್ಯಾಂಡ್ ಆಂದೋಲನಕ್ಕೆ ಕುಮ್ಮಕ್ಕು ಕೊಡುತ್ತಿರುವ ವಿದೇಶೀ ಶಕ್ತಿಗಳ ಬಗ್ಗೆ ಹಲವು ಬಗೆಯ ವಾದಗಳನ್ನು ಮಂಡಿಸಲಾಗುತ್ತಿದೆ. ಭಾರತ ಮತ್ತು ನೇಪಾಳದ ಮಧ್ಯೆ ಒಂದು ಸ್ವತಂತ್ರ 'ಬಫರ್' (ತಡೆ) ರಾಜ್ಯ ಸ್ಥಾಪನೆಯಾಗಬೇಕೆಂಬುದು ಚೀನ ಮತ್ತು ಅಮೇರಿಕದ ಹಂಬಲ. ನೇಪಾಳವೂ ಇದನ್ನು



ಗೂರ್ಖಾಲ್ಯಾಂಡ್ ಧ್ವಜಾರೋಹಣ ದಾರ್ಜಿಲಿಂಗಿನಲ್ಲಿ...

ಬಯಸುತ್ತಿದೆ ಎನ್ನಲಾಗಿದೆ. ಭಾರತದಿಂದ ಉದಾರ ವಿಚಾರಗಳು ನೇಪಾಳಕ್ಕೆ ನುಸುಳುವುದು ಅಲ್ಲಿನ ದೊರೆಗಳಿಗೆ ಇಷ್ಟವಿಲ್ಲವಂತೆ. ಟಿಬೇಟಿನ ಗಡಿ ಪ್ರದೇಶಗಳಲ್ಲಿ ನೇಪಾಳದ ಗೂರ್ಖಾಗಳನ್ನು ಕಾವಲಿಗೆ ನೇಮಿಸಿಕೊಳ್ಳಲು ಚೀನ ಬಹುಕಾಲ ದಿಂದ ವಿಫಲ ಯತ್ನ ನಡೆಸುತ್ತಿದೆ. ಗೂರ್ಖಾ ಲ್ಯಾಂಡ್ ಸ್ಥಾಪನೆಯಾದರೆ ಚೀನದ ಬಯಕೆ ಕೈಗೂಡಿದಂತೆ. ದಾರ್ಜಿಲಿಂಗ್ ಪ್ರಾಂತದಲ್ಲಿ ದಿನೇ ದಿನೆ ಕಮ್ಯುನಿಸ್ಟ್ ಪ್ರಭಾವ ಹೆಚ್ಚುತ್ತಿದೆ. ಇದು ಬ್ರಿಟಿಶ್ ಸರಕಾರಕ್ಕೆ ತಲೆನೋವಿನ ವಿಚಾರ. ಯಾಕೆಂದರೆ, ಪೂರ್ವ ನೇಪಾಳದಿಂದ ಗೂರ್ಖಾರನ್ನು ಬ್ರಿಟಿಶ್ ಸೈನ್ಯಕ್ಕೆ ಸೇರಿಸಿ ಕೊಳ್ಳುವ ವ್ಯವಸ್ಥೆ ಇಷ್ಟು, ದಾರ್ಜಿಲಿಂಗಿನ ಮೂಲಕವಾಗಿ ಕಮ್ಯುನಿಸ್ಟ್ ಸಿದ್ಧಾಂತವು ನೇಪಾಳಕ್ಕೆ ನುಸುಳಿ, ಅಲ್ಲಿಯ ಜನರನ್ನು ಪ್ರಚೋದಿಸುತ್ತಿದೆ ಎಂಬುದು.

ಈ ಚಳುವಳಿಗೆ ವಿದೇಶೀ ಮೂಲಗಳಿಂದ ನೆರವೂ ದೊರೆಯುತ್ತಿದೆ ಎನ್ನಲಾಗಿದೆ. ಆದರೆ, ಅದು ಹಣದ ರೂಪದಲ್ಲಿ ಅಲ್ಲ. ವಸ್ತುಗಳ ರೂಪದಲ್ಲಿ ಬರುತ್ತಿದೆ. ಪಶ್ಚಿಮ ಬಂಗಾಳ ಸರ ಕಾರದ ಗುಡ್ಡಗಾಡು ಪ್ರದೇಶಗಳ ಅಭಿವೃದ್ಧಿ ಸಚಿವ ತಮಂಗ್ ದಾವಲಾಮ ಅವರ ಪ್ರಕಾರ ಬೇರೆ ಯಾವುದೋ ಮೂಲದಿಂದ ಇವರಿಗೆ ಆರ್ಥಿಕ ನೆರವು ದೊರೆಯುತ್ತಿದೆ ಎಂಬುದು ಖಚಿತ. ಆದರೆ ಎಲ್ಲಿಂದ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ.

ಆದರೆ, ಸುಭಾಷ್ ಘೀಸಿಂಗ್ ಇದನ್ನು ಬಲವಾಗಿ ಅಲ್ಲಗಳೆಯುತ್ತಾನೆ: 'ನಾನಿರುವುದು ಎಂಬತ್ತು ರೂಪಾಯಿ ಬಾಡಿಗೆಯ ಕೋಣೆ ಯಲ್ಲಿ. ಈ ಕೋಣೆ ವಿದೇಶೀ ಹಣ ಪಡೆಯುವ ರೂಪದಲ್ಲಿದೆಯೆ? ಮದ್ಯಪಾನ ಮಾಡದ, ಮಾಂಸಾಹಾರ ಸೇವಿಸದ ನನಗೆ ಹೆಚ್ಚು ಹಣದ ಅವಶ್ಯಕತೆ ಇಲ್ಲ. ನನಗೆ ಬೇಕಾದ ಹಣ ನನ್ನ ಕಾದಂಬರಿಗಳ ಮಾರಾಟದಿಂದ ಬರುತ್ತಿದೆ. ಚಳುವಳಿಗೆ ಬೇಕಾಗುವ ಹಣವನ್ನು ಗೂರ್ಖಾ ರಾಷ್ಟ್ರೀಯ ವಿಮೋಚನಾರಂಗದ ಸದಸ್ಯರೇ ದೇಣಿಗೆಯಾಗಿ ನೀಡುತ್ತಾರೆ.'

ಅವಿಭಜಿತ ಕಮ್ಯುನಿಸ್ಟ್ ಪಕ್ಷ ಒಂದೊಮ್ಮೆ ಪಶ್ಚಿಮ ಬಂಗಾಳದ ಗುಡ್ಡಗಾಡು ಪ್ರದೇಶದ ಜನರಿಗಾಗಿ ಪ್ರತ್ಯೇಕ ರಾಜ್ಯ ಸ್ಥಾಪನೆ ಆಗ ಬೇಕೆಂಬ ಠರಾವನ್ನು ಅಂಗೀಕರಿಸಿತ್ತು, ಕಾಂಗ್ರೆಸ್ ಅರವತ್ತರ ದಶಕದಲ್ಲಿ ಇಂಥದೇ ಬೇಡಿಕೆಯನ್ನು ಮುಂದಿಟ್ಟಿತ್ತು. ಈಗ ಅದೇ ತಿರುಗು ಬಾಣ ವಾಗಿದೆ.

ಆಂದೋಲನಕ್ಕೆ ಪ್ರಚೋದನೆ ದೊರೆತದ್ದು ಮೇಘಾಲಯ ಸರಕಾರದ ವರ್ತನೆಯಿಂದಾಗಿ. 'ಮಣ್ಣಿನ ಮಕ್ಕಳ' ಸಿದ್ಧಾಂತವನ್ನು ಬೆಂಬಲಿಸುವ ಅಖಿಲ ಮೇಘಾಲಯ ವಿದ್ಯಾರ್ಥಿ ಸಂಘಟನೆಯ ಪ್ರಚೋದನೆಯಿಂದಾಗಿ ಖಾಸಗಿ ಒಡೆತನದ ಖಾಸಿ ಗುಡ್ಡದ ಕಲ್ಲಿದ್ದಲು ಗಣಿಗಳಲ್ಲಿ ಕೆಲಸ ಮಾಡು ತ್ತಿದ್ದ ನೇಪಾಳೀ ಕೆಲಸಗಾರರನ್ನು ರಾಜ್ಯದಿಂದ ಹೊರದಬ್ಬಲಾಯಿತು. ಸರಕಾರೀ ಅಧಿಕಾರಿಗಳು ಪೋಲೀಸರ ನೆರವಿನಿಂದ ಕೆಲಸಗಾರರನ್ನು ಟ್ರಕ್ಕು ಗಳಲ್ಲಿ ಬಲಾತ್ಕಾರವಾಗಿ ತುಂಬಿಕೊಂಡು ಅಸ್ಸಾಂ ರಾಜ್ಯಕ್ಕೆ ತಂದುಬಿಟ್ಟರು. ಒಂದು ಅಂದಾಜಿನ ಪ್ರಕಾರ ಹೀಗೆ ಹೊರದಬ್ಬಲ್ಪಟ್ಟವರ ಸಂಖ್ಯೆ ೫,೦೦೦. ಇನ್ನೊಂದು ಹೇಳಿಕೆಯಂತೆ ಈ ಸಂಖ್ಯೆ ೭,೦೦೦. ಹೀಗೆ ಬಂದ ಗೂರ್ಖಾಗಳು ನಿಲ್ಲಲು ನೆಲೆಯಿಲ್ಲದೆ, ಉಣ್ಣಲು ಅನ್ನವಿಲ್ಲದೆ. ಕೈಯಲ್ಲಿ ಕಾಸಿಲ್ಲದೆ ಗೌಹಾತಿಯ ಫುಟ್‌ಪಾತ್‌ಗಳಲ್ಲಿ ಅಲೆ ದರು. 'ಅಸ್ಸಾಂ ಇರುವುದು ಅಸ್ಸಾಮಿಗಳಿಗಾಗಿ' ಎನ್ನುವ ನಿಲುವಿನಿಂದಾಗಿ ಈ ಗೂರ್ಖಾ ಮಂದಿ ಅಲ್ಲಿಂದಲೂ ಹೊರಗೆ ದಬ್ಬಲ್ಪಟ್ಟರು. ಇವರು ನಿಧಾನವಾಗಿ ಪಶ್ಚಿಮ ಬಂಗಾಳದ ಗಡಿಯೊಳಗೆ ತೂರಿಕೊಳ್ಳತೊಡಗಿದರು. ಆದರೆ ಮೇಘಾಲಯ ಸರಕಾರ ಇದನ್ನು ನಿರಾಕರಿಸುತ್ತದೆ. ಅದರ ಹೇಳಿಕೆ ಇದು: ಅನಧಿಕೃತವಾಗಿ ಮೇಘಾಲಯಕ್ಕೆ ಪ್ರವೇಶಿಸಿದ್ದ ೧,೯೫೬ ಮಂದಿ ನೇಪಾಳಿಗಳನ್ನೂ, ೫೮ ಮಂದಿ ಬಾಂಗ್ಲಾ ಜನರನ್ನೂ ರಾಜ್ಯದಿಂದ ಹೊರಗೆ ಕಳುಹಿಸಲಾಗಿದೆ. ಖಾಸಿ ಕಲ್ಲಿದ್ದಲು

ಗಣಿಗಳಲ್ಲಿ ಕೆಲಸ ಮಾಡುತ್ತಿದ್ದ ೫,೦೦೦ ಮಂದಿ ತಾವಾಗಿಯೇ ಮೇಘಾಲಯ ತೊರೆದು ಹೋಗಲು ಇಚ್ಛಿಸಿದರು. ಅಂಥವರನ್ನು ಹೊರಗೆ ಕಳುಹಿಸಲಾಯಿತು. 'ಯಾವ ನೇಪಾಲಿ ಮೇಘಾಲಯ ತೊರೆಯಲು ಬಯಸಿದ್ದನೋ ಅಂಥವನನ್ನು ರಾಜ್ಯದಿಂದ ಹೊರಕ್ಕೆ ಕಳುಹಿಸಲು ಸೂಕ್ತ ವ್ಯವಸ್ಥೆ ಮಾಡಲಾಗಿತ್ತು.' ಎನ್ನುತ್ತಾರೆ ಮೇಘಾಲಯದ ಸರಕಾರೀ ವಕ್ತಾರರೊಬ್ಬರು.

ಸತ್ಯ ಸಂಗತಿ ಎಂದರೆ ಖಾಸಿ ಗುಡ್ಡದ ಕಲ್ಲಿದ್ದಲು ಗಣಿಗಳಿಂದ ಓಡಿಸಲ್ಪಟ್ಟ ಕೆಲಸಗಾರರು ಭಾರತೀಯ ಪ್ರಜೆಗಳಲ್ಲ, ನೇಪಾಳಿಗಳು. ಅದ್ದರಿಂದ ಇವರ ಪುನರ್ವಸತಿಯ ಜವಾಬ್ದಾರಿ ಭಾರತ ಸರಕಾರದ ಮೇಲಾಗಲೀ, ಪಶ್ಚಿಮ ಬಂಗಾಳ ಸರಕಾರದ ಮೇಲಾಗಲೀ ಇಲ್ಲ. ಆದರೆ ಈ ಸಂಗತಿ ಗೂರ್ಖಾ ರಾಷ್ಟ್ರೀಯ ವಿಮೋಚನಾ ರಂಗಕ್ಕೆ ಮುಖ್ಯವಾಗಿಲ್ಲ. ಅದಕ್ಕೆ ಒಂದು ನೆವ ಬೇಕಾಗಿತ್ತಷ್ಟೆ. ಮೇಘಾಲಯದಿಂದ ನೇಪಾಳಿಗಳನ್ನು ಹೊರದೂಡಿ, ಅವರು ಅತಂತ್ರರಾದದ್ದೇ ಒಂದು ನೆವವಾಯಿತು. ಸಮಯ ಕಾಯುತ್ತಿದ್ದ ಘೀಸಿಂಗ್ ಇದನ್ನೇ ಒಂದು ಪ್ರಮುಖ ವಿಷಯವನ್ನಾಗಿಸಿಕೊಂಡ.

ಸಮಸ್ಯೆ ಇಷ್ಟು ಗಂಭೀರವಾಗಲು ಪಶ್ಚಿಮ ಬಂಗಾಳ ಸರಕಾರವೇ ಕಾರಣ ಎನ್ನುವ ಆಪಾದನೆ ಕೇಳಿ ಬರುತ್ತಿದೆ. ಸದ್ಯದ ಸ್ಥಿತಿಗೆ ಕಾರಣವಾದ ಅಂಶಗಳ ಬಗ್ಗೆ ಅದು ಗಾಢವಾದ ಅಧ್ಯಯನ ನಡೆಸಿಲ್ಲ. ಬಂಗಾಲಿ ಬಾಬುಗಳು ಗೂರ್ಖಾರನ್ನು ಶೋಷಿಸುತ್ತಿರುವುದರ ವಿರುದ್ಧ ಸರಕಾರ ಸೂಕ್ತ ಕ್ರಮ ಕೈಗೊಂಡಿಲ್ಲ. ದಾರ್ಜಿಲಿಂಗಿನ ಅಭಿವೃದ್ಧಿಗೆ ಸರಕಾರ ಸರಿಯಾದ ಕ್ರಮ ತೆಗೆದುಕೊಂಡಿಲ್ಲ. ಗೂರ್ಖಾ ಜನರಿಗೆ ಉದ್ಯೋಗಾವಕಾಶಗಳು ಕಡಿಮೆ... ಇವು ರಾಷ್ಟ್ರೀಯ ವಾದಿಗಳ ಹೇಳಿಕೆಗಳು.

ಕೇಂದ್ರದ ಯೋಜನಾ ಖಾತೆಯ ರಾಜ್ಯ ಸಚಿವ ಅಜಿತ್ ಪಂಜಾ 'ಮಾರ್ಕ್ಸಿಸ್ಟ್ ಸರಕಾರ ದಾರ್ಜಿಲಿಂಗಿನ ಅಭಿವೃದ್ಧಿಯ ಸಲುವಾಗಿ ಸಾಕಷ್ಟು ಹಣ ಖರ್ಚು ಮಾಡುತ್ತಿಲ್ಲ' ಎಂದು ನೇರವಾಗಿ ಆಪಾದಿಸಿದ್ದಾರೆ. ಈ ಆಪಾದನೆಗೆ ಪಶ್ಚಿಮ ಬಂಗಾಳದ ಮುಖ್ಯ ಮಂತ್ರಿ 'ರಾಜ್ಯದ ಬೇರೆ ಭಾಗಗಳಿಗೆ ನೀಡುತ್ತಿರುವ ಹಣದ ದುಪ್ಪಟ್ಟು ಪ್ರಮಾಣದಲ್ಲಿ ದಾರ್ಜಿಲಿಂಗ್‌ನ ಅಭಿವೃದ್ಧಿಗಾಗಿ ನೀಡಲಾಗುತ್ತಿದೆ' ಎನ್ನುತ್ತಾರೆ. ದಾರ್ಜಲಿಂಗಿನ ಜಿಲ್ಲಾ ಕಾಂಗ್ರೆಸ್‌ನ ಮುಖ್ಯಸ್ಥ ದವಾ ನೊರ್ಬುಲಾ 'ದಾರ್ಜಿಲಿಂಗಿಗೆ ಕೇಂದ್ರಾಡಳಿತ ಪ್ರದೇಶದ ಸ್ಥಾನಮಾನಗಳು ಲಭ್ಯವಾಗಬೇಕು' ಎನ್ನುವ ನಿಲುವನ್ನು ಹೊಂದಿದ್ದಾರೆ. ಈ ನಿಲುವಿನಿಂದಾಗಿ 'ಕಾಂಗ್ರೆಸ್ (ಐ) ಪ್ರತ್ಯೇಕತಾವಾದಿಗಳಿಗೆ ಅನುಕೂಲಕರವಾಗಿ ವರ್ತಿಸುತ್ತಿದೆ' ಎಂದು ಮಾರ್ಕ್ಸಿಸ್ಟರು ದೂರಲು ಅವಕಾಶವಾಗಿದೆ. ಕಾಂಗ್ರೆಸ್‌ನ ಪಿ. ಆರ್. ದಾಸ್ ಮುನ್ಷಿ ಇದನ್ನು ಬಲವಾಗಿ ಅಲ್ಲಗಳೆಯುತ್ತಾರೆ: 'ಈ ಪ್ರದೇಶವನ್ನು ಕಡೆಗಣಿಸಿದ್ದು ಎಡ ಪಂಥೀಯ ಸರಕಾರ. ಅದರಿಂದ ಪರಿಸ್ಥಿತಿ ವಿರುದ್ಧವಾಗಿದೆ. ಅದನ್ನು ಮುಚ್ಚಿಹಾಕಲು ನಮ್ಮ ಮೇಲೆ ಗೂಬೆ ಕೂರಿಸುವ ಪ್ರಯತ್ನ ಅವರದು' ಎನ್ನುವ ಪ್ರತ್ಯಾರೋಪ ದಾಸ್ ಮುನ್ಷಿಯವರದು.

ಲೋಕಸಭೆಯಲ್ಲಿ ದಾರ್ಜಿಲಿಂಗನ್ನು ಪ್ರತಿನಿಧಿಸುತ್ತಿರುವ ಸಿ. ಪಿ. ಐ. (ಎಂ)ನ ಆನಂದ ಪಾಠಕ್ ಹೇಳುತ್ತಾರೆ: 'ಕಳೆದ ಕೆಲವು ವರುಷಗಳಿಂದ ನೇಪಾಲಿಗಳ ಸಮಸ್ಯೆ ಕುರಿತು ಲೋಕಸಭೆಯಲ್ಲಿ ಒದರಾಡುತ್ತಲೇ ಇದ್ದೇನೆ. ಆದರೆ, ಯಾರೂ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಈಗ ಪರಿಸ್ಥಿತಿ ಬಿಗಡಾಯಿಸಿದಮೇಲೆ ಎಲ್ಲರೂ ಮಾತನಾಡುತ್ತಿದ್ದಾರೆ'.

ಗೂರ್ಖಾ ರಾಷ್ಟ್ರೀಯ ವಿಮೋಚನಾರಂಗದ ಆಂದೋಲನವನ್ನು ಯಾರು ಮತ್ತು ಹೇಗೆ ಎದುರಿಸಬೇಕು ಎಂಬುದರ ಬಗ್ಗೆ ಪಶ್ಚಿಮ ಬಂಗಾಳ ಹಾಗೂ ಕೇಂದ್ರ ಸರಕಾರದ ನಡುವೆ ಭಿನ್ನಾಭಿಪ್ರಾಯವಿದೆ. 'ಗೂರ್ಖಾಲ್ಯಾಂಡ್ ಪ್ರಶ್ನೆಯನ್ನು ಬಗೆಹರಿಸುವ ಹೊಣೆ ಪಶ್ಚಿಮ ಬಂಗಾಲದ್ದು. ರಾಜ್ಯ ಸರಕಾರವು ಸಂವಿಧಾನದ

ಚೌಕಟ್ಟಿನಲ್ಲಿ ಈ ಸಮಸ್ಯೆಗೊಂದು ಪರಿಹಾರ ಕಂಡುಹಿಡಿಯಬೇಕು. ರಾಜ್ಯವನ್ನು ಇನ್ನಷ್ಟು ವಿಭಜಿಸುವುದನ್ನು ಕೇಂದ್ರವು ವಿರೋಧಿಸುತ್ತದೆ. ದೇಶದ ಏಕತೆ ಮತ್ತು ಅಖಂಡತೆಗೆ ಪ್ರಥಮ ಪ್ರಾಶಸ್ತ್ಯ. ರಾಜ್ಯ ಸರಕಾರವು ಗುಡ್ಡಗಾಡು ಪ್ರದೇಶಗಳನ್ನು ನಿರ್ಲಕ್ಷಿಸಿದೆ. ಈ ವಲಯದ ಜನರ ಆಶೋತ್ತರಗಳನ್ನು ದಮನಗೊಳಿಸುತ್ತಾ ಬರಲಾಗಿದೆ'. ಸೆಪ್ಟಂಬರ್ ತಿಂಗಳಲ್ಲಿ ಪಶ್ಚಿಮ ಬಂಗಾಳದಲ್ಲಿ ಮೂರು ದಿನಗಳ ತಮ್ಮ ಪ್ರವಾಸದ ಅವಧಿಯಲ್ಲಿ ಪ್ರಧಾನಿ ಶ್ರೀ ರಾಜೀವ ಗಾಂಧಿ ಹಾಲ್ದಿಯಾ ಮತ್ತು ದುರ್ಗಾಪುರದ ಬಹಿರಂಗ ಸಭೆಗಳಲ್ಲಿ ಈ ಬಗೆಯ ಆಪಾದನೆ ಮಾಡಿದ್ದಾರೆ.

ಪಶ್ಚಿಮ ಬಂಗಾಲ ಮುಖ್ಯಮಂತ್ರಿ ಶ್ರೀ ಜ್ಯೋತಿ ಬಸು ಈ ಆರೋಪವನ್ನು ಅಲ್ಲಗಳೆದು 'ದಾರ್ಜಿಲಿಂಗಿನ ಅಭಿವೃದ್ಧಿಗೆ ಕೈಗೊಂಡಿರುವ ಪ್ರತಿಯೊಂದು ಯೋಜನೆಯ ವಿವರಗಳನ್ನು ಪ್ರಧಾನಿಯವರಿಗೂ ಮತ್ತು ಕೇಂದ್ರ ಗೃಹ ಸಚಿವ ಶ್ರೀ ಬೂಟಾಸಿಂಗ್ ಅವರಿಗೂ ನೀಡಲಾಗಿದೆ' ಎಂದಿದ್ದಾರೆ.

'ಸಂವಿಧಾನದ ಮೂರನೆಯ ವಿಧಿಯ ಅನ್ವಯ ಪ್ರತ್ಯೇಕ ಗೂರ್ಖಾಲ್ಯಾಂಡ್ ಸ್ಥಾಪಿಸಬೇಕು ಎಂಬುದು ನಮ್ಮ ಒತ್ತಾಯ. ಪಶ್ಚಿಮ ಬಂಗಾಲ ಸರಕಾರ ತೀರಾ ಕಮ್ಯುನಲ್ ಧೋರಣೆಯಲ್ಲಿ ವರ್ತಿಸುತ್ತಿದೆ. ಯಾವ ಪಕ್ಷ ಸ್ವಾತಂತ್ರ್ಯ ಪೂರ್ವದಲ್ಲಿ ನೇಪಾಳ, ಸಿಕ್ಕಿಂ ಮತ್ತು ದಾರ್ಜಿಲಿಂಗ್‌ಗಳನ್ನೊಳಗೊಂಡಂತೆ ಮಹಾಗೂರ್ಖಾಲ್ಯಾಂಡ್‌ಗಾಗಿ ಒತ್ತಾಯಿಸಿತ್ತೋ ಅದೇ ಪಕ್ಷ ಈಗ, ಅದೇ ಉದ್ದೇಶದ ಚಳುವಳಿಕೆಯನ್ನು ಹತ್ತಿಕ್ಕುತ್ತಿರುವುದು ವಿರೋಧಾಭಾಸ' ಎಂದು ಕಟುವಾಗಿ ಟೀಕಿಸುತ್ತಾನೆ ಘೀಸಿಂಗ್.

ಅಗಸ್ಟ್ ಹದಿನೈದರಂದು ನಡೆದ ಸ್ವಾತಂತ್ರ್ಯೋತ್ಸವವನ್ನು ರಂಗ ಬಹಿಷ್ಕರಿಸಲು ಕರೆ ನೀಡಿತ್ತು. ಅಗಸ್ಟ್ ೨೩ರಂದು ದಾರ್ಜಿಲಿಂಗ್ ಜಿಲ್ಲೆಯಾದ್ಯಂತ ರಸ್ತೆಗಳಲ್ಲಿ ವಾಹನ ಸಂಚಾರಕ್ಕೆ ತಡೆಯೊಡ್ಡಿ ಪೋಲೀಸರು ಗೋಳೀಬಾರು ಮಾಡಬೇಕಾಯಿತು. ಒಂದು ವಾರ ಪರ್ಯಂತ ಇಡೀ ಜಿಲ್ಲೆಯ ಜನಜೀವನ ಅಸ್ತವ್ಯಸ್ತವಾಗಿತ್ತು.

ಯಾವುದೇ ಪೂರ್ವ ಸೂಚನೆ ನೀಡದೆ ಮತ್ತೊಮ್ಮೆ ೧೫೦ ಗಂಟೆಗಳ ದೀರ್ಘಾವಧಿ ಬಂದ್ ನಡೆಸಲಾಗುವುದೆಂದು ವಿಮೋಚನಾ ರಂಗದ ಧುರೀಣ ಘೀಸಿಂಗ್ ಘೋಷಿಸಿದ್ದಾನೆ. ಸರಕಾರಕ್ಕೆ ಸಲ್ಲಿಸಬೇಕಾದ ತೆರಿಗೆ ಹಾಗೂ ಬ್ಯಾಂಕುಗಳಿಗೆ ಪಾವತಿ ಮಾಡಬೇಕಾಗಿರುವ ಸಾಲ ಮತ್ತು ಬಡ್ಡಿಗಳನ್ನೂ ಇನ್ನು ಮುಂದೆ ಗೂರ್ಖಾರು ನಿಲ್ಲಿಸಬೇಕೆಂದೂ ಘೀಸಿಂಗ್ ಕರೆ ಕೊಟ್ಟಿದ್ದಾನೆ.

''ನಾವು ಭಾರತೀಯರು. ಸಂಸ್ಥಾಪಿಸಲು ಯೋಜಿಸಿರುವ ಗೂರ್ಖಾಸ್ಥಾನ ಭಾರತ ದೇಶದಲ್ಲಿ ಭಾರತಾಂತರ್ಗತವಾಗಿಯೇ ಇರುತ್ತದೆ. ಗೂರ್ಖಾ ರಾಜ್ಯ ರಚನೆ ಎಂಬ ಬೇಡಿಕೆ, ಭಾರತ ಗಣರಾಜ್ಯದಿಂದ ಸಿಡಿದು ಪ್ರತ್ಯೇಕ ರಾಜ್ಯ ರಚನೆ ಎಂದರ್ಥವಲ್ಲ. ಭಾರತೀಯ ಭಾವ ಪುಷ್ಟೀಕರಣ ಹಾಗೂ ಹಕ್ಕುಗಳ ಅನುಭವಿಸುವಿಕೆಗೆ ಗೂರ್ಖಾ ರಾಜ್ಯ ರಚನೆ ಅಗತ್ಯ" ಎಂಬುದು ಘೀಸಿಂಗ್‌ನ ಹೇಳಿಕೆ. ಗೂರ್ಖಾ ನ್ಯಾಶನಲ್ ಯೂತ್ ಫ್ರಂಟ್, ಗೂರ್ಖಾ ನ್ಯಾಶನಲ್ ವುಮನ್ಸ್ ಆರ್ಗನೈಸೇಶನ್ ಮತ್ತು ನ್ಯಾಶನಲ್ ಲೇಬರ್ ವಿಂಗ್‌ಗಳು ಈಗಾಗಲೇ ತಮ್ಮ ಬೆಂಬಲವನ್ನು ಗೂರ್ಖಾ ನ್ಯಾಶನಲ್ ಲಿಬರೇಶನ್ ಫ್ರಂಟಿಗೆ ಸಾರಿವೆ.

ಗೂರ್ಖಾರ ಸ್ವಾಭಿಮಾನ, ಆತ್ಮಗೌರವಗಳನ್ನು ಸಂಘಟನಾ ಹಾಗೂ ಪ್ರಚೋದನಾ ಅಸ್ತ್ರಗಳನ್ನಾಗಿ ಬಳಸಿಕೊಳ್ಳುತ್ತಿರುವ ಸುಭಾಸ್ ಘೀಸಿಂಗ್ 'ಗೂರ್ಖಾ ರಾಜ್ಯ' ಪರಿಕಲ್ಪನೆಯನ್ನು ಆ ಜನಾಂಗದವರ ಮನಸ್ಸಿನಲ್ಲಿ ಆಳವಾಗಿ ಮೂಡಿಸುತ್ತಿದ್ದಾನೆ. ಪಶ್ಚಿಮ ಬಂಗಾಲದಲ್ಲಿ ನೇಪಾಲಿ ಭಾಷೆಯನ್ನಾಡುವ ಸಂಖ್ಯೆ ಕೇವಲ ಶೇಕಡಾ ಒಂದು. ಆದರೆ, ಹಿಂದಿ, ಗುರುಂಗಕಾರ, ಮೂಗಾರಕಾರ ಮುಂತಾದ ಭಾಷೆಗಳ

ವಾಸಿಸುವ ಗೂರ್ಖಾರು ಅಧಿಕ ಸಂಖ್ಯೆಯಲ್ಲಿ ದ್ದಾರೆ.

ಧೈರ್ಯಕ್ಕೆ ಇನ್ನೊಂದು ಹೆಸರು ಗೂರ್ಖಾ. 'ಕಾಫರ್‌ಹುನು ಬಾಂಧ ಮಾರ್‍ನು ನಿಕೋ'–ಹೇಡಿಯಾಗಿರುವುದಕ್ಕಿಂತ ಸಾಯುವುದೇ ಮೇಲು–ಎಂಬುದು ಗೂರ್ಖಾರ ಆದರ್ಶ. ಈ ಆದರ್ಶ ಪಾಲನೆಯ ಕಾರಣದಿಂದಾಗಿಯೇ ಗೂರ್ಖಾರು ಜಗದ ಜನತೆಯ ಗೌರವಾಭಿಮಾನಗಳಿಗೂ ಭಾರತೀಯರ ಪ್ರೀತ್ಯಾದರಗಳಿಗೂ ಪಾತ್ರರಾಗಿದ್ದಾರೆ. ಈ ಧ್ಯೇಯ ವಾಕ್ಯವನ್ನೇ ಆಧರಿಸಿ ಘೀಸಿಂಗ್ ಗೂರ್ಖಾರ ಸ್ವಾಭಿಮಾನವನ್ನು ಕೆಣಕಿದ್ದಾನೆ. ಈ ಕಿಚ್ಚನ್ನು ಕಿಚ್ಚಾಗಿ ಪ ರ್ತಿಸುತ್ತಿದ್ದಾನೆ.

ನೇಪಾಳದಲ್ಲಿ ಗೂರ್ಖಾ ಹೆಸರಿನ ಸಣ್ಣ ಗ್ರಾಮವೊಂದಿದೆ. ಇದು ಹಿಂದೊಮ್ಮೆ ಸಣ್ಣ ರಾಜ್ಯವಾಗಿತ್ತು. ೧೩೦೩ ರಲ್ಲಿ ಅಲ್ಲಾವುದ್ದೀನ ಖಿಲ್ಜಿ ಚಿತ್ತೂರನ್ನು ಆಕ್ರಮಿಸಿದಾಗ, ಅಲ್ಲಿಯ ರಜಪೂತ ದೊರೆ ತನ್ನ ತಾಯ್ನಾಡನ್ನು ತೊರೆದು ಸಪ್ತಗಂಡಕಿ ಪ್ರದೇಶಕ್ಕೆ ತನ್ನ ಅನುಯಾಯಿಗಳ ಸಹಿತ ಬಂದು ನೆಲೆಸಿದನೆಂದೂ ಈ ಪ್ರದೇಶದ ಮೂಲ ನಿವಾಸಿಗಳಾದ ಮೊಗಾರ್ ಗುರುಂಗ ಕುಲದವರನ್ನು 'ಗೂರ್ಖಾರು' ಎಂದು ಕರೆದನೆಂದೂ ಇತಿಹಾಸ ಹೇಳುತ್ತದೆ. ಮೂಲತಃ ಬೌದ್ಧ ಧರ್ಮೀಯರಾಗಿದ್ದ ಇವರನ್ನು ಮುಂದೆ ನಾಲ್ಕು ಶತಮಾನಗಳ ಕಾಲ ಹಿಂದೂ ಧರ್ಮಕ್ಕೆ ಪರಿವರ್ತಿಸುವ ಕಾರ್ಯ ಅವ್ಯಾಹತವಾಗಿ ಸಾಗಿತು. ಕ್ರಮೇಣ ಹಿಂದೂ ಧರ್ಮ ಪ್ರಾಚೀನ ಕಾಲದಿಂದಲೂ ಇಲ್ಲಿ ನೆಲೆನಿಂತಿತ್ತು ಎನ್ನುವಷ್ಟರ ಮಟ್ಟಿಗೆ ತನ್ನ ಪ್ರಭಾವವನ್ನು ಬೆಳೆಸಿಕೊಂಡಿತು.

ಹದಿನಾರನೆಯ ಶತಮಾನದಲ್ಲಿ ದ್ರಾಬ್ಯಸಿಂಹ ಗೂರ್ಖಾರ ಮೇಲೆ ವಿಜಯ ಸಾಧಿಸಿದ. ಈ ವಂಶದ ಪೃಥ್ವಿನಾರಾಯಣ ಸಿಂಹ ಗೂರ್ಖಾರ ಪಾಲಿಗೆ ಧ್ರುವತಾರೆಯಾದ. ಗೂರ್ಖಾರ ಸ್ಥಾನ–ಮಾನಗಳ ಹೆಚ್ಚಳಕ್ಕೆ ಈತ ಕಾರಣ ಪುರುಷ






ಎನ್ನಿಸಿದ. ೧೮೧೪ ರಿಂದ ೧೮೧೬ರ ವರೆಗೆ ಗೂರ್ಖಾರಿಗೂ ಬ್ರಿಟಿಶ್‌ರಿಗೂ ಯುದ್ಧ ನಡೆಯಿತು. ಆರಂಭದಲ್ಲಿ ಗೂರ್ಖಾರ ನಾಯಕನಾಗಿದ್ದವನು ಬಲ ಭದ್ರಸಿಂಗ್ ಬ್ರಿಟಿಶರ ನಾಯಕ ಗಿಲೆಸ್ಪೀ. ೧೮೧೪ರ ಮೇ ನಲ್ಲಿ ಗೂರ್ಖಾರು ಬುತ್ವಾಲ್‌ನಲ್ಲಿ ಬ್ರಿಟಿಶ್ ಮೂರು ಪೋಲೀಸ್ ಠಾಣೆಗಳ ಮೇಲೆ ಆಕ್ರಮಣ ನಡೆಸಿದರು. ಭಾರತದ ಗವರ್ನರ್ ಜನರಲ್ ಲಾರ್ಡ್ ಹೇಸ್ಟಿಂಗ್ಸ್ ಗೂರ್ಖರ ಮೇಲೆ ಯುದ್ಧ ಘೋಷಿಸಿದ. ಮೇಜರ್ ಜನರಲ್ ಮಾಲೆ ಮತ್ತು ಜಾನ್ ಸುಲ್ಲಿವನ್ ವುಡ್‌ರ ನೇತೃತ್ವದಲ್ಲಿ ಬ್ರಿಟಿಶ್ ಸೇನೆ ಯುದ್ಧ ಮಾಡಿತಾದರೂ, ನಾಲ್ಕು ಕಡೆಗಳಲ್ಲಿ ಸೋಲನ್ನನುಭವಿಸಿತು. ಗಿಲೆಸ್ಪೀ ನಾಲ್ಕು ಸಾವಿರ ಸೈನಿಕರೊಂದಿಗೆ ಇಪ್ಪತ್ತು ಗನ್ನುಗಳ ಸಹಿತ ಕಲಂಗ ಎನ್ನುವ ಪರ್ವತ ಕೋಟೆಯನ್ನು ಮುತ್ತಿದ. ಆದರೆ, ಕೇವಲ ಆರುನೂರು ಮಂದಿ ಗೂರ್ಖಾರ ಎದುರು ಗಿಲೆಸ್ಪೀನ ಆಟ ಸಾಗದೆ ಹೋಯಿತು. ಈ ಯುದ್ಧದಲ್ಲಿ ಆತ ಪ್ರಾಣ ತೆತ್ತ. ಗೂರ್ಖಾರ ಸಾಹಸಕ್ಕೆ ಇದೊಂದು ಐತಿಹಾಸಿಕ ಸಾಕ್ಷ್ಯ.

ಸೋಲಿನ ಅವಮಾನವನ್ನೂ, ಗಿಲೆಸ್ಪೀಯ ಸಾವಿನ ಸೇಡನ್ನೂ ತೀರಿಸಿಕೊಳ್ಳಲು ಬ್ರಿಟಿಶ್‌ರು ಪುನಃ ೧೮೧೬ರ ಫೆಬ್ರುವರಿ ೨೮ರಂದು ಜನರಲ್ ಆಕ್ಟರ್ ಲೋನಿಯ ನೇತೃತ್ವದಲ್ಲಿ ಗೂರ್ಖಾರನ್ನು ಎದುರಿಸಿದರು. ಪುಕ್ವನ್‌ಪುರದ ಬಳಿ ನಡೆದ ಯುದ್ಧದಲ್ಲಿ ಗೂರ್ಖಾರು ಸೋತರು. ಗೂರ್ಖಾರ ನಾಯಕ ಅಮರಸಿಂಗ್ ಅಳಿದುಳಿದ ಇನ್ನೂರು ಮಂದಿ ಗೂರ್ಖಾರೊಂದಿಗೆ ಬ್ರಿಟಿಶ್‌ರೊಡನೆ ಒಪ್ಪಂದ ಮಾಡಿಕೊಂಡ. ಬ್ರಿಟಿಶ್‌ರ ಪರವಾಗಿ ಹೋರಾಡಲು ಗೂರ್ಖಾರು ಸಿದ್ಧರಾದರು. ಪರಿಣಾಮವಾಗಿ ಡೆಹರಾಡೂನ್, ಆಲ್ಮೋರಾ, ಗೋರಖ್‌ಪುರಗಳಲ್ಲಿ ಬ್ರಿಟಿಶ್-ಗೂರ್ಖಾ ಸೇನಾ ಠಾಣೆಗಳು ಸ್ಥಾಪಿಸಲ್ಪಟ್ಟವು.

೧೮೫೭ರಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮ ನಡೆದಾಗ, ಮೊದಲೇ ತಮ್ಮ ಸ್ವಾತಂತ್ರ್ಯ ಕಳೆದುಕೊಂಡಿದ್ದ ಗೂರ್ಖಾರು ಬ್ರಿಟಿಶ್‌ರ ಪರವಾಗಿ ಕಾರ್ಯ ನಿರ್ವಹಿಸಿದ್ದರು. ಅದರಲ್ಲಿ ಪಾಲ್ಗೊಂಡಿದ್ದ ಗೂರ್ಖಾ ಸೇನಾ ತುಕಡಿಯನ್ನು 'ಸಿಮೂರ್ರ್ ಬೆಟಾಲಿಯನ್' ಎಂಬುದಾಗಿ ಕರೆಯರಾಗಿತ್ತು. ಆ ಸಂಗ್ರಾಮದಲ್ಲಿ ತೋರಿದ ಶೌರ್ಯಕ್ಕಾಗಿ ಬ್ರಿಟನ್ನಿನ ರಾಣಿ ಗೂರ್ಖಾರಿಗೆ ಬಂಗಾರದ ಹಿಡಿಕೆಯ ದೊಣ್ಣೆಯನ್ನು ಬಹುಮಾನವಾಗಿ ನೀಡಿದ್ದಳು! ಆ ಸಂಗ್ರಾಮದ ತರುವಾಯ ಬ್ರಿಟಿಶ್ ಸೇನೆಯಲ್ಲಿ ನಾಲ್ಕು ಮತ್ತು ಐದನೆಯ ಗೂರ್ಖಾ ರೈಫಲ್ ತಲೆ ಎತ್ತಿತು.

ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಯಲ್ಲಿ ಗೂರ್ಖಾರು ಸಾಗರದಾಚೆಯ ದೇಶಗಳಲ್ಲಿ ಬ್ರಿಟಿಶ್‌ರ ಪರವಾಗಿ ಸೇವೆ ಸಲ್ಲಿಸಲು ನಿಯುಕ್ತರಾದರು. ಮಲಯಾ, ಬರ್ಮಾ ಮತ್ತು ಸೈಪ್ರಸ್‌ಗಳಲ್ಲಿ ಬ್ರಿಟಿಶರ ಪರವಾಗಿ ತಮ್ಮ ಸಾಹಸವನ್ನು ಮೆರೆದರು.

ಒಂದನೆಯ ಮಹಾಯುದ್ಧದಲ್ಲಿ ೧೦,೦೦೦ ಗೂರ್ಖಾ ಸೈನಿಕರು ಬ್ರಿಟಿಶ್ ಸೇನೆಯಲ್ಲಿ ಸೇವೆ ಸಲ್ಲಿಸಿದ್ದರು. ಆಗ ಇದ್ದ ಗೂರ್ಖಾ ದಂಡುಗಳ ಒಟ್ಟು ಸಂಖ್ಯೆ ಹತ್ತು. ಪ್ರತಿಯೊಂದು ದಂಡಿನಲ್ಲೂ ಎರಡೆರಡು ಕಾಲ್ದಳ. ಇವುಗಳ ಪ್ರಮುಖ ನೆಲೆ–ಡೆಹರಾಡೂನ್, ಆಲ್ಮೋರಾ, ಬಾಕ್ಲೊ, ಶಿಲ್ಲಾಂಗ್, ಕ್ವೆಟ್ಟಾ ಮತ್ತು ಧರ್ಮ ಶಾಲಾ. ನೇಪಾಳದ ಗೂರ್ಖಾ ದೊರೆ ಮಹಾರಾಜಾ ಜಂಗ್ ಬಹಾದ್ದೂರ್ ರಾಣಾ ತನ್ನ ಪೂರ್ಣ ಸಹಾಯವನ್ನು ಬ್ರಿಟಿಶರಿಗೆ ಮುಡಿಪಿಟ್ಟು ೨೫,೦೦೦ ಗೂರ್ಖಾರನ್ನು ಸಮರಕ್ಕೆ ಸನ್ನದ್ಧರನ್ನಾಗಿಸಿದ್ದ.

ಎರಡನೇ ಜಾಗತಿಕ ಕೂಡ ಬ್ರಿಟಿಶರ ಪರವಾಗಿ ೧,೫೦೦೦೦ ಗೂರ್ಖಾ ಸೈನಿಕರು ಮಧ್ಯಪ್ರಾಚ್ಯ, ಇಟಲಿ, ಬರ್ಮಾ, ಮಲಯಾ ಬಸ್ರಾ, ತೆಹರಾನ್, ಯೂರೋಪ್ ಮುಂತಾದೆಡೆಗಳಲ್ಲಿ ರಕ್ಷಕ ಹಾಗೂ ಸೈನಿಕ ಕಾರ್ಯಾಚರಣೆ ನಡೆಸಿದ್ದರು.

ಭಾರತ ಸ್ವಾತಂತ್ರ್ಯ ನಂತರ ಗೂರ್ಖಾ ಸೈನಿ

ಕರು ಭಾರತೀಯ ಸೇನೆಯಲ್ಲಿ ಉಳಿಯಲು ಇಚ್ಛೆ ವ್ಯಕ್ತಪಡಿಸಿದರೂ, ೨, ೬, ೭ ಮತ್ತು ೧೦ ನೇ ಸೇನಾ ತುಕಡಿಗಳು ಬ್ರಿಟಿಶ್ ಪರವೆಂದು ಸಾರಿ, ಅವುಗಳನ್ನು ಮಲಯಾಕ್ಕೆ ಕಳುಹಿಸಲಾಯಿತು. ಆ ಸೇನಾ ತುಕಡಿಗಳು ಇಂದಿಗೂ ತಮ್ಮ ನಿಷ್ಠೆಯನ್ನು ಬ್ರಿಟನ್ನಿಗೆ ಮುಡಿಪಿಟ್ಟಿವೆ. ಆ ನಾಲ್ಕು ತುಕಡಿಗಳಲ್ಲಿ ಒಟ್ಟು ಎಂಟು ಬೆಟಾಲಿಯನ್‌ಗಳಿವೆ.

೧೯೪೭-೪೮ರ ಚಳಿಗಾಲದಲ್ಲಿ ಗೂರ್ಖಾ ಸೈನ್ಯ ಐದನೆಯ ತುಕಡಿ ಕಾಶ್ಮೀರದಲ್ಲಿ ತನ್ನ ಸಾಹಸವನ್ನು ಮೆರೆಸಿ, ತಾಯ್ನಾಡಿನ ರಕ್ಷಣೆಗಾಗಿ ಹೋರಾಡಿತು. ಆ ಕಾರ್ಯದಲ್ಲಿ ನಲವತ್ತು ಮಂದಿಗೂರ್ಖಾ ಸೈನಿಕರು ಪ್ರಾಣ ತೆತ್ತರು. ಎಂಬತ್ತಾರು ಮಂದಿ ಗಾಯಗೊಂಡರು, ಮೂವತ್ತೇಳು ಮಂದಿ ಗೂರ್ಖಾ ಸೈನಿಕರು ಕಾಣೆಯಾದರು.

ಗೂರ್ಖಾರ ಸೇನಾ ತುಕಡಿಗಳು ಭಾರತೀಯ ರಕ್ಷಣಾಪಡೆಯಲ್ಲಿ ಈಗ ಒಟ್ಟು ಏಳಿವೆ—೧, ೩, ೪, ೫, ೮, ೯ ಮತ್ತು ೧೦.

ರಾಷ್ಟ್ರೀಯ ಗೂರ್ಖಾ ವಿಮೋಚನಾ ರಂಗದ ಹನ್ನೊಂದು ಅಂಶಗಳ ಕಾರ್ಯಾಚರಣೆಯಲ್ಲಿ ಕೇಂದ್ರ ತಡೆಯೊಡ್ಡಿ 'ಆಪರೇಶನ್'ಗೆ ಯತ್ನಿಸಿದರೆ, ಈ ಸೇನಾ ತುಕಡಿಗಳು ಬಂಡೇಳುವಂತೆ ಘೀಸಿಂಗ್ ಪ್ರಚೋದನೆ ನೀಡಿದರೂ ಅಚ್ಚರಿಯಲ್ಲ! ಆರ್ಯ – ಮಂಗೋಲ್ ಜನಾಂಗದ ಲಕ್ಷಣ ಹೊಂದಿರುವ ಗೂರ್ಖಾರದು ಕುಳ್ಳಾದ ಪುಷ್ಟ ದೇಹ. ಚಪ್ಪಟೆ ಮುಖ, ಪೀತ ವರ್ಣ, ಇಳಕಲು ಕಣ್ಣು, ಸ್ವಭಾವತಃ ಕಷ್ಟ ಸಹಿಷ್ಣುಗಳು ಇವರು. ಬಾಕ್ಸಿಂಗ್, ಕಾಲ್ಚೆಂಡಾಟಗಳ ಬಗ್ಗೆ ಅತೀವ ಒಲವು. ಧೂಮಪಾನಾಸಕ್ತರು. ಕುಕ್ರಿ ಇವರ ಆತ್ಮರಕ್ಷಣೆಯ ಆಯುಧ.

ಗೂರ್ಖಾರಲ್ಲಿ ಎಪ್ಪತ್ತಕ್ಕೂ ಮಿಕ್ಕಿ ಪ್ರತ್ಯೇಕ ಬುಡಕಟ್ಟುಗಳಿವೆ. ಮಂಗೇರ್, ಗುರುಂಗ್, ಥಾಪಾ, ರಾಣಾ, ಖ್ಯಾ, ಲಿಂಬ, ರೈಯಾಸ್ ಈ ಬುಡಕಟ್ಟುಗಳ ಮಂದಿ ಹೆಚ್ಚಾಗಿ ಯುದ್ಧ ನಿರತರು.

ಧೈರ್ಯ, ಸಾಹಸ, ಪ್ರಾಮಾಣಿಕತೆ, ಸ್ವತಂತ್ರ ಮನೋವೃತ್ತಿ ಸ್ವಾವಲಂಬನ ಪ್ರವೃತಿ, ಆತ್ಮಗೌರವ ಗೂರ್ಖಾರಿಗೆ ರಕ್ತಗತವಾಗಿ ಬಂದಿರುವ ಗುಣಗಳು.

ಕೇವಲ ಸೇನೆಯೊಂದರಲ್ಲಿಯೇ ಅಲ್ಲ—ಗೂರ್ಖಾರು ಇನ್ನಿತರ ರಂಗಗಳಲ್ಲಿಯೂ ತಮ್ಮ ಸೇವೆ ಸಲ್ಲಿಸಿದ್ದಾರೆ; ಸಲ್ಲಿಸುತ್ತಿದ್ದಾರೆ. ಎಷ್ಟೋ ಮಂದಿ ಗೂರ್ಖಾರು ರಾಷ್ಟ್ರೀಯ ಮಟ್ಟದಲ್ಲಿಯೂ ಖ್ಯಾತಿಯನ್ನು ಗಳಿಸಿದ್ದಾರೆ. ಅಂಥವರಲ್ಲಿ ಮುಖ್ಯರಾದವರು. ಗಾಂಧೀಜಿಯ ಅನುಯಾಯಿಯಾಗಿದ್ದ—ಸಾವಿತ್ರಿದೇವಿ, ಆಲ್ ಇಂಡಿಯಾ ಗೂರ್ಖಾ ಲೀಗ್‌ನ ಕಾರ್ಯದರ್ಶಿ ದಿಯೋ ಪ್ರಕಾಶ್ ರೈ, ಪ್ರಸಿದ್ಧ ಚಿತ್ರಕಾರ ಲೆಯಿನ್ ಬಾಂಗ್‌ಡೆಲ್, ಪ್ರಖ್ಯಾತ ಕ್ರೀಡಾಪಟು ಚಂದನ ಸಿಂಗ್ ರಾವತ್, ಸಮಾಜಸೇವಾ ಧುರೀಣೆ ಮಾಯಾದೇವಿ ಛೆತ್ರಿ, ಪ್ರಸಿದ್ಧ ಗಾಯಕ ಅಂಬರ್ ಗುರುಂಗ್, ವೈದ್ಯಕೀಯ ಪರಿಣಿತ ಡಾ. ಮಣಿ ಕುಮಾರ್ ಛೆತ್ರಿ. ಇತಿಹಾಸ ತಜ್ಞ ಸೂರ್ಯ ವಿಕ್ರಮ್ ಗೆವಾಲಿ, ಶಿಕ್ಷಣ ತಜ್ಞ, ಧನಿಧರ್ ಶರ್ಮ, ಸಾಹಿತಿ ರೂಪ ನಾರಾಯಣ ಸಿನ್ಹಾ. ✡



ಸೋಹನ ಸಿಂಗ, ಹಿಂದೆ ಒಲಿಂಪಿಕ್ಸ್, ಏಷಿಯಾಡ್ ಆಟಗಳಲ್ಲಿ ಬೆಳ್ಳಿ ಪದಕ ಪಡೆದ ವೀರ. ಕಳೆದ ೮೨ರ ಮೇ ತಿಂಗಳಲ್ಲಿ ತನ್ನ ಸಂಸಾರ ನಡೆಸಲು ಗೌರವದ ಚಿಹ್ನೆಯಾದ ಬೆಳ್ಳಿಯ ಪದಕವನ್ನೇ ಮಾರಿದ.

—ಕೆ. ಎನ್. ವಿಜಯಕುಮಾರ



# ಜೀವಂತ ದೇವರು

ಅನಾದಿ ಕಾಲದಿಂದಲೂ, ಜಪಾನ್ ದೇಶದ ಸಮುದ್ರ ತೀರಗಳು ಭೂಕಂಪ ಅಥವಾ ಸಮುದ್ರ ತಳದಲ್ಲಿನ ಜ್ವಾಲಾಮುಖಿಯ ಕ್ರಿಯೆಯಿಂದ ಉಂಟಾಗುವ ದೈತ್ಯಾಕಾರದ ಭರತದ ಅಲೆಗಳಿಂದ ಕೊಚ್ಚಿ ಹೋಗಿವೆ. ಈ ಭಯಂಕರ ಅಚಾನಕ ಸಮುದ್ರದ ಉಬ್ಬರಗಳನ್ನು ಜಪಾನೀಯರು 'ತ್ಸುನಾಮಿ' ಎಂದು ಕರೆಯುತ್ತಾರೆ. ಇಂಥ ಕೊನೆಯ 'ತ್ಸುನಾಮಿ' ಜೂನ್ ೧೭, ೧೮೯೬ರ ಸಾಯಂಕಾಲ ಸಂಭವಿಸಿತು. ಆಗ ೨೦೦ ಮೈಲಿ ಉದ್ದದ ಅಲೆಯೊಂದು ಈಶಾನ್ಯ ಪ್ರಾಂತ್ಯಗಳಾದ ಮಿಯಾಗಿ, ಇವಟೆ ಮತ್ತು ಆಪ್ಮೋರಿಗಳ ಮೇಲೆ ಅಪ್ಪಳಿಸಿ ಸುಮಾರು ೩೦ ಸಾವಿರ ಮಾನವ ಜೀವಿಗಳನ್ನು ಬಲಿ ತೆಗೆದುಕೊಂಡಿತು. 'ಹಾಮಾಗುಚಿ ಗೋಹೀ'ಯದೂ ಅಂಥದೇ ಆಪತ್ತಿನ ಕತೆಯಾಗಿದ್ದು, ಅದು 'ಮೀಜಿ' ಶಕೆಗಿಂತ ಬಹಳ ಹಿಂದೆ, ಜಪಾನಿನ ಇನ್ನೊಂದು ತೀರದಲ್ಲಿ ಸಂಭವಿಸಿತು.

ಹಾಮಾಗುಚಿ ತನ್ನ ಹಳ್ಳಿಯ ಅತ್ಯಂತ ಪ್ರಭಾವಶಾಲಿ ನಿವಾಸಿಯಾಗಿದ್ದ. ಬಹಳ ವರ್ಷ ಕಾಲ ಆತ ಅಲ್ಲಿಯ 'ಮುರಓಸ' (ಮುಖ್ಯಸ್ಥ) ನಾಗಿದ್ದ. ಅವನು ಜನರಿಂದ ಎಷ್ಟು ಗೌರವಿಸಲ್ಪಡುತ್ತಿದ್ದನೋ, ಅಷ್ಟೇ ಅವರ ಪ್ರೀತಿಗೂ ಪಾತ್ರನಾಗಿದ್ದ. ವೃದ್ಧನಾಗಿದ್ದರಿಂದ ಸಾಮಾನ್ಯವಾಗಿ ಜನರು ಅವನನ್ನು 'ಓಜಿಸಾನ್' (ತಾತ) ಎಂದು ಕರೆಯುತ್ತಿದ್ದರು. ಅಲ್ಲದೆ ಕೋಮಿನ ಅತ್ಯಂತ ಶ್ರೀಮಂತ ಸದಸ್ಯನಾದ್ದರಿಂದ ಅವನನ್ನು ಅಧಿಕೃತವಾಗಿ 'ಚೋಜಾ' (ಧನಿಕ) ಎಂದು ಕರೆಯಲಾಗುತ್ತಿತ್ತು. ಸಣ್ಣ ರೈತರಿಗೆ ಅವನು ಅವರ ಹಿತಾಸಕ್ತಿಗಳ ಬಗ್ಗೆ ಬುದ್ಧಿ ಹೇಳುತ್ತಿದ್ದ, ಅವರ ಕಲಹಗಳನ್ನು ಬಗೆ ಹರಿಸುತ್ತಿದ್ದ, ಅಗತ್ಯ ಬಿದ್ದಾಗ ಧನ ಸಹಾಯ ಮಾಡುತ್ತಿದ್ದ. ಅಷ್ಟೇ ಅಲ್ಲ, ಅತ್ಯಂತ ಲಾಭದಾಯಕ ಬೆಲೆಯಲ್ಲಿ ಅವರ ಬತ್ತವನ್ನು ಮಾರಿ ಕೊಡುತ್ತಿದ್ದ.

ಮೂಲ : **ಲ್ಯಾಫ್ ಕ್ಯಾಡಿಯೋ ಹರ್ನ್**

ಕನ್ನಡಕ್ಕೆ : **ಅಬ್ದುಲ್ ಮಜೀದ್ ಖಾನ್**

ಹಾಮಾಗುಚಿಯ ಛಾವಣಿಯುಳ್ಳ ದೊಡ್ಡ ಗದ್ದೆ ಮನೆ ಒಂದು ಸಣ್ಣ ಪ್ರಸ್ಥಭೂಮಿಯ ಅಂಚಿನಲ್ಲಿತ್ತು. ಅಲ್ಲಿಂದ ಕೊಲ್ಲಿಯೊಂದನ್ನು ಕಾಣಬಹುದಿತ್ತು. ಪ್ರಸ್ಥಭೂಮಿಯು ವಿಶೇಷವಾಗಿ ಬತ್ತದ ಬೆಳೆಗೆ ಮೀಸಲಿದ್ದು ಮೂರು

ದಿಕ್ಕಿನಲ್ಲೂ ದಟ್ಟ ಕಾಡುಗಳುಳ್ಳ ಶಿಖರಗಳಿಂದ ಆವರಿಸಲ್ಪಟ್ಟಿತ್ತು. ಇನ್ನೊಂದು ದಿಕ್ಕು ಹಸಿರು ಇಳಿಜಾರು ಪ್ರದೇಶವಾಗಿದ್ದು ಸಮುದ್ರದಂಚಿನ ವರೆಗೆ ಭೂಮಿಯನ್ನು ಅಗೆದು ಹಾಕಿದ್ದಂತೆ ತೋರುತ್ತಿತ್ತು. ಸುಮಾರು ಮುಕ್ಕಾಲು ಮೈಲಿ ಉದ್ದವಾದ ಆ ಇಡೀ ಇಳುಕಲು, ಸೋಪಾನದಂತಿರುವ ರೀತಿಯನ್ನು ಸಮುದ್ರ ತೀರದಿಂದ ಗಮನಿಸಿದರೆ, ಅದೊಂದು ಹಸಿರು ಮೆಟ್ಟಲುಗಳ ಬೃಹತ್ ಏಣಿಯಂತೆ ಕಾಣು-ತ್ತಿತ್ತು. ಅದನ್ನು ನಡುಮಧ್ಯೆ ಕತ್ತರಿಸಿಕೊಂಡು ಒಂದು ಇಕ್ಕಟ್ಟಾದ ಡೊಂಕು ಡೊಂಕಾದ ಬೆಳ್ಳನೆಯ ಗೆರೆಯಂಥ ಗುಡ್ಡದ ದಾರಿ ಸಾಗಿತ್ತು. ಕೊಲ್ಲಿಯ ವಕ್ರಾಕೃತಿಯ ಉದ್ದಕ್ಕೂ ಛಾವಣೆ-ಗಳುಳ್ಳ ೯೦ ಮನೆಗಳೂ ಒಂದು ಶಿಂಟೋ ದೇವಾಲಯವೂ ಇದ್ದವು. ಅವೇ ಆ ಹಳ್ಳಿಯ ಹೃದಯ ಭಾಗವಾಗಿದ್ದವು. ಅಲ್ಲದೇ, 'ಚೋಜಾ'ನ ಮನೆಯವರೆಗೂ ಸಾಗಿದ್ದ ಕಿರು ದಾರಿಯ ಇಬ್ಬದಿಯಲ್ಲೂ ಕೆಲ ಮನೆಗಳಿದ್ದವು.

ಒಂದು ಚಳಿಗಾಲದ ಸಂಜೆ, ಹಾಮಾಗುಚಿ ಗೋಹೀ ತನ್ನ ಮನೆಯ ಉಪ್ಪರಿಗೆಯ ಮೊಗಸಾಲೆಯಿಂದ ಹಳ್ಳಿಯ ಜನರು ವಾರ್ಷಿಕ ಸಂತೋಷ ಕೂಟಕ್ಕಾಗಿ ಮಾಡುತ್ತಿದ್ದ ಏರ್ಪಾಡು ಗಳನ್ನು ವೀಕ್ಷಿಸುತ್ತಿದ್ದ. ಆ ವರ್ಷ ಬತ್ತದ ಫಸಲು ತುಂಬ ಸಮೃದ್ಧವಾಗಿತ್ತು. ರೈತರು ಸುಗ್ಗಿಯ ಆಚರಣೆಗಾಗಿ ನೃತ್ಯವೊಂದನ್ನು ಹಮ್ಮಿಕೊಂಡಿದ್ದರು. ಗ್ರಾಮದ ಏಕೈಕ ಬೀದಿಯ ಮನೆಯ ಛಾವಣಿಗಳ ಮೇಲೆ ಹಬ್ಬದ ಪತಾಕೆ-ಗಳು ಹಾರಾಡುತ್ತಿದ್ದುವು. ಬಿದಿರು ಕಂಬಗಳ ನಡುವೆ ಕಾಗದದ ಲಾಂದ್ರಗಳ ತೋರಣಗಳನ್ನು ಸಾಲಾಗಿ ತೂಗಿ ಬಿಡಲಾಗಿತ್ತು. ಗುಡಿಯೂ ಅಲಂಕೃತವಾಗಿತ್ತು. ಯುವಜನರು ವರ್ಣ ರಂಜಿತ ಉಡುಪುಗಳಲ್ಲಿ ಶೋಭಿಸುತ್ತಿದ್ದರು.

ಅಂದು ಸಂಜೆ ಹಾಮಾಗುಚಿಯ ಜೊತೆ ಅವನ ಹತ್ತು ವರ್ಷದ ಮೊಮ್ಮಗ ಟಾಡ್‌ಸನ್ನು ಬಿಟ್ಟರೆ ಬೇರೆ ಯಾರೂ ಇರಲಿಲ್ಲ. ಮನೆಯ ಇತರ ಸದಸ್ಯರು ಬಹಳ ಮುಂಚೆಯೇ ಹಳ್ಳಿಗೆ ಧಾವಿ-ಸಿದ್ದರು. ಮಾಮೂಲಿಗಿಂತ ತುಸು ಕಡಿಮೆ ಶಕ್ತನೆಂಬ ಭಾವನೆ ಬಾರದಿದ್ದರೆ ಆತನೂ ಅವರೊಡನೆ ಹೋಗಿರುತ್ತಿದ್ದ.

ದಿನವಿಡೀ ಪ್ರಖರ ಝಳವಿತ್ತು. ಕಡಲಿನಿಂದ ಮಂದಮಾರುತ ಬೀಸಿ ಬರುತ್ತಿದ್ದರೂ ಗಾಳಿಯಲ್ಲಿ ಒಂದು ನಮೂನೆಯ – ಜಪಾನೀ ರೈತರಿಗೆ ಅನುಭವವಿರುವಂತೆ, ಕೆಲ ಸಂದರ್ಭಗಳಲ್ಲಿ ಭೂಕಂಪಕ್ಕೆ ಮುನ್ನ ಆಗುವಂತೆ – ಭಾರವಾದ ಕಾವು ತುಂಬಿತ್ತು. ಅಂತೆಯೇ ಈಗ ಭೂಕಂಪವೊಂದು ಸಂಭವಿಸಿತು. ಆದರೆ ಅದು ಯಾರನ್ನೂ ದಿಗಿಲುಗೊಳಿಸುವಷ್ಟು ಪ್ರಬಲವಿರಲಿಲ್ಲ. ಆದರೂ ತನ್ನ ಜೀವಿತದಲ್ಲಿ ನೂರಾರು ಭೂಕಂಪಗಳನ್ನು ಅನುಭವಿಸಿದ್ದಂಥ ಹಾಮಾಗುಚಿಗೆ ಈ ಬಾರಿಯ ದೀರ್ಘ, ನಿಧಾನ, ಭೂಕಂಪನವೇಕೊ ವಿಲಕ್ಷಣವೆಂದು ತೋರಿತು. ಬಹುಶಃ ಅದು ಎಲ್ಲೋ ಬಹು ದೂರ ಸಂಭವಿಸಿದ್ದ ಭಾರಿ ಭೂಕಂಪದ ನಂತರದ ಕಂಪನವಾಗಿತ್ತು. ಅವನ ಮನೆ ಚಟಚಟ ಶಬ್ದ ಮಾಡುತ್ತ ಹಲವು ಬಾರಿ ಲಘುವಾಗಿ ತೂಗಿತು; ನಂತರ ಎಲ್ಲವೂ ಮತ್ತೆ ಸ್ತಬ್ಧವಾಯಿತು.

ಕಂಪನ ನಿಂತಿದ್ದೇ ತಡ, ಹಾಮಾಗುಚಿಯ ತೀಕ್ಷ್ಣ ಮುದಿ ಕಣ್ಣುಗಳು ಕಳವಳದಿಂದ ಗ್ರಾಮದ ಕಡೆ ತಿರುಗಿದವು. ದೂರದಲ್ಲಿ ಕಾಣುತ್ತಿದ್ದ ಸಮುದ್ರ ಪ್ರದೇಶದಲ್ಲಿ ಅಸಾಧಾರಣವಾದುದೇನೋ ಸಂಭವಿಸುತ್ತಿರುವಂತೆ ಅನಿಸಿತು. ಆತ ಎದ್ದು ನಿಂತ; ಸಮುದ್ರವನ್ನೇ ದಿಟ್ಟಿಸತೊಡಗಿದ. ಅದು ಏಕಾಏಕಿ ಕಪ್ಪಾಗಿ ವಿಚಿತ್ರವಾಗಿ ವರ್ತಿಸಲಾರಂಭಿಸಿತ್ತು. ನೀರು ಗಾಳಿಗೆ ವಿರುದ್ಧವಾಗಿ ಚಲಿಸುತ್ತಿರುವಂತೆ ತೋರಿತು. ಅದು ನೆಲದಿಂದ ಹೊರ ಓಡಲಾರಂಭಿಸಿತ್ತು.

ಸ್ವಲ್ಪ ಕಾಲದಲ್ಲಿ ಇಡೀ ಗ್ರಾಮವೇ ಆ ಅಸಾಮಾನ್ಯ ಘಟನೆಯನ್ನು ಗಮನಿಸಿತು. ಅದಕ್ಕೆ ಮುಂಚೆ ಆಗಿದ್ದ ಭೂಕಂಪನ ಯಾರನ್ನೂ ಗಾಬರಿಗೊಳಿಸಿರಲಿಲ್ಲ. ಆದರೆ ಎಲ್ಲರೂ ನೀರಿನ ಚಲನೆಯ ಕಾರಣದಿಂದ ದಿಗ್ಭ್ರಮೆಗೊಂಡಿದ್ದರು. ಅದನ್ನು ನೋಡಲೆಂದು ಅವರು ಕಡಲ ತೀರದೆಡೆಗೆ ಓಡತೊಡಗಿದ್ದರು. ಅಲ್ಲಿಯವರೆಗೆ, ಆ ಗ್ರಾಮದ ಯಾವ ವ್ಯಕ್ತಿಯೂ ಅಂಥ ಘಟನೆ ಸಂಭವಿಸಿದ್ದನ್ನು ನೋಡಿರಲಿಲ್ಲ. ಒಂದೆಂದೂ ನೋಡದಿದ್ದಂಥ ವಸ್ತುಗಳು ಪ್ರೇತ

ಗಳಂತೆ ಪ್ರಕಟವಾಗತೊಡಗಿದವು. ಹಾಮಾಗುಚಿ ನೋಡುತ್ತಿದ್ದಂತೆಯೇ ಮರಳಿನ ಅಪರಿಚಿತ ಉಬ್ಬುಗೆರೆಗಳೂ ತಾವುಗಳೂ ಕಳೆ ತುಂಬಿದ ಬಂಡೆಗಳ ನೆಲೆಗಳೂ ಬತ್ತಲೆಯಾದವು. ಕೆಳಗಿದ್ದ ಜನರಲ್ಲಿ ಯಾರೂ ಆ ಭೂತಾಕಾರದ ಅಲೆಯ ಉಬ್ಬರ ಏನನ್ನು ಸೂಚಿಸುತ್ತದೆಂಬುದನ್ನು ಊಹಿಸಲಾರದೇ ಹೋದರು.

ಸ್ವತಃ ಹಾಮಾಗುಚಿ ಅಂಥ ಘಟನೆಯನ್ನು ಹಿಂದೆಂದೂ ನೋಡಿರಲಿಲ್ಲ. ಆದರೆ ಬಾಲ್ಯದಲ್ಲಿ ತನ್ನ ಮುತ್ತಾತ ಹೇಳಿದ್ದ ಸಂಗತಿಗಳು ಅವನಿಗೆ ನೆನಪಿದ್ದವು. ತಕ್ಷಣ ಅವನಿಗೆ ಸಮುದ್ರದ ಈ ಮುನ್ಸೂಚನೆಗಳ ಪರಿಣಾಮದ ಅರಿವಾಯಿತು. ಅವನು ಗ್ರಾಮದ ಜನರಿಗೆ ಸಂದೇಶ ತಲಪಿಸಲು ಅಥವಾ ಗುಡ್ಡದ ಮೇಲಿರುವ ಬೌದ್ಧ ದೇವಾಲಯದ ಅರ್ಚಕರು ಅಲ್ಲಿಯ ಬೃಹತ್ ಗಂಟೆಯನ್ನು ಬಾರಿಸುವಂತೆ ಮಾಡಲು ಎಷ್ಟು ಸಮಯ ಬೇಕಾಗಬಹುದೆಂದು ಯೋಚಿಸಿದ. ಆದರೆ ಅವನು ಯೋಚಿಸಲು ತೆಗೆದುಕೊಂಡ ಕಾಲಕ್ಕಿಂತಲೂ ಅವನು ಏನು ಯೋಚಿಸಬಹುದಾಗಿತ್ತು, ಎಂಬುದನ್ನು ಹೇಳಲು ಹೆಚ್ಚು ಕಾಲ ಬೇಕಾಗಬಹುದು. ಅವನು ತಕ್ಷಣ ತನ್ನ ಮೊಮ್ಮಗನಿಗೆ ಕೂಗಿ, ಹೇಳಿದ: "ಟಾಡ್! ಬೇಗ ಬಹಳ ಬೇಗ!... ಒಂದು ಪಂಜು ಹೊತ್ತಿಸಿ ಕೊಡು."

ಬಿರುಗಾಳಿಯ ರಾತ್ರಿಗಳಲ್ಲಿ ಮತ್ತು ಕೆಲವು ನಿರ್ದಿಷ್ಟ ಶಿಂಟೋ ಹಬ್ಬಗಳ ಸಂದರ್ಭಗಳಿಗಾಗಿ, ಸಮುದ್ರ ತೀರದ ಮನೆಗಳಲ್ಲಿ ಪೈನ್ ಮರದ ಪಂಜುಗಳನ್ನು ಇಟ್ಟಿರುತ್ತಾರೆ. ಬಾಲಕ ತಕ್ಷಣ ಒಂದು ದೀವಟಿಗೆಯನ್ನು ಹೊತ್ತಿಸಿ ತಂದ; ಮುದುಕ ಅದನ್ನೆತ್ತಿಕೊಂಡು ಗದ್ದೆಗಳತ್ತ ಧಾವಿಸಿದ. ಅಲ್ಲಿ ನೂರಾರು ಬತ್ತದ ಬಣವೆಗಳಿದ್ದವು. ಅವನು ತೊಡಗಿಸಿದ್ದ ಅಧಿಕಾಂಶ ಬಂಡವಾಳವನ್ನು ಪ್ರತಿನಿಧಿಸುವ ಅವು ಸಾಗಾಣಿಕೆಗಾಗಿ ಕಾದು ನಿಂತಿದ್ದವು. ಇಳಿಜಾರಿನ ಅಂಚಿಗೆ ತೀರಾ ಹತ್ತಿರವಿದ್ದ ಕೆಲವು ಬಣವೆಗಳನ್ನು ಸಮೀಪಿಸಿ, ಅವನ ಮುದಿ ಕೈಕಾಲುಗಳು ಎಡೆಗೊಡುವಷ್ಟು ವೇಗವಾಗಿ, ಒಂದರಿಂದ ಇನ್ನೊಂದಕ್ಕೆ ಧಾವಿಸುತ್ತ ಅವುಗಳಿಗೆ ಪಂಜಿನಿಂದ ಬೆಂಕಿ ಹೊತ್ತಿಸಲಾರಂಭಿಸಿದ. ಬಿಸಿಲಿಗೆ ಒಣಗಿದ್ದ ಬಣವೆಗಳು ಊದಿನ ಹಾಗೆ ತಕ್ಷಣ ಹೊತ್ತಿಕೊಂಡವು. ಪ್ರಬಲವಾಗುತ್ತಿದ್ದ ಸಮುದ್ರ–ಮಾರುತ ಬೆಂಕಿಯನ್ನು ಭೂಪ್ರದೇಶದತ್ತ ಬೀಸತೊಡಗಿ ಸಾಲು ಸಾಲಾಗಿ ಬಣವೆಗಳಲ್ಲಿ ಬೆಂಕಿ ಚಿಮ್ಮಿತು. ಭುಗಿಲೆದ್ದು ಆಗಸದ ಕಡೆ ಹೊಗೆಯ ಸುರುಳಿಗಳನ್ನು ಕಾರುತ್ತ, ಅವೆಲ್ಲವೂ ಒಗ್ಗೂಡಿ ಬಂದು ಬೃಹದಾಕಾರದ ಮೋಡದ ಸುರುಳಿಯಂತಾದವು.

---

ಲ್ಯಾಫ್ ಕ್ಯಾಡಿಯೋ ಹರ್ನ್ (೧೮೫೦–೧೯೦೪) ಲ್ಯೂಕೇಡಿಯಾ ಎಂಬ ಗ್ರೀಕ್ ದ್ವೀಪದಲ್ಲಿ ಜನಿಸಿದ. ಅವನ ತಂದೆ ಐರಿಶ್, ತಾಯಿ ಗ್ರೀಕ್. ವಿದ್ಯಾಭ್ಯಾಸಕ್ಕಾಗಿ ಡರ್‌ಹ್ಯಾಮ್‌ಗೆ ಕಳಿಸಲ್ಪಟ್ಟಾಗ, ಹೊಸ ಪರಿಸರದಿಂದ ತುಂಬ ಬೇಸತ್ತು ಹರ್ನ್ ಅಮೇರಿಕಕ್ಕೆ ಓಡಿ ಹೋದ. ಕೆಲ ಕಾಲ ನ್ಯೂ ಆರ್ಲಿಯನ್ಸ್‌ನ ಪತ್ರಿಕೆಯೊಂದರ ವರದಿಗಾರನಾಗಿ ಸೇವೆ ಸಲ್ಲಿಸಿದ. ನಂತರ 'ಹಾರ್ಪರ್ ಬ್ರದರ್ಸ್' ಪ್ರಕಾಶನದಿಂದ ನಿಯೋಜಿಸಲ್ಪಟ್ಟು ಜಪಾನ್ ದೇಶಕ್ಕೆ ಹೋದ. ಅಲ್ಲಿಯೇ ನೆಲೆಸಿ ಟೋಕಿಯೋ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕನಾದ. ಜಪಾನೀ ಮಹಿಳೆಯೊಬ್ಬಳನ್ನು ಮದುವೆಯಾಗಿ, ಬೌದ್ಧ ಧರ್ಮಕ್ಕೆ ಮತಾಂತರಗೊಂಡ. ತಾನು ಪ್ರೀತಿಸಲಾರಂಭಿಸಿದ್ದ ದೇಶದ ಬಗ್ಗೆ ಆತ ಹಲವಾರು ಸಂಪುಟಗಳನ್ನು ಪ್ರಕಟಿಸಿದ. ಆದರೆ ಅವನ ಜೀವನದ ಕೊನೆಯ ವರ್ಷಗಳು ಮಾತ್ರ ಅನಾರೋಗ್ಯ ಮತ್ತು ಭ್ರಮನಿರಸನದಿಂದ ಕೂಡಿದ್ದುವು.

ಟಾಡ್, ದಿಗಿಲುಗೊಂಡು, ತನ್ನ ತಾತನ ಹಿಂದೆ ಓಂಟಿ ಕೂಗುತ್ತಾ ಓಡುತ್ತಿದ್ದ— "ಓಜಿಸಾನ್! ಯಾಕೆ? ಓಜಿಸಾನ್, ಯಾಕೆ—ಯಾಕೆ?"

ಆದರೆ ಹಾಮಾಗುಚಿ ಉತ್ತರ ಕೊಡಲಿಲ್ಲ: ವಿವರಣೆ ನೀಡಲು ಅವನಿಗೆ ಸಮಯವಿರಲಿಲ್ಲ. ಅವನು ಅಪಾಯದಲ್ಲಿದ್ದ ನಾನೂರು ಜೀವಗಳ ಬಗ್ಗೆ ಮಾತ್ರ ಯೋಚಿಸುತ್ತಿದ್ದ. ಬಾಲಕ ಕೆಲಕಾಲ ಉರಿದು ಹೋಗುತ್ತಿದ್ದ ಭತ್ತದ ಬಣವೆಗಳನ್ನು ದಿಗ್ಭ್ರಾಂತನಾಗಿ ದಿಟ್ಟಿಸಿದ; ನಂತರ ಗಟ್ಟಿಯಾಗಿ ಅಳುತ್ತಾ ಮನೆಗೆ ಓಡಿದ. ತನ್ನ ತಾತನಿಗೆ ಹುಚ್ಚು ಹಿಡಿದಿದೆ ಎಂದು ಅವನಿಗೆ ಖಾತ್ರಿಯಾಗಿತ್ತು. ಹಾಮಾಗುಚಿ ತನ್ನ ಜಮೀನಿನ ಮೇರೆಯನ್ನು ತಲಪುವವರೆಗೂ ಬಣವೆಯ ನಂತರ ಬಣವೆಗೆ ಬೆಂಕಿ ಇಡುತ್ತಾ ಸಾಗಿದ. ನಂತರ ದೊಂಬಿಯನ್ನು ದೂರಕ್ಕೆಸೆದು, ಕಾಯುತ್ತ ನಿಂತ. ಜ್ವಾಲೆಯನ್ನು ಕಂಡು ಗುಡ್ಡದ ದೇವಾಲಯದ ಉಪ ಅರ್ಚಕ ಬೃಹತ್ ಗಂಟೆಯನ್ನು ಬಾರಿಸಲಾರಂಭಿಸಿದ. ಈಗ ಜನ ಇಬ್ಬಗೆಯ ಮನವಿಗೆ ಓಗೊಟ್ಟರು. ದಂಡೆಯಿಂದಲೂ ಗ್ರಾಮದಿಂದಲೂ ಜನ ಅವಸರವಸರವಾಗಿ, ಇರುವೆಗಳ ಸಾಲಿನ ಹಾಗೆ ಬರುತ್ತಿರುವುದನ್ನು ಹಾಮಾಗುಚಿ ಗಮನಿಸಿದ— ಅವನ ಕಳವಳದ ಕಣ್ಣಿಗೆ ಅದು ಸ್ವಲ್ಪವೂ ವೇಗದಂತೆ ತೋರಲಿಲ್ಲ. ಪ್ರತಿಯೊಂದು ಕ್ಷಣವೂ ಅವನಿಗೆ ಅತ್ಯಂತ ದೀರ್ಘವಾಗಿ ತೋರಿತು. ಸೂರ್ಯ ಕೆಳಗಿಳಿಯುತ್ತಿದ್ದ. ಕೊಲ್ಲಿಯ ಸುಕ್ಕುಗಟ್ಟಿದ ಸ್ತರ ಮತ್ತು ಅದರಾಚೆ ಹಳದಿ ಸ್ಕ್ಯಾಲೊ ಮರಗಳಿಂದ ತೇಪೆಗೊಂಡ ವಿಶಾಲ ವಿಸ್ತಾರಗಳು ಸಂಜೆಯ ಕೊನೆಯ ಕಿತ್ತಳೆ ಹೊಳಪಿನಲ್ಲಿ ಬೆತ್ತಲಾಗಿ ಬಿದ್ದಿದ್ದವು. ಸಮುದ್ರ ಮಾತ್ರ ಇನ್ನೂ ದಿಗಂತದೆಡೆ ಓಡುತ್ತಲೇ ಇತ್ತು.

ಆದರೆ ಸಹಾಯಕ್ಕೆ ಮೊದಲ ತಂಡ ಬರಲು ಹಾಮಾಗುಚಿ ಹೆಚ್ಚು ಕಾಲ ಕಾಯಬೇಕಾಗಲಿಲ್ಲ. ನೂರಾರು ಜನ ಯುವ ರೈತರು ಚುರುಕಿನಿಂದ ಬೆಂಕಿಯನ್ನು ಕೂಡಲೇ ಆರಿಸಲು ಅನುವಾದರು. ಆದರೆ 'ಚೋಜಾ', ತನ್ನೆರಡೂ ತೋಳುಗಳನ್ನು ಅಡ್ಡಚಾಚಿ ಅವರನ್ನು ತಡೆಗಟ್ಟಿದ.

"ಅದು ಸುಡಲಿ ಬಿಡಿ, ಹೈದರೆ!" ಆತ ಆಜ್ಞಾಪಿಸಿದ, "ಅದು ಹಾಗೇ ಇರಲಿ. ಇಡೀ 'ಮುರಾ' (ಗ್ರಾಮ) ಇಲ್ಲಿಗೆ ಬರಬೇಕೆಂಬುದೇ ನನ್ನಿಚ್ಛೆ. ಒಂದು ಭಾರಿ ಅಪಾಯವಿದೆ."

ಇಡೀ ಗ್ರಾಮವೇ ಬರಲಾರಂಭಿಸಿತ್ತು: ಹಾಮಾಗುಚಿ ನೋಡುತ್ತಿದ್ದಂತೆ ಎಲ್ಲಾ ಯುವಕರೂ ಹುಡುಗರೂ ಸ್ವಲ್ಪ ಸಮಯದಲ್ಲೇ ಹಾಜರಾದರು. ನಂತರ ವಯಸ್ಸಾದವರಲ್ಲಿ ಅಧಿಕಾಂಶ ಜನರು ಬಂದರು. ನಂತರ ಬೆನ್ನಿನ ಮೇಲೆ ಕೂಸುಗಳನ್ನು ಹೊತ್ತು ತಾಯಂದಿರೂ ಬಂದರು. ಮೊದಲನೇ ತಂಡದ ವೇಗಕ್ಕೆ ಸರಿಯಾಗಿ ಗುಡ್ಡ ಹತ್ತಲಾರದಂಥ ಅಶಕ್ತ ವೃದ್ಧಜನರು, ನಿಧಾನವಾಗಿ ಕಡಿದಾದ ಏರಿಯ ತುದಿಯನ್ನು ತಲಪುತ್ತಿರುವುದನ್ನು ಕಾಣಬಹುದಿತ್ತು. ಬೆಳೆಯುತ್ತಾ ಹೋದ ಜನಸಮೂಹ,



"ಈ ಸ್ವಾಮೀಜಿಗೆ ನಿಜವಾಗ಼್ೂ ಮಕ್ಕಳ ಮೇಲೆ ತುಂಬಾ ಪ್ರೀತಿ. ಮಕ್ಕಳು ಅಳುವಾಗ ಹಾಲುಣಿಸೀಂತ ತಾಯಂದ್ರಿಗೆ ಒತ್ತಾಯ ಮಾಡ್ತಿದ್ದಾರೆ"

ಇನ್ನು ಏನೂ ಉಳಿದಿದೆ. ಒಮ್ಮೆ ಪ್ರಜ್ವಲಿಸುತ್ತಿರುವ ಗದ್ದೆಗಳನ್ನು ಒಮ್ಮೆ ತಮ್ಮ ಶಾಂತಚಿತ್ತ ಚೋಜಾನ ಮೂಲವನ್ನು ದುಗುಡಮಿಶ್ರಿತ ಆಶ್ಚರ್ಯಗೊಂಡ ನೋಡುತ್ತ ನಿಂತರು. ಸೂರ್ಯ ಮುಳುಗಿದ.

ಹಲವಾರು ಜನರ ಪ್ರಶ್ನೆಗಳಿಗೆ ಉತ್ತರವಾಗಿ, ಟಾಡ್ ಬಿಕ್ಕುತ್ತಾ ಹೇಳಿದ— "ತಾತನಿಗೆ ಹುಚ್ಚು ಹಿಡಿದಿದೆ. ಹುಚ್ಚ ಅವನು. ಬೇಕೆಂದೇ ಅವನು ಭತ್ತಕ್ಕೆ ಬೆಂಕಿ ಹಚ್ಚಿದ. ನಾನದನ್ನು ಕಣ್ಣಾರೆ ನೋಡಿದೆ!"

"ಹೌದು. ಮಗು ನಿಜ ಹೇಳುತ್ತಿದೆ," ಎಂದ ಹಾಮಾಗುಚಿ. "ಭತ್ತಕ್ಕೆ ಬೆಂಕಿ ಹಚ್ಚಿದವನು ನಾನೇ. ಎಲ್ಲ ಜನರೂ ಇಲ್ಲಿದ್ದಾರೆಯೆ?"

ಕುಮಿಚೋಗ್ರಾಮದ ಮುಖ್ಯಸ್ಥನೂ ಕುಟುಂಬಗಳ ಹಿರಿಯರೂ ತಮ್ಮ ಸುತ್ತಮುತ್ತ ಮತ್ತು ಗುಡ್ಡದ ಕೆಳಗೆ ದೃಷ್ಟಿ ಹಾಯಿಸಿ, ನಂತರ ಉತ್ತರಿಸಿದರು: "ಹೌದು ಎಲ್ಲರೂ ಇಲ್ಲಿದ್ದಾರೆ. ಆದರೆ ನಮಗಿದು ಅರ್ಥವಾಗುತ್ತಿಲ್ಲ."

ವೃದ್ಧ ಅತ್ಯಂತ ಎತ್ತರ ದನಿಯಲ್ಲಿ ಕೂಗುತ್ತ, ತೆರೆದ ಸಾಗರ ಪ್ರದೇಶದತ್ತ ಅವರ ಲಕ್ಷ್ಯ ಹರಿಯಿಸಿ, "ಈಗ ಹೇಳಿ, ನಾನು ಹುಚ್ಚನೇನು?" ಎಂದ.

ಪೂರ್ವದ ಸಂಧ್ಯಾವರ್ಣದ ಮೂಲಕ ದೃಷ್ಟಿ ಹಾಯಿಸುತ್ತ ಎಲ್ಲರೂ ನೋಡಿದರು. ಮಬ್ಬಾಗಿದ್ದ ಕ್ಷಿತಿಜದ ಅಂಚಿನಲ್ಲಿ ಉದ್ದನೆಯ, ತೆಳ್ಳನೆಯ, ಮಂದ ಗೆರೆಯೊಂದು ಕಂಡಿತು. ಮೊದಲು ದಂಡೆ ಇರದಿದ್ದ ಜಾಗದಲ್ಲಿ ಈಗ ದಂಡೆಯ ಛಾಯೆಯಂಥ ಒಂದು ಗೆರೆ ಕಾಣಿಸಿತು. ಅವರು ನೋಡುತ್ತಿದ್ದಂತೆ ಅದು ದಪ್ಪವಾಗುತ್ತ, ಸಮುದ್ರದ ಕಡೆಯಿಂದ ದಡವನ್ನು ಸಮೀಪಿಸುವವನೊಬ್ಬನಿಗೆ ತೋರುವ ತೀರದಂತೆ, ಆದರೆ ಹೋಲಿಸಲಾಗದಷ್ಟು ವೇಗವಾಗಿ ಅಗಲವಾಗುತ್ತ ಹೋಯಿತು. ಆ ಉದ್ದನೆಯ ಕತ್ತಲೆಯೇ ಹಿಂದಿರುಗುತ್ತಿದ್ದ ಸಮುದ್ರವಾಗಿತ್ತು. ಅದು ಪರ್ವತದಂತೆ ಎತ್ತರವಾಗುತ್ತ, ಗಿಡುಗನಿಗಿಂತಲೂ ವೇಗವಾಗಿ ಕ್ರಮಿಸುತ್ತಾ ಬರುತ್ತಿತ್ತು.

"ತ್ಸುನಾಮಿ!" ಜನರು ಚೀರಿದರು. ನಂತರ ಯಾವುದೇ ಗುಡುಗಿಗಿಂತಲೂ ಭಾರವಾದ, ಒಂದು ಹೆಸರಿಸಲಾಗದ ಆಘಾತ ಎಲ್ಲಾ ಚೀತ್ಕಾರಗಳನ್ನೂ ಎಲ್ಲಾ ಶಬ್ದಗಳನ್ನೂ ಎಲ್ಲಾ ಶ್ರವಣ ಶಕ್ತಿಯನ್ನೂ ನಾಶಪಡಿಸಿತು. ದೈತ್ಯಾಕಾರದ ನೀರಿನ ಉಬ್ಬು ದಡವನ್ನು ಎಷ್ಟು ಭಾರವಾಗಿ ಅಪ್ಪಳಿಸಿತೆಂದರೆ, ಗುಡ್ಡಗಳು ನಡುಗಿ ಮಿಂಚಿನ ಹಚ್ಚಡದಂಥ ನೊರೆ ಸ್ಫೋಟಗೊಂಡಿತು. ನಂತರ ಒಂದು ಕ್ಷಣ ಬೆಟ್ಟದ ಪರಿಯುತ್ತ ಮೋಡವೊಂದರ ಹಾಗೆ ನುಗ್ಗಿ ಬಂದ ತುಷಾರದ ಬಿರುಗಾಳಿಯ ಹೊರತು ಬೇರೆ ಏನೂ ಗೋಚರಿಸಲಿಲ್ಲ. ಕೇವಲ ಅದರ ಭಯಾನಕತೆಗೆ ಜನರು ಹಾರಿ ಹಿಂದಕ್ಕೆ ಚದುರಿ ಬಿದ್ದರು. ಅವರು ಮತ್ತೆ ಕಣ್ತೆರೆದಾಗ, ಜ್ವಾಲಾಮುಖಿ ಅವರ ವಸತಿಗಳಿದ್ದ ಪ್ರದೇಶದಲ್ಲಿ ಘೋರ್ಗರೆಯುತ್ತಿತ್ತು. ಅದು ಗರ್ಜಿಸುತ್ತ ಹಿಮ್ಮೆಟ್ಟುತ್ತಿದ್ದಂತೆ, ಭೂಮಿಯ ಕರುಳುಗಳನ್ನೇ ಕಿತ್ತು ಹಾಕಿತು. ಎರಡು ಸಲ, ಮೂರು ಸಲ, ಐದು ಸಲ ಸಮುದ್ರ ಪ್ರತಿಸಲವೂ ಕ್ಷೀಣಿಸುತ್ತಿದ್ದ ತೆರೆಗಳೊಡನೆ ಅಪ್ಪಳಿಸಿ ಹಿಂಜರಿಯಿತು, ನಂತರ ಅದು ಮೊರೆಯುತ್ತ ತನ್ನ ಮೂಲ ಸ್ಥಾನಕ್ಕೆ ಹಿಂದಿರುಗಿತು.

ಪ್ರಸ್ಥಭೂಮಿಯ ಮೇಲೆ ಕೆಲ ಕಾಲ ಒಂದೂ ಮಾತು ಕೇಳಿ ಬರಲಿಲ್ಲ. ಎಲ್ಲರೂ ತಳದ ತೀರದಲ್ಲಾಗಿದ್ದ ಸರ್ವನಾಶವನ್ನು ಮೂಕರಾಗಿ ನೋಡುತ್ತಾ ನಿಂತರು— ಬಿಸುಡಲ್ಪಟ್ಟ ಬಂಡೆಗಳ ಭೀಕರತೆ ಹಾಗೂ ಸೀಳಿ ಹೋಗಿದ್ದ ಪ್ರಪಾತದ ನಗ್ನತೆ, ಅಗಾಧವಾಗಿ ಕೊರೆಯಲ್ಪಟ್ಟು ಸಮುದ್ರ ತಳದಿಂದ ಉಕ್ಕಿ ಬಂದಿದ್ದ ಭಗ್ನಾವಶೇಷಗಳು ಮತ್ತು ನಿರ್ನಾಮವಾದ ವಸತಿಗಳ ಖಾಲಿ ಜಾಗದ ಮೇಲೂ ಗುಡಿಯ ಮೇಲೂ ತೂರಲ್ಪಟ್ಟಿದ್ದ ನೊರಜುಗಲ್ಲು. ಹಳ್ಳಿ ಅದೃಶ್ಯವಾಗಿತ್ತು. ಗದ್ದೆಗಳ ಬಹುಭಾಗ ಇಲ್ಲವಾಗಿತ್ತು. ಸೋಪಾನಗಳೂ ಮಾಯವಾಗಿದ್ದುವು. ಕೊಲ್ಲಿಯ ಉದ್ದಕ್ಕೂ ನೆಲೆಸಿದ್ದ ಮನೆಗಳಿಗೆ ಸಂಬಂಧಿಸಿದಂತೆ ಗುರುತಿಸುವಂಥದೇನೂ ಉಳಿದಿರಲಿಲ್ಲ—ದಡದಿಂದ ದೂರದಲ್ಲಿದ್ದ ವಾತಾವರಣದಲ್ಲಿ ಹುಚ್ಚಾಪಟ್ಟೆ ಹೊರಳಾಡುತ್ತಿದ್ದ ಎರಡು ಛಾವಣಿಗಳ ಹೊರತು. ಸಾರ್ವತ್ರಿಕ ನಷ್ಟದಿಂದಾದ ದಿಗ್ಭ್ರಮೆಯ ಕಾರಣದಿಂದ ಜನರು

ಮೂಕರಾಗಿದ್ದರು. ಆದರೆ ಸಾವಿನ ಭಯ ಮಾಯವಾಗಿತ್ತು. ಕೊನೆಗೆ ಹಾಮಾಗುಚಿ ಸೌಮ್ಯ ಧ್ವನಿಯಲ್ಲಿ ನುಡಿದ— "ಇದಕ್ಕಾಗಿಯೇ ನಾನು ಬತ್ತಕ್ಕೆ ಬೆಂಕಿ ಹಚ್ಚಿದ್ದು."

ಆತ — ಅವರೆಲ್ಲರ 'ಚೋಜಾ' — ಈಗ ಅತ್ಯಂತ ಬಡವರಲ್ಲಿ ಬಡವನಾಗಿ ಅವರ ಮಧ್ಯದಲ್ಲಿ ನಿಂತಿದ್ದ. ಅವನ ಸಂಪತ್ತೆಲ್ಲವೂ ಹೊರಟು ಹೋಗಿತ್ತು—ಆದರೆ ಅವನು ನಾನೂರು ಜೀವಗಳನ್ನು ಉಳಿಸಿದ್ದ. ಚೋಟುದ್ದದ ಟಾಡ್ ಅವನ ಬಳಿ ಓಡಿ ಬಂದು, ಅವನ ಕೈ ಹಿಡಿದುಕೊಂಡು, ತಾನು ಅಸಭ್ಯವಾಗಿ ಮಾತಾಡಿದುದಕ್ಕೆ ಕ್ಷಮೆ ಬೇಡಿದ. ಹಳ್ಳಿಯ ಮುಖಂಡರೂ, ಇತರರು ಹಾಮಾಗುಚಿ ಗೋಹೀಯ ಎದುರು, ಸಾಷ್ಟಾಂಗ ಬಿದ್ದರು.

ಮುದುಕ ಕೊಂಚ ಹೊತ್ತು ರೋದಿಸಿದ— ಭಾಗಶಃ ಅವನಿಗೆ ಸಂತೋಷವಾಗಿದ್ದರಿಂದ. ಮತ್ತು ಭಾಗಶಃ ಅವನು ವೃದ್ಧನೂ ಬಲಹೀನನೂ ಆಗಿದ್ದು, ಕಹಿ ಪರೀಕ್ಷೆಗೆ ಗುರಿಯಾಗಿದ್ದರಿಂದ. ಅವನಿಗೇ ಮಾತೇ ಹೊರಡಲಿಲ್ಲ.

ಮಾತನಾಡಲು ಶಬ್ದಗಳು ಸಿಕ್ಕ ಕೂಡಲೆ ಅವನೆಂದ: "ನನ್ನ ಮನೆ ಉಳಿದಿದೆ. ಅದರಲ್ಲಿ ಹಲವು ಜನರಿಗೆ ಜಾಗವಿದೆ. ಗುಡ್ಡದ ಮೇಲಿನ ಮಂದಿರವೂ ಉಳಿದಿದೆ. ಅದರಲ್ಲಿ ಉಳಿದವರಿಗೆ ಆಶ್ರಯವಿದೆ."

ತರುವಾಯ ಅವನು ತನ್ನ ಮನೆಯತ್ತ ನಡೆದ. ಜನರು ಸಂತೋಷದಿಂದ ಉದ್ಘೋಷ ಮಾಡಿದರು. ಅದರ ಜೊತೆಗೆ ದುಃಖವೂ ಉಕ್ಕಿ ಬಂತು. ಮುಗ್ಗಟ್ಟಿನ ಅವಧಿ ದೀರ್ಘವಾಗಿತ್ತು. ಏಕೆಂದರೆ, ಆ ದಿನಗಳಲ್ಲಿ ಜಿಲ್ಲೆ – ಜಿಲ್ಲೆಯ ನಡುವೆ ತ್ವರಿತ ಸಂಪರ್ಕದ ಸಾಧನಗಳಿರಲಿಲ್ಲ. ಅಗತ್ಯವಾದ ಸಹಾಯ ಬಲು ದೂರದಿಂದ ಬರಬೇಕಾಗಿತ್ತು. ಆದರೆ ಪರಿಸ್ಥಿತಿ ಸುಧಾರಿಸಿದಾಗ, ಜನರು ಹಾಮಾಗುಚಿಯ ಋಣವನ್ನು ಮರೆಯಲಿಲ್ಲ. ಅವನನ್ನು ಶ್ರೀಮಂತನನ್ನಾಗಿಸುವುದು ಅವರಿಗೆ ಸಾಧ್ಯವಾಗಲಿಲ್ಲ. ಅಲ್ಲದೆ, ಅವನ ಬಗ್ಗೆ ಅವರಿಗಿದ್ದ ಗೌರವ ಭಾವನೆಯನ್ನು ಪ್ರಕಟಪಡಿಸುವುದಕ್ಕೆ ಕಾಣಿಕೆಗಳೂ ಸಾಲುತ್ತಿರಲಿಲ್ಲ: ಏಕೆಂದರೆ, ಅವನೊಳಗಿರುವ ಆತ್ಮ ದಿವ್ಯವಾದುದೆಂದು ಅವರು ನಂಬಿದ್ದರು. ಆದ್ದರಿಂದ ಅವರು ಅವನನ್ನು ಒಬ್ಬ ದೇವತೆಯೆಂದು ಅವರು ಘೋಷಿಸಿದರು. ಅಂದಿನಿಂದ ಅವನನ್ನು 'ಹಾಮಾಗುಚಿ ದೈಮ್ಯೋಜಿನ್' ಎಂದು ಕರೆದರು—ಅದಕ್ಕಿಂತ ಉನ್ನತವಾದ ಗೌರವ ಯಾವುದೂ ಇರದಿದ್ದರಿಂದ. ನಂತರ ಜನರು ತಮ್ಮ ಹಳ್ಳಿಯನ್ನು ಪುನರುಜ್ಜೀವಗೊಳಿಸಿದಾಗ, ಅವನ 'ಆತ್ಮ'ಕ್ಕಾಗಿ ಒಂದು ದೇವಾಲಯವನ್ನು ಕಟ್ಟಿದರು. ಅದರ ಮುಂದಲೆಯಲ್ಲಿ ಸುವರ್ಣಾಕ್ಷರಗಳಲ್ಲಿ ಅವನ ಹೆಸರು ಕೆತ್ತಿಸಿದ ಫಲಕವೊಂದನ್ನು ಜೋಡಿಸಿದರು. ಪ್ರಾರ್ಥನೆ ಹಾಗೂ ಕಾಣಿಕೆಗಳನ್ನು ಸಲ್ಲಿಸಿ ಅಲ್ಲಿ ಅವನನ್ನು ಪೂಜಿಸಿದರು. ಅದರ ಬಗ್ಗೆ ಸ್ವತಃ ಅವನಿಗೇನನ್ನಿಸುತ್ತಿತ್ತೋ ನಾನು ಹೇಳಲಾರೆ. ಕೆಳಗೆ, ಮಂದಿರದಲ್ಲಿ ಅವನ ಆತ್ಮದ ಪೂಜೆ ಸಾಗುತ್ತಿದ್ದಂತೆಯೇ, ಅವನು ಗುಡ್ಡದ ಮೇಲಿನ ತನ್ನ ಪುರಾತನ ಛಾವಣಿಯ ಮನೆಯಲ್ಲಿ, ತನ್ನ ಮಕ್ಕಳು ಮತ್ತು ಮರಿಮಕ್ಕಳ ಜೊತೆ, ಎಂದಿನಂತೆ ಸರಳ ಜೀವನ ನಡೆಸುತ್ತಿದ್ದ ಎಂಬುದು ಮಾತ್ರ ನನಗೆ ಗೊತ್ತು. ಅವನು ಮೃತನಾಗಿ ಎಷ್ಟೋ ನೂರು ವರ್ಷಗಳಾದವು. ಆದರೆ ಅವನ ಮಂದಿರ ಈಗಲೂ ಇದೆ ಎಂದು ಜನ ನನಗೆ ಹೇಳುತ್ತಾರೆ. ಜನರು ಈಗಲೂ ಭಯ ಮತ್ತು ಕಷ್ಟ ಕಾಲದಲ್ಲಿ ಸಹಾಯಕ್ಕಾಗಿ ಆ ಮುದಿ ರೈತನ ಆತ್ಮಕ್ಕೆ ಪ್ರಾರ್ಥನೆ ಸಲ್ಲಿಸುತ್ತಾರೆಂದೂ ನಾನು ಕೇಳುತ್ತಿರುತ್ತೇನೆ. ✡



**ಆತ್ಮವೊಂದು ಹೇಗೆ ಸ್ಪಂದಿಸುತ್ತದೆ, ತುಡಿಯುತ್ತದೆ, ಮರುಕದಿಂದ ಮಿಡಿಯುತ್ತದೆ ಎಂಬುದೇ ಅದರ ಶ್ರೀಮಂತಿಕೆಯ ಅಳತೆಗೋಲು.**

**–ವಿಲಿಯಂ ಕಾನ್ಸೆವಿಲೆ ಅಲ್ಲರ್**

# ಟೆಲಿಫೋನ್ ಮೂಲಕ 'ಎಕ್ಸ್-ರೇ' ಚಿತ್ರಗಳ ಸಾಗಾಟ

ಜಿ. ಎ. ಶಶಿಧರ

ಈಗಿರುವ ಟೆಲಿಫೋನ್ ಜಾಲದ ಮೂಲಕವೇ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ 'ಎಕ್ಸ್-ರೇ' ಮತ್ತು ದೇಹದ 'ಸ್ಕ್ಯಾನರ್'ಗಳ ಮೂಲಕ ಪಡೆದ ಚಿತ್ರಗಳನ್ನು ರವಾನಿಸಲಾಗುತ್ತದೆ! ಜೊತೆಗೆ, ಸಾಮಾನ್ಯ ಡಯಲಿಂಗ್ ಲೈನ್‌ಗಳನ್ನು ಬಳಸುವುದರಿಂದ ಪ್ರಪಂಚದೆಲ್ಲೆಡೆಗೆ ಈ ಚಿತ್ರಗಳನ್ನು ಸಾಗಿಸಬಹುದು! ಈ ವ್ಯವಸ್ಥೆಗೆ 'ಇಂಪ್ಯಾಕ್ಸ್' ಎಂದು ಹೆಸರು. ನೈಋತ್ಯ ಇಂಗ್ಲೆಂಡಿನಲ್ಲಿ ಈ ಸಲಕರಣೆಯು ಕಾರ್ಯಕ್ಷಮತೆಯನ್ನು ಪ್ರಯೋಗ ಮಾಡಿ ತೋರಿಸಲಾಗಿದೆ.

ದೂರ ಪ್ರದೇಶದಲ್ಲಿರುವ ಕನ್‌ಸಲ್ಟೆಂಟ್‌ರವರಿಂದ ಎಕ್ಸ್‌ರೇ– ಚಿತ್ರವೊಂದರ ಬಗ್ಗೆ ಅಭಿಪ್ರಾಯ ತಿಳಿದುಕೊಳ್ಳಬೇಕಾದಾಗ ಈ ಮೇಲ್ಕಂಡ ವ್ಯವಸ್ಥೆ ಉಪಯೋಗಕ್ಕೆ ಬರುತ್ತದೆ.

ರಸ್ತೆ, ರೈಲು ಮತ್ತಿತರ ವಾಹನ ಸೌಲಭ್ಯಗಳ ಮೂಲಕ ಎಕ್ಸ್-ರೇ ಚಿತ್ರಗಳನ್ನು ಈ ತಜ್ಞ ಕನ್‌ಸಲ್‌ಟೆಂಟ್‌ರವರಿಗೆ ಕಳುಹಿಸಿ ಅವರಿಂದ ಅಭಿಪ್ರಾಯ ಪಡೆಯಬೇಕೆಂದರೆ ಅನೇಕ ಗಂಟೆಗಳು, ದಿನಗಳೇ ಬೇಕಾಗಬಹುದು. ಆದರೆ ಈ ಇಂಪ್ಯಾಕ್ಸ್ ಸಹಾಯದಿಂದ ಕನ್‌ಸಲ್‌ಟೆಂಟ್‌ರನ್ನು ಸಂಪರ್ಕಿಸಿ, ಎಕ್ಸ್-ರೇ. ಚಿತ್ರಗಳನ್ನು 'ಇಂಪ್ಯಾಕ್ಸ್'ನ್ನು ಅಳವಡಿಸಿದ ಟೆಲಿಫೋನಿನ ಬಳಿ, ಆ ಕನ್‌ಸಲ್ಟೆಂಟ್ ಇರಬೇಕಾಗುತ್ತದೆ, ಅಷ್ಟೆ. ಈ ವ್ಯವಸ್ಥೆ ಗಂಭೀರ ರೂಪದ ಆಸ್ಪತ್ರೆಗಳಲ್ಲಿ ಅಮೂಲ್ಯದ್ದಾಗಿ ಪರಿಣಮಿಸಿದೆ. ಪ್ರೇಷಿಸುವ ಜಾಗದಲ್ಲಿ, ಎಕ್ಸ್-ರೇ ಚಿತ್ರದತ್ತ ತಿರುಗಿರುವ ಟೆಲಿವಿಜನ್ ಕ್ಯಾಮರಾಕ್ಕೆ, ಇಂಪ್ಯಾಕ್ಸ್‌ನ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ. ಅಥವಾ ನೇರವಾಗಿ ದೇಹದ ಸ್ಕ್ಯಾನರ್‌ಗೇ ಇದನ್ನು ಸಂಪರ್ಕಿಸಬಹುದು. ಈ ಎಕ್ಸ್-ರೇ ತಲುಪುವ ಜಾಗದಲ್ಲಿನ ಟೆಲಿಫೋನಿನ ಬಳಿ ಟಿ. ವಿ. ಪರದೆ ಇದ್ದು, ಅಲ್ಲಿ ಈ ಎಕ್ಸ್-ರೇ ಚಿತ್ರ ಪುನಃ ಸೃಷ್ಟಿಯಾಗುತ್ತದೆ.

ಇಂಪ್ಯಾಕ್ಸ್‌ನಲ್ಲಿ, ಕೈಯಲ್ಲಿ ಹೊತ್ತೊಯ್ಯಲು ಸುಲಭವಾದ 'ಪ್ರೇಷಕ— ರಿಸೀವರ್' ಇರುತ್ತದೆ; ಇದನ್ನು ಸ್ಟ್ಯಾಂಡರ್ಡ್ ಟೆಲಿಫೋನ್ ಸಾಕೆಟ್ಟಿಗೆ ಪ್ಲಗ್ ಮಾಡಲಾಗುತ್ತದೆ. ಎಕ್ಸ್-ರೇ ಚಿತ್ರಗಳನ್ನು ಪ್ರೇಷಿಸುವ ಸ್ಥಳದಲ್ಲಿ, ದೃಶ್ಯ ಚಿತ್ರವನ್ನು, ಶಬ್ದ ಸಂಜ್ಞೆಗಳಾಗಿ ಪರಿವರ್ತಿಸಲಾಗುತ್ತದೆ. ಸಾಮಾನ್ಯ ರೀತಿಯಲ್ಲಿ ಈ ಶಬ್ದ ಸಂಜ್ಞೆಗಳು ಟೆಲಿಫೋನ್ ಲೈನಿನಲ್ಲಿ ಸಾಗಿಸಲ್ಪಡುತ್ತವೆ. ಈ ಶಬ್ದ ಸಂಜ್ಞೆಗಳು ತಲುಪುವ ಜಾಗದಲ್ಲಿ, ಅರ್ಥಾತ್ ಕನ್‌ಸಲ್ಟೆಂಟ್ ಇರುವ ಜಾಗದಲ್ಲಿ, ಈ ಶಬ್ದ ಸಂಜ್ಞೆಗಳು ಮತ್ತೆ ದೃಶ್ಯ ಚಿತ್ರವಾಗಿ ಪರದೆಯ ಮೇಲೆ ಮೂಡುತ್ತವೆ. ಈ ಶಬ್ದ ಸಂಜ್ಞೆಗಳು ಮತ್ತೆ ದೃಶ್ಯ ಚಿತ್ರಗಳಾಗುವುದಕ್ಕೆ ತೆಗೆದುಕೊಳ್ಳುವ ಕಾಲ ೩೦ ಸೆಕೆಂಡುಗಳು.

ಬ್ರಿಟಿಶ್ ಟೆಲಿಕಾಮ್ಸ್‌ನ ಸ್ವಂತ ಕಾರ್ಖಾನೆಯಲ್ಲಿ ಇಂಪ್ಯಾಕ್ಸ್‌ನ್ನು ತಯಾರಿಸಲಾಗುತ್ತದೆ. ನೈಋತ್ಯ ಇಂಗ್ಲೆಂಡಿನಲ್ಲಿ ಈ ಇಂಪ್ಯಾಕ್ಸ್‌ನ ಒಂಬತ್ತು ಘಟಕಗಳು ಈಗ ಕಾರ್ಯನಿರತವಾಗಿವೆ. ಕೆಲವನ್ನು ಅಮೇರಿಕ ಸಂಯುಕ್ತ ಸಂಸ್ಥಾನಕ್ಕೆ ಕಳುಹಿಸಲಾಗಿದೆ.

('ಸ್ಪೆಕ್ಟ್ರಮ್' ಬ್ರಿಟೀಷ್ ವಿಜ್ಞಾನ ವಾರ್ತೆಯಿಂದ ಸಂಗ್ರಹಿತ)

# ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲು

ವಿ. ಎಸ್. ನಾರಾಯಣರಾವ್

ಕಸ್ತೂರಿಯ ಈ ಸಲದ ವಿಶೇಷ ಸಂಚಿಕೆ (ಸಪ್ಟೆಂಬರ್ ೮೬) ಯಲ್ಲಿ 'ಜಾಮಿ ಗ್ರೀಸನ ಚಿತ್ರ ವೃತ್ತಾಂತ'ದಲ್ಲಿ "ದೇಶದ ಇತಿಹಾಸದಲ್ಲಿ ೧೮೫೭ರಲ್ಲಿ ನಡೆದ ಸಿಪಾಯಿ ದಂಗೆ ಮೊಟ್ಟ ಮೊದಲ ಸ್ವಾತಂತ್ರ್ಯ ಸಂಗ್ರಾಮ"ವೆಂದು ಹೇಳಿದ್ದಾರೆ. ವೀರ ಸಾವರಕರರಂಥವರೂ ಇದೇ ಮೊದಲ ಸ್ವಾತಂತ್ರ್ಯ ಸಂಗ್ರಾಮ ಎಂದಿದ್ದಾರೆ! ಆದರೆ ಇದು ನಮ್ಮಲ್ಲಿ ಆಳವಾಗಿ ಬೇರೂರಿದ ತಪ್ಪು ತಿಳುವಳಿಕೆ. ಇದಕ್ಕೂ ಮೊದಲು ಬ್ರಿಟಿಶರನ್ನು ಭಾರತದಿಂದ ಓಡಿಸುವ ಅನೇಕ ಪ್ರಯತ್ನಗಳು ನಡೆದದ್ದುಂಟು. ಆದರೆ ೧೮೫೭ರ ಸಿಪಾಯಿ ದಂಗೆಗೇ ಹೆಚ್ಚು ಮಹತ್ವ ಸಿಕ್ಕಿದೆಯೇ ವಿನಾ ಅದಕ್ಕೆ ಪೂರ್ವಭಾವಿಯಾಗಿ ದಕ್ಷಿಣ ಭಾರತದಲ್ಲಿ ನಡೆದ ಸಂಗ್ರಾಮಗಳ ವಿವರಗಳು ಅಷ್ಟಾಗಿ ಸಿಕ್ಕುವದಿಲ್ಲ. *

ವೆಲ್ಲೂರು (೧೮೦೬), ಮದರಾಸು (೧೮೦೯), ಬರೇಲಿ, (೧೮೧೬), ಕಿತ್ತೂರು (೧೮೨೪ ಮತ್ತು ೧೮೩೦), ಬಂಗಾಲ (೧೮೩೧), ಪುಣೆ (೧೮೨೬-೨೭), ಬಿಹಾರ (ಕೋಲಿ ಆದಿವಾಸಿಗಳಿಂದ–೧೮೩೧–೩೨) ದೊಡ್ಡ ಪ್ರಮಾಣದಲ್ಲಿ ಬ್ರಿಟಿಶರ ವಿರುದ್ಧ ದಂಗೆಗಳಾದದ್ದುಂಟು. ಬ್ರಿಟಿಶರು ಈ ದಂಗೆಗಳನ್ನಡಗಿಸಲು ಐದು ಸಾವಿರ ಚದರ ಮೈಲು ಪ್ರದೇಶವನ್ನು ನಾಶ ಮಾಡಿದರಲ್ಲದೆ ೧೮೪೪ರಲ್ಲಿ ಮರಾಠರ ಬಂಡಾಯವನ್ನು ಹತ್ತಿಕ್ಕಲು ೧೦ ಸಾವಿರ ಸಿಪಾಯಿಗಳನ್ನು ಬಳಸಿದರು.

ಬ್ರಿಟಿಶರು ಇನ್ನಷ್ಟು ಪ್ರಬಲರಾಗುವುದರೊಳಗಾಗಿ ಅವರನ್ನು ಬಲಹೀನರನ್ನಾಗಿಸುವುದು ಅಗತ್ಯವೆಂದು ತಮಿಳುನಾಡಿನ ಮರುಡು ಪಾಂಡ್ಯ ಎಂಬ ಶ್ರೀಸಾಮಾನ್ಯ ಜನನಾಯಕನಾಗಿ ನಿಂತು ದೂತರನ್ನು ಸಂಸ್ಥಾನದ ನಾನಾ ಭಾಗಗಳಿಗೆ ಕಳುಹಿಸಿ ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುವಂತೆ ಕರೆ ಕೊಟ್ಟ. ಆತನೆ ಪಾಳೆಗಾರರ ನಾಯಕನಾಗಿ ಅಪ್ರತಿಮ ಸಾಹಸ ಪ್ರದರ್ಶಿಸಿದ ವೀರ ಪಾಂಡ್ಯ ಕಟ್ಟ ಬೊಮ್ಮನ್.

೧೭೯೯ರ ಮೇ ಹೊತ್ತಿಗೆ ಬ್ರಿಟಿಶರು ಮೈಸೂರಿನ ಟಿಪ್ಪುವನ್ನು ಸಂಪೂರ್ಣವಾಗಿ ಪರಾಭವಗೊಳಿಸಿದ್ದರು.

ಗವರ್ನರ್ ಜನರಲ್ ಲಾರ್ಡ್ ವೆಲ್ಲಸ್ಲಿ ಮದರಾಸಿನ ಗವರ್ನರ್ ಲಾರ್ಡ್ ಮಾರ್ನಿಂಗ್‌ಟನ್ನನಿಗೆ ದಕ್ಷಿಣ ಭಾರತದ ದಂಗೆಯನ್ನು ಅಡಗಿಸಲು ಎಲ್ಲ

* ಐ ಬಿ ಎಚ್ ಪ್ರಕಾಶನ ಸಂಸ್ಥೆ ಪ್ರಕಟಿಸಿದ 'ಭಾರತದ ಸ್ವಾತಂತ್ರ್ಯ ಸಂಗ್ರಾಮ' (ವಿ. ಎಸ್. ನಾರಾಯಣರಾವ್) ಈ ಕುರಿತು ವಿವರಗಳನ್ನು ನೀಡುತ್ತದೆ.

ರೀತಿಯ ಬಲ ಪ್ರಯೋಗ ಮಾಡುವಂತೆ ಆಜ್ಞಾಪಿಸಿದ. ತಿರುನಲ್‌ವೇಲಿಯ ಪಂಜಲಕುರಿಚ್ಚಿಯ ಮಣ್ಣಿನ ಕೋಟೆಗೆ ೧೭೯೯ರ ಸೆಪ್ಟೆಂಬರ್ ೫ ರಂದು ಜನರಲ್ ಬ್ಯಾನರ್‌ಮನ್ನನ ಸೇನೆ ಮುತ್ತಿಗೆ ಹಾಕಿತು. ಕೋಟೆಯ ರಕ್ಷಣೆಗೆ ಕೇವಲ ೧೫೦೦ ಜನ ಇದ್ದರು. ಮೂಕನೊಬ್ಬನ ಊಮೈತ್ತುರೈ ಎಂಬುವನ ನಾಯಕತ್ವದಲ್ಲಿ ವೀರಾವೇಶದಿಂದ ಶತ್ರು ಸೇನೆಯನ್ನು ಎದುರಿಸಿ ಆ ಸೈನಿಕರು ಮುತ್ತಿಗೆಗಳನ್ನು ವಿಫಲಗೊಳಿಸಿದರು. ಕೋಟೆಯನ್ನು ರಕ್ಷಿಸುವುದು ಅಸಾಧ್ಯವಾದಾಗ ಪಾಳೆಯಗಾರರ ಸೈನಿಕರು ಕದನ ಗೈಯುತ್ತ ಸಾಗಿದರು. ಕೋಲಾರಪಟ್ಟಿಯ ಬಳಿ ಶತ್ರು ಸೇನೆಯೊಂದಿಗೆ ಘೋರ ಕದನ ನಡೆಯಿತು. ಬೊಮ್ಮನ್ನನ ಕಡೆಯ ಹಲವರು ಹತರಾದರು. ವೀರ ಪಾಂಡ್ಯ ಕಟ್ಟಬೊಮ್ಮನ್ ಅರಣ್ಯದಲ್ಲಿ ಆಶ್ರಯ ಪಡೆದ. ಪುದುಕೋಟೆಯ ವಿಜಯ ರಘುನಾಥ ತೊಂಡಮಾನ್ ಎಂಬಾತ ಕಟ್ಟಬೊಮ್ಮನ್ನನನ್ನು ಸೆರೆ ಹಿಡಿದು ಬ್ರಿಟಿಶರಿಗೆ ಒಪ್ಪಿಸಿದ. ಸೆಪ್ಟೆಂಬರ್ ೧೩ ರಂದು ನಾಗಲಾಪುರದ ಸುಂದರ ಪಾಂಡ್ಯ ಹಾಗೂ ಶಿವಸುಬ್ರಮಣ್ಯ ಪಿಳ್ಳೆಯವರ ಶಿರಚ್ಛೇದನ ಮಾಡಲಾಯಿತು. ಪಿಳ್ಳೆಯ ರುಂಡವನ್ನು ಪಂಜಲಕುರಿಚ್ಚಿಯ ಬೀದಿಗಳಲ್ಲಿ ಮೆರವಣಿಗೆ ಮಾಡಿ ಭೀತಿ ಹುಟ್ಟಿಸಲಾಯಿತು. ವೀರ ಪಾಂಡ್ಯನನ್ನು ಅಕ್ಟೋಬರ್ ೧೭ ರಂದು ಗಲ್ಲಿಗೇರಿಸಲಾಯಿತು. ಈ ಯುದ್ಧದಲ್ಲಿ ೬೦೦ ಜನ ಹೋರಾಟಗಾರರು ಸತ್ತರು. ಒಟ್ಟು ೧೦೫೦ ದೇಶಪ್ರೇಮಿಗಳು ಈ ಅಸಮಾನ ಅಸದೃಶ ಹೋರಾಟದಲ್ಲಿ ಅಸು ನೀಗಿದರು. ಶತ್ರು ವಶರಾದ ಯೋಧರನ್ನು ಗಲ್ಲಿಗೇರಿಸಲಾಯಿತು.

ಕ್ರಾಂತಿಯನ್ನು ಮೂಲೋತ್ಪಾಟನ ಮಾಡಲು ಹಾಗೂ ಆಂದೋಲನ ಮತ್ತೆ ತಲೆ ಎತ್ತದಂತೆ ಮಾಡಲು ಬ್ರಿಟಿಶ್ ಸರಕಾರ ಕೋಟೆಗಳನ್ನೂ ಬುರುಜಗಳನ್ನೂ ನೆಲ ಸಮಮಾಡಿತಲ್ಲದೆ ಕಾಡುಗಳನ್ನೂ ಫಲವತ್ತಾದ ಪ್ರದೇಶಗಳನ್ನೂ ಸುಟ್ಟು ಬೂದಿ ಮಾಡಿತು. ಶಸ್ತ್ರಾಸ್ತ್ರಗಳ ತಯಾರಿಕೆ ಮತ್ತು ಆಮದನ್ನು ತಡೆಗಟ್ಟಿತು. ಎಲ್ಲರನ್ನೂ ಶಸ್ತ್ರರಹಿತರಾಗಿ ಮಾಡಲಾಯಿತು. ಮಲಬಾರಿನ ಕಾಜಿಕೋಟೆಯಿಂದ ಶ್ರೀರಂಗಪಟ್ಟಣದ ವರೆಗಿನ ರಸ್ತೆಯನ್ನು ಸರಿಪಡಿಸಲಾಯಿತು.

ಪಂಜಲಕುರಿಚ್ಚಿಯನ್ನು ನಾಮಾವಶೇಷವಾಗಿಸಲು, ಆ ಹೆಸರನ್ನು ಎಲ್ಲ ದಾಖಲೆಗಳಿಂದ ಕಿತ್ತು ಹಾಕಲಾಯಿತು. ಕಾರ್ಥೇಜಿನಲ್ಲಿ ರೋಮನ್ನರು ಮಾಡಿದಂತೆ ಪಂಜಲಕುರಿಚ್ಚಿ ಕೋಟೆಯನ್ನು ಸಂಪೂರ್ಣವಾಗಿ ನಾಶಮಾಡಲಾಯಿತು.

ಮರಣದಂಡನೆಗೆ ಗುರಿಯಾಗಿದ್ದ ೭೩ ಜನ ಕ್ರಾಂತಿಕಾರರಿಗೆ ಗಡಿಪಾರು ಶಿಕ್ಷೆಯನ್ನು ವಿಧಿಸಲಾಯಿತು. ೧೮೦೨ರ ಫೆಬ್ರುವರಿಯಲ್ಲಿ ಇವರೆಲ್ಲರನ್ನೂ ಕೈ ಕಾಲುಗಳಿಗೆ ಬೇಡಿ ಹಾಕಿ ತುತ್ತುಕುಡಿ ಬಂದರಿಗೆ ಕರೆತರಲಾಯಿತು. ಇವರಲ್ಲಿ ಮರುಡುಪಾಂಡ್ಯನ ೧೫ ವರ್ಷಗಳ ಮುಗ್ಧ ಮಗನೂ ಒಬ್ಬ.

ಈ ಜನರನ್ನು ಹೊತ್ತುಕೊಂಡು ೧೮೦೨ರ ಫೆಬ್ರುವರಿ ೧೧ ರಂದು 'ಅಡ್ಮಿರಲ್ ನೆಲ್ಸನ್' ಎಂಬ ಹಡಗು ಮಲಯದ ಪ್ರಿನ್ಸ್ ಆಫ್ ವೇಲ್ಸ್ ದ್ವೀಪದತ್ತ ಹೊರಟಿತು. ಹಡಗು ದ್ವೀಪವನ್ನು ಮುಟ್ಟಲು ೭೩ ದಿನಗಳು ಹಿಡಿದವು. ಕೈದಿಗಳ ಬೇಡಿ ತೆಗೆಯಲಿಲ್ಲ. ಕುಡಿಯಲೂ ನೀರಿಲ್ಲ. ದ್ವೀಪದ ಹವಾ ಗುಣಕ್ಕೆ ಒಗ್ಗಿಕೊಳ್ಳಲಾಗದೆ ಹೋರಾಟಗಾರರು ಜ್ವರಪೀಡಿತರಾಗಿ ಸತ್ತರು.

ಮಲಬಾರ್ ಮತ್ತು ತಮಿಳು ನಾಡಿನ ಕ್ರಾಂತಿಯನ್ನು ಅಡಗಿಸಲು ಬ್ರಿಟಿಶರು ಅಪಾರ ಹಣ ವೆಚ್ಚ ಮಾಡಿದರು. ಈ ವೆಚ್ಚವನ್ನು ಭರಿಸಲು ಭೂಕಂದಾಯವನ್ನು ದ್ವಿಗುಣಗೊಳಿಸಿದರು.

೧೮೦೨ರ ಅಕ್ಟೋಬರ್ ತಿಂಗಳಲ್ಲಿ ಪನಮರಮ್ ಠಾಣೆಯ ಮೇಲೆ ಎಡಿತ್ತಾರ ಕುಂಜನ್ ಎರಗಿದ. ಕ್ಯಾಪ್ಟನ್ ಡಿಕನ್‌ಸನ್ನನ ಅಧೀನದಲ್ಲಿದ್ದ ೭೦ ಸಿಪಾಯಿಗಳನ್ನು ಕೊಂದು ಠಾಣೆಯನ್ನು ವಶಪಡಿಸಿಕೊಂಡ. ರವಿವರ್ಮನಂತಹ ಮಲಬಾರಿನ ನಾಯಕರು ಮತ್ತೆ ದಂಗೆ ಎದ್ದು ಹಲವಾರು

ಕೇಂದ್ರಗಳನ್ನು ವಶಪಡಿಸಿಕೊಂಡರು. ತಾಮರ ಸೇರಿಯ ಕಚೇರಿಯನ್ನು ಸುಟ್ಟರು. ಮುಂಬಯಿಯಿಂದ ಬಂದಿದ್ದ ಸೇನೆ ತೃಪ್ತಿಕರವಾಗಿ ಕರ್ತವ್ಯ ನಿರ್ವಹಿಸುತ್ತಿಲ್ಲವೆಂದು ಅದನ್ನು ಹಿಂದಕ್ಕೆ ಕಳುಹಿಸಿ ಮೈಸೂರು ಮತ್ತು ತಮಿಳುನಾಡಿನಿಂದ ಬೇರೆ ತುಕಡಿಗಳನ್ನು ತರಿಸಿಕೊಂಡು ಆಂದೋಲನಕಾರರ ಮೇಲೆ ಏಕಕಾಲದಲ್ಲಿ ದಾಳಿಮಾಡಿ ಕ್ರಾಂತಿಯನ್ನು ವಿಫಲಗೊಳಿಸಲಾಯಿತು.

ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯಲ್ಲಿ ಜನಿಸಿದ ಧೋಂಡೋಜಿ ವಾಘ್ ಟಿಪ್ಪುವಿನ ಅಶ್ವದಳವನ್ನು ಸೇರಿಕೊಂಡ. ಶ್ರೀರಂಗಪಟ್ಟಣದ ಪತನಾನಂತರ ಚದುರಿ ಹೋದ ಸೈನಿಕರನ್ನು ಸಂಘಟಿಸಿ ೫೦೦೦ ಕುದುರೆಗಳ ದಳವನ್ನು ರಚಿಸಿದ. ಬೇಲೂರು, ಮಂಜರಾಬಾದು, ರಾಯದುರ್ಗ, ಆನೆಗುಂದಿ ಮತ್ತು ತಮಿಳುನಾಡಿನ ಶಿವಗಂಗೆ, ಮಧುರೆ, ವಿರೂಪಾಕ್ಷಿಗಳ ನಾಯಕನಾಗಿದ್ದ ಮರುಡು ಪಾಂಡ್ಯನ್ ಜತೆ ಸಂಪರ್ಕ ಬೆಳೆಸಿದ. ಮಲಬಾರಿನ ಕೇರಳವರ್ಮನೊಡನೆ ಸ್ನೇಹ ಸಂಬಂಧ ಬೆಳೆಸಿದ. ಮೈಸೂರಿನ ಮುಸಲ್ಮಾನರು ಇವನ ಬೆಂಬಲಿಗರಾಗಿದ್ದರು. ಪಶ್ಚಿಮ ಘಟ್ಟದ ಬ್ರಿಟಿಶರ ಕೋಠಿಗಳನ್ನು ಕೊಳ್ಳೆಹೊಡೆದು, ಶಸ್ತ್ರಗಳನ್ನು ಸಂಗ್ರಹಿಸಿ, ಆದರಿಂದ ಫಿರಂಗಿದಳ ರಚಿಸಿದ. ನಿಜಾಮನಿಗೆ ಸೇರಿದ್ದ ಗೂಟಿಯನ್ನು ಇವನ ಸೇನೆ ವಶಪಡಿಸಿಕೊಂಡಿತು.

ಬೆಳೆಯುತ್ತಿದ್ದ - ಇವನ ಪ್ರಭಾವವನ್ನು ಮುರಿಯಲು ಆರ್ಥರ್ ವೆಲ್ಲಸ್ಲಿ ಮತ್ತು ಇತರ ದಳ ನಾಯಕರು, ಬಂಗಾಲ ಮತ್ತು ಮೈಸೂರಿನಿಂದ ಬಲವಾದ ಸೇನಾಪಡೆಗಳೊಡನೆ ಬಂದು, ನಗರದಿಂದ ನೆರವು ಪಡೆಯದಂತೆ ಧೋಂಡೋಜಿಯ ಸೇನೆಗಳನ್ನು ತಡೆಗಟ್ಟಿದರು. ವಾಘ್ ಚಿತ್ರದುರ್ಗವನ್ನು ವಶಕ್ಕೆ ತೆಗೆದುಕೊಂಡ. ಬ್ರಿಟಿಶ್ ಸೇನೆ ಗೂಡಲೂರು, ಬಿಂಗೇರಿಗಳನ್ನು ವಶಪಡಿಸಿಕೊಂಡಿತು. ಬಂಡಾಯಗಾರರ ಕಡೆ ಅನೇಕರು ಸತ್ತರು. ಸಲವತ್ತು ಬಂಡಾಯಗಾರರನ್ನು ಗಲ್ಲಿಗೇರಿಸಲಾಯಿತು.

ಬ್ರಿಟಿಶರ ಪಡೆಗಳು ತುಂಗಭದ್ರೆಯನ್ನು ದಾಟಿ ಶಿವಮೊಗ್ಗ, ಹಾರನಹಳ್ಳಿಗಳನ್ನು ವಶಕ್ಕೆ ತೆಗೆದುಕೊಂಡವು. ಬಂಡಾಯಗಾರರಲ್ಲಿ ಬಹು ಜನ ತಪ್ಪಿಸಿಕೊಂಡು ಓಡಿದರು. ಶಿಕಾರಿಪುರದ ಕೋಟೆಯ ಮೇಲೆ ಬ್ರಿಟಿಶ್ ಸೇನೆ ೧೮೦೦ರ ಅಗಸ್ಟ್ ೧೭ ರಂದು ದಾಳಿಮಾಡಿತು. ಬಂಡಾಯಗಾರರು ಅತಿ ಧೈರ್ಯದಿಂದ ಹೋರಾಡಿದರೂ ಪ್ರಯೋಜನವಾಗಲಿಲ್ಲ. ಧೋಂಡೋಜಿ ಆಪ್ತ ಅನುಯಾಯಿಗಳೊಡನೆ ಮಹಾರಾಷ್ಟ್ರಕ್ಕೆ ಓಡಿದ. ಆದರೆ ಇವನ ದುರ್ದೈವಕ್ಕೆ ಮಿತ್ರರೇ ಶತ್ರುಗಳಾದರು. ಪೇಶ್ವೆಗಳ ಒಂದು ತುಕಡಿಯೊಡನೆ ಗೋಕುಲಪಂತ, ಧೋಂಡೋಜಿಯ ಶಿಬಿರದ ಮೇಲೆ ಅನಿರೀಕ್ಷಿತ ದಾಳಿ ಮಾಡಿ ಆನೆ, ಕುದುರೆ, ಒಂಟೆ, ಎತ್ತು, ತೋಪು, ಮದ್ದು ಗುಂಡುಗಳ ಸಂಗ್ರಹವನ್ನು ವಶಪಡಿಸಿಕೊಂಡ.

ಪರಾಜಿತನಾದ ಧೋಂಡೋಜಿ, ಉಮಾಜಿ ಮೊದಲಿಯಾರ್‌ರೊಡನೆ ಕೊಲ್ಲಾಪುರಕ್ಕೆ ಹೋಗಿ ಆಶ್ರಯ ಪಡೆದ. ನಾಲ್ವರು ಮುಸಲ್ಮಾನರು ಮತ್ತು ಹಿಂದೂಗಳನ್ನೊಳಗೊಂಡ ತಂಡವನ್ನಾತ ವಿರೂಪಾಕ್ಷಿಗೆ ಕಳುಹಿಸಿದ. ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರದ ಆಂದೋಲನಕಾರರನ್ನು ಒಟ್ಟುಗೂಡಿಸುವುದೇ ಅವನ ಉದ್ದೇಶವಾಗಿತ್ತು.

ಉತ್ತರ ಭಾಗದಲ್ಲಿ ವಾಘ್, ದಕ್ಷಿಣದಲ್ಲಿ ಮರುಡು ಪಾಂಡ್ಯನ್, ಕೊಲ್ಲಾಪುರ, ಆನೆಗುಂದಿ ಸೋಲಾಪುರ, ರಾಯದುರ್ಗ, ದೌಲತ್‌ರಾವ್ ಸಿಂಧ್ಯ ಈ ವಿಭಾಗಗಳ ಅರಸರು ಧೋಂಡೋಜಿಗೆ ನೆರವುನೀಡುವ ಭರವಸೆ ಇತ್ತರು. ನಿಜಾಮನ ಗಡಿ ಪ್ರದೇಶದ ಸರದಾರರೂ ಸಕಾಲದಲ್ಲಿ ಸಹಾಯಕ್ಕೆ ಬರುವುದಾಗಿ ತಿಳಿಸಿದರು.

"ಆಂಗ್ಲರನ್ನು ದೇಶದಿಂದ ಸಂಪೂರ್ಣವಾಗಿ ಹೊರಗಟ್ಟದಿದ್ದರೆ ಭಾರತ ಸ್ವತಂತ್ರವಾಗಲಾರದು. ನೇರವಾಗಿ ಅವರೊಡನೆ ಯುದ್ಧ ಮಾಡುವುದು ಬುದ್ಧಿವಂತಿಕೆ ಅಲ್ಲ. ಸಮಯ ನೋಡಿ ಹೋರಾಟ ನಡೆಸಬೇಕು. ದೇಶೀಯ

ರಾಜರು ದೇಶದ್ರೋಹಿಗಳಾಗಿ ಬ್ರಿಟಿಷರ ಬೆಂಬಲಿಗರಾಗಿರುವುದು ದುರದೃಷ್ಟಕರ. ಇವನ್ನೆಲ್ಲ ಅರಿತು ಹೋರಾಟ ನಡೆಸಬೇಕು" ಎಂದು ಈ ಎಲ್ಲ ನಾಯಕರು ತೀರ್ಮಾನಿಸಿದರು.

ಮಲಬಾರಿನ ನಾಯಕತ್ವವನ್ನು ಕೇರಳವರ್ಮ, ಕನ್ನಡ ನಾಡಿನ ವಿಭಾಗದ ಮುಂದಾಳತ್ವವನ್ನು ಗೋಪಾಲ ನಾಯಕ ಮತ್ತು ಖಾಜೀಖಾನ್; ತಮಿಳುನಾಡಿನ ವಿಭಾಗಕ್ಕೆ ಮರುದು ಪಾಂಡ್ಯನ್. ಇವರೆಲ್ಲರಿಗೂ ನಿರ್ದಿಷ್ಟ ಜವಾಬ್ದಾರಿಯನ್ನು ವಹಿಸಲಾಗಿತ್ತು. ವೇಲೂರು ಮತ್ತು ತಾರಾಮಂಡಲಗಳಲ್ಲಿ ಶಸ್ತ್ರ ತಯಾರಿಸುವ ಕಾರ್ಖಾನೆಗಳ ಸ್ಥಾಪನೆಯಾಯಿತು. ಕಿಳಿಯುರ್ ಕೋವಿಲ್ ಕಾಡಿನಲ್ಲಿ ಶಸ್ತ್ರಾಸ್ತ್ರಗಳನ್ನು ಗುಂಡಿ ತೋಡಿ ಹುದುಗಿಸಲಾಗಿತ್ತು. ವಿದೇಶಗಳಿಂದಲೂ ಸಾಧ್ಯವಾದಷ್ಟು ಶಸ್ತ್ರಗಳನ್ನು ಆಮದು ಮಾಡಿಕೊಳ್ಳಲಾಯಿತು. ಹಳ್ಳಿಯ ಸುತ್ತ ಕಂದಕಗಳನ್ನು ತೋಡಲಾಯಿತು. ಗ್ರಾಮಗಳ ಪ್ರಮುಖರು ಆಹಾರ, ದವಸ ಧಾನ್ಯ, ಧನಸಹಾಯ ನೀಡಲು ಮುಂದಾದರು. ಕಂಪನಿ ಸರಕಾರ ಗೊತ್ತು ಮಾಡಿದ್ದ ಐದನೇ ಒಂದು ಭಾಗದಷ್ಟು ಕಂದಾಯವನ್ನು ಬಂಡಾಯಗಾರರಿಗೆ ಕೊಡಲು ಗ್ರಾಮದ ನಾಯಕರು ಒಪ್ಪಿಕೊಂಡರು.

ಕೊಯಮತ್ತೂರಿನ ಸುತ್ತಮುತ್ತಲ ಪ್ರದೇಶದಲ್ಲಿ ಹೋರಾಟಗಾರರು ತಮ್ಮ ಪಡೆಗಳನ್ನು ಸಿದ್ಧಿಸಿ ೧೮೦೦ರ ಜೂನ್ ಮೂರರಂದು ಕೊಯಮತ್ತೂರಿನಲ್ಲಿದ್ದ ಆಂಗ್ಲರ ಸೇನೆಯ ಮೇಲೆರಗಲು ನಿಶ್ಚಯಿಸಿದರು. ಮೊಹರಂ ಹಬ್ಬದ ಕಡೆಯದಿನ, ಹಿಂದಿನ ಮೂರು ದಿನಗಳ ಜಾಗರಣೆ ಮತ್ತು ಅಂದು ಹಬ್ಬದ ಊಟ ಉಂಡು, ಸಿಪಾಯಿಗಳು ಯುದ್ಧ ಮಾಡುವ ಸ್ಥಿತಿಯಲ್ಲಿ ಇಲ್ಲದಿದ್ದಾಗ ಅವರ ಮೇಲೆ ದಾಳಿ ಮಾಡಲು ನಿಶ್ಚಯಿಸಲಾಗಿತ್ತು. ಆದರೆ ಈ ಸುದ್ದಿಯನ್ನು ಫಿತೂರಿಗಾರರಿಂದ ತಿಳಿದು ಮದರಾಸಿನ ಗವರ್ನರ್ ಮಾರ್ನಿಂಗ್ಟನ್, ಬೆಲ್ಲಂ ಪ್ರದೇಶದ ಮೇಲೆ ಮಾರ್ಚ್ ೩೧ರಂದು ಪೂರ್ವಭಾವಿ ದಾಳಿ ಮಾಡುವಂತೆ ಕರ್ನಲ್ ವೆಲ್ಲಸ್ಲಿಗೆ ತಿಳಿಸಿದ. ಅಂತೆಯೇ ಕೃಷ್ಣಪ್ಪ ನಾಯಕನ ಬಲವಾದ ಕೇಂದ್ರದ ಮೇಲೆ ಸಿಪಾಯಿಗಳು ದಾಳಿ ಮಾಡಿದರು. ಆದರೂ ಸಿಪಾಯಿಗಳ ಮೇಲೆ ಹೋರಾಟಗಾರರು ಹಠಾತ್ತನೆ ಏರಿ ಬಂದು ಅವರನ್ನು ದಿಕ್ಕಾಪಾಲಾಗಿ ಚದರಿಸಿದರು. ಬ್ರಿಟಿಶ್ ಸೇನೆ ಸಗ್ಗಲೀಪುರವನ್ನು ಆಕ್ರಮಿಸಿಕೊಂಡಿತು. ಬಂಡಾಯಗಾರರು ಅಧಿಕ ಸಂಖ್ಯೆಯಲ್ಲಿ ಮತ್ತೆ ಸಗ್ಗಲೀಪುರವನ್ನು ಪಡೆಯಲು ಪ್ರಯತ್ನಿಸುವುದನ್ನು ತಿಳಿದು ಕರ್ನಲ್ ಟಾಲ್‌ಫ್ರಿ ಸೇನೆಯನ್ನು ಹಿಂತೆಗೆದುಕೊಂಡ.

ದ್ರೋಹಿಗಳು ಕೊಯಮತ್ತೂರಿನ ಮೇಲೆ ದಾಳಿ ಮಾಡಲು ನಿರ್ಧರಿಸಿದ್ದ ದಿನಾಂಕವನ್ನು ಆಂಗ್ಲ ದಳಪತಿಗೆ ತಿಳಿಸಿದ್ದರಿಂದ, ಕ್ರಾಂತಿಕಾರರ ಪ್ರಯತ್ನವು ವಿಫಲಗೊಂಡಿತು. ನರಸಿಂಗರಾವ್ ಬಾಪುವಿನೊಂದಿಗೆ ಇತರ ಆರು ಜನ ಬಂಡಾಯ ಪ್ರಮುಖರನ್ನು ಬಂಧಿಸಿದರು. ತಲ್ಲಿಮಲ್ಲದ ಹೋರಾಟದಲ್ಲಿ ಹೋರಾಟಗಾರರು ಸೋಲನ್ನನುಭವಿಸಿದರು. ದೇಶಭಕ್ತ ಮಹಮ್ಮದ್ ಹಸನ್, ಶತ್ರುವಿನಿಂದ ಅಪಮಾನಕ್ಕೆ ಈಡಾಗುವುದಕ್ಕಿಂತ ಪ್ರಾಣತ್ಯಾಗವೇ ಲೇಸೆಂದು ತಾನೇ ತನ್ನ ಕತ್ತು ಕುಯ್ದುಕೊಂಡು ಹುತಾತ್ಮನಾದ.

೧೮೦೦ರ ಮೇ ತಿಂಗಳಲ್ಲಿ ಬಂಡಾಯಗಾರರು ರಾಣೆಬೆನ್ನೂರು, ಹಾನಗಲ್, ಮುನವಳ್ಳಿ, ಬನ್ನು, ಚಿನ್ನೂರು ಇವನ್ನು ಸುಲಭವಾಗಿ ವಶಪಡಿಸಿಕೊಂಡರು. ಶೇಕ್ ಹಮೀದ ಡಂಬಳದ ಕೋಟೆ ಹಿಡಿಯಲು ಪ್ರಯತ್ನಿಸಿದ. ಕೋಟೆಯನ್ನು ಭೇದಿಸುವ ಫಿರಂಗಿಗಳು ಅವನಲ್ಲಿರಲಿಲ್ಲ. ಶಸ್ತ್ರಗಳ ಅಭಾವದಿಂದ ಆತನ ಪ್ರಯತ್ನ ಅಸಫಲವಾಯಿತು. ಕೋಟೆಯಲ್ಲಿದ್ದ ಸಿಪಾಯಿಗಳು ಶೇಕ್ ಹಮ್ಮಿದನ ೩೦೦ ಸೈನಿಕರನ್ನು ಕೊಂದರು.

ಆದರೂ ಶೇಕ್ ಹಮೀದ ಹತಾಶನಾಗಲಿಲ್ಲ. ಕೋಟೆಯನ್ನು ಸುತ್ತುವರಿದು ಒಳಗಿದ್ದವರಿಗೆ ಆಹಾರ ಸಾಮಗ್ರಿಗಳು ಒದಗದಂತೆ ದಿಗ್ಬಂಧನ ಹಾಕಿದ. ಕೊನೆಗೆ ಕಿಲ್ಲೇದಾರರು ಶರಣಾದರು.

ಧೋಂಡೋಜಿ ೬೦೦೦ ಕುದುರೆ ಸವಾರರೊಡನೆ ಕೋಟೆಯನ್ನು ಪ್ರವೇಶಿಸಿದ. ವೆಂಕಪ್ಪನಾಯಕ ಕಿಲ್ಲೇದಾರನಾಗಿ ನೇಮಕನಾದ.

ಡಂಬಳ ಕಿಲ್ಲೆಯಿಂದ ಕ್ರಾಂತಿಕಾರರನ್ನು ಓಡಿಸಲು ಪೇಶ್ವೆಯ ತಂಡದ ಅಪ್ಪಾಸಾಹೇಬ ಕಿಲ್ಲೆಯ ಮೇಲೆ ಹಲ್ಲೆ ಮಾಡಿದನಾದರೂ ಆತನ ಪ್ರಯತ್ನ ಫಲಿಸಲಿಲ್ಲ. ಪೇಶ್ವೆಯ ದಳಕ್ಕೆ ಸೇರಿದ ೩೦೦ ಕುದುರೆಗಳನ್ನು ಹೋರಾಟಗಾರರು ವಶಪಡಿಸಿಕೊಂಡರು.

ಧೋಂಡೋಜಿ ಹೋರಾಟದ ಕ್ಷೇತ್ರವನ್ನು ವಿಸ್ತರಿಸತೊಡಗಿದ. ಸೋದೆ, ಸಿರಸಿ ಮೊದಲಾದ ಪಶ್ಚಿಮ ಘಟ್ಟದ ಪ್ರದೇಶಗಳನ್ನು ಕ್ರಾಂತಿಕಾರರು ಕೈವಶ ಮಾಡಿಕೊಂಡರು. ಮಂಗಳೂರಿನಿಂದ ೩೪ ಮೈಲುಗಳ ದೂರದ ಜಮಲಾಬಾದ್ ಕೋಟೆಯನ್ನು ತಮ್ಮಪ್ಪ ನಾಯಕ ವಶಪಡಿಸಿಕೊಂಡ. ಸುಬ್ಬರಾವ್ ಮತ್ತು ಮೆಹತಾಬ್ ಖಾನ್, ವಿಠ್ಠಲ ಹೆಗಡೆ ಇವರು ಪಶ್ಚಿಮ ಘಟ್ಟದ ಸುಬ್ರಮಣ್ಯ ಘಾಟಿಯನ್ನು ಕೈಗೆ ತೆಗೆದುಕೊಂಡು, ಬೇಲೂರು ಮಂಜರಾಬಾದ್—ಮಂಗಳೂರಿನಿಂದ ಜಲಾಲಾಬಾದ್‌ವರೆಗಿನ ಪ್ರದೇಶವನ್ನು ತಮ್ಮ ಹತೋಟಿಗೆ ತೆಗೆದುಕೊಂಡರು.

ಮಲಬಾರಿನ ಮಾಪಿಳ್ಳೆಗಳು ಟಿಪ್ಪು ಸುಲ್ತಾನನ ಮಗ ಫತೆ ಹೈದರನ ಹೆಸರಿನಲ್ಲಿ ಬಂಟ್ವಾಳ, ಉಪ್ಪಿನಂಗಡಿಗಳನ್ನು ಕೊಳ್ಳೆ ಹೊಡೆದು ಪುತ್ತೂರಿನವರೆಗೂ ಸುಬ್ಬರಾಯರ ಅಧೀನದ ಕ್ರಾಂತಿಕಾರರು ಮುಂದುವರೆದರು. ಕೊಡಗಿನ ಪಡೆ ನೀಲೇಶ್ವರ, ಬಾರಕೂರ ಜಿಲ್ಲೆಗಳ ಮೇಲೆ ಹಲ್ಲೆ ಮಾಡಿತು. ಕೇವಲ ದಾಳಿ ಮಾಡುವುದರಲ್ಲೇ ತೃಪ್ತರಾಗದೆ, ಆಡಳಿತ ವ್ಯವಸ್ಥೆಯನ್ನೂ ಜಾರಿಗೆ ತಂದರು. ಹಿರಿಯ ನಾಯಕನನ್ನು ಸಂಡೂರಿನ ಆಡಳಿತಾಧಿಕಾರಿಯಾಗಿ ವಾಘ್ ನೇಮಿಸಿದ. ಸೋದೆ ಮತ್ತು ಮಂಜರಾಬಾದು ನಡುವಿನ ಪ್ರದೇಶವನ್ನು ಆಳುತ್ತಿದ್ದ ವಂಶಸ್ಥನಿಗೆ ವಹಿಸಿಕೊಡಲಾಯಿತು.

ರಾಮನಾಡಿನ ಕ್ರಾಂತಿಕಾರರು ಪಂಡಿಕುಡಿಯಲ್ಲಿ ತಮ್ಮದೇ ಆದ ಕಚೇರಿ ಕಟ್ಟಡ ಕಟ್ಟಿ, ತಹಶೀಲದಾರರನ್ನು ನೇಮಿಸಿ ಆಡಳಿತ ನಡೆಸತೊಡಗಿದರು.

ಕ್ರಾಂತಿಕಾರರ ಸಾಮರ್ಥ್ಯ ದಿನದಿನಕ್ಕೂ ವೃದ್ಧಿಸುತ್ತಿದ್ದುದನ್ನು ಗಮನಿಸಿ, ಆರ್ಥರ್ ವೆಲ್ಲಸ್ಲಿಯು ಗೋವೆ, ಮುಂಬಯಿ, ಸಿಂಹಳ ದ್ವೀಪಗಳಿಂದ ಮತ್ತು ಇಂಗ್ಲೆಂಡಿನಿಂದಲೂ ಸೇನೆಯನ್ನು ತರಾತುರಿಯಾಗಿ ಬರಮಾಡಿಕೊಂಡ. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು, ತಮ್ಮ ಸೇನೆಯನ್ನು ಸಕಲ ಪರಿಕರದೊಂದಿಗೆ ಕಳುಹಿಸಿಕೊಟ್ಟರು. ಸೊಲ್ಲಾಪುರ, ಗದ್ವಾಲ ಸಂಸ್ಥಾನದ ಅರಸರು ಬಂಡಾಯಗಾರರಿಗೆ ನೆರವು




"ಮೊದಲು ಅಲ್ಲಿ ದೀಪ ಹಚ್ಚಿ ಉದ್ಘಾಟಿಸಿ, ನಂತರ ಅದನ್ನು ಹಚ್ಚಿಕೊಳ್ಳಬಹುದು.!"

ನೀಡಬಾರದೆಂದು ಹೈದರಾಬಾದಿನ ನಿಜಾಮ ಆಜ್ಞಾಪಿಸಿದ್ದ. ಆದರೆ ಈ ಅಧೀನ ನಾಯಕರು ನಿಜಾಮನ ಆಜ್ಞೆಗೆ ಕಿವಿಗೊಡಲಿಲ್ಲ. ಆದರೆ ಪೇಶ್ವೆಯ ಒಂದು ತುಕಡಿಯ ಸೇನಾಧಿಕಾರಿ ಬಾಲಕೃಷ್ಣ ಪಂತ್, ದೇಶದ ಹಿತ ಕಡೆಗಣಿಸಿ, ಬ್ರಿಟಿಶರಿಗೆ ನೆರವು ನೀಡಲು ತನ್ನ ತುಕಡಿಯೊಡನೆ ಬ್ರಿಟಿಶರನ್ನು ಹರಿಹರದ ಬಳಿ ಕೂಡಿಕೊಂಡ.

ಹಿರಿಕಾರರು, ಗುಪ್ತಚಾರರು ನಾನಾ ಪ್ರದೇಶಗಳಲ್ಲಿ ಸಂಚರಿಸಿ ವೆಲ್ಲೆಸ್ಲಿಗೆ ಒಪ್ಪಿಸಿದ ಗುಪ್ತವರದಿಯಂತೆ, ಧೋಂಡೋಜಿಯ ಸೇನೆಯಲ್ಲಿ ೫೦,೦೦೦ ಉತ್ತಮ ಕುದುರೆಗಳು, ೪೦,೦೦೦ ಸಾಮಾನ್ಯ ಕುದುರೆಗಳು, ೧೪,೦೦೦ ತುಪಾಕಿ ಪಡೆ, ೧೧,೦೦೦ ಕತ್ತಿ, ಗುರಾಣಿ, ಈಟಿಗಳ ಪಡೆ, ೬೦,೦೦೦ ಬೆಂಜಾರಿಗಳು ಇದ್ದರು. ನಾಲ್ಕು ಸಣ್ಣ ತೋಪುಗಳು, ಐದು ಆನೆಗಳು, ಆಹಾರ ಸಾಮಗ್ರಿಗಳನ್ನು ಸಾಗಿಸುವ ಹೊಣೆ ಬೆಂಜಾರಿಗಳದು. ಹನ್ನೆರಡು ಚದರ ಮೈಲು ವಿಸ್ತಾರ ಪ್ರದೇಶದಲ್ಲಿ ಡಂಬಳ ಕೋಟೆಯ ಬಳಿ ಈ ಭಾರಿ ಸೇನೆ ಬೀಡು ಬಿಟ್ಟಿತ್ತು. ಆಹಾರ, ಮೇವು ಇವುಗಳಿಗೆ ಸೂಕ್ತ ವ್ಯವಸ್ಥೆ ಮಾಡಲಾಗಿತ್ತು. ಕೊರತೆ ಇದ್ದುದು ತುಪಾಕಿ ಮತ್ತು ಮದ್ದುಗುಂಡುಗಳದು. ೧೦,೦೦೦ ಅಶ್ವದಳದ ಅಮೀರ ರಾತ್ರಿ ಹಗಲು ಶಿಬಿರವನ್ನು ಕಾಯುತ್ತಿದ್ದ. ಹಿರಿಕಾರರ ಎರಡನೆಯ ಗುಪ್ತವರದಿಯಂತೆ ಧೋಂಡೋಜಿಯ ಸೇನಾಬಲ ಇಷ್ಟು ಅಧಿಕವಾಗಿರಲಿಲ್ಲ. ಸ್ವಲ್ಪ ಕಡಿಮೆ ಇತ್ತು.

ವೆಲ್ಲೆಸ್ಲಿ ನಡೆಸಿದ ಹೋರಾಟದ ವಿವರಣೆ ಅನವಶ್ಯಕ. ಸ್ವಾತಂತ್ರ್ಯಪ್ರಿಯ ವೀರರು ಪ್ರಾಣದ-ದಾಸೆ ತೊರೆದು ವೀರಾವೇಶದಿಂದ ಹೋರಾಡಿ ಮಡಿದರು. ಧೀರ ಧೋಂಡೋಜಿ ವಾಘ್ ಸುತ್ತುವರಿಯಲ್ಪಟ್ಟ ಸೇನೆಯೊಂದಿಗೆ ಕಾದಾಡುತ್ತ, ಟಿಪ್ಪುಸುಲ್ತಾನನಂತೆ ಹೋರಾಡುತ್ತಲೆ ವೀರ ಸ್ವರ್ಗ ಅಪ್ಪಿದ. ಆಗ ಅವನ ವಯಸ್ಸು ೬೦ ವರ್ಷಗಳು.

೧೮೨೪ ರಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ನಡೆದ ಕದನ ವಿಖ್ಯಾತವಾಗಿದೆ. ಸುರಪುರದ ವೆಂಕಟಪ್ಪ ನಾಯಕ, ಮುಂಡರಗಿ ಭೀಮರಾಯ, ಕೊಡಗಿನ ಅಪರಂಪಾರ ಸ್ವಾಮಿ ಇವರು ನಡೆಸಿದ ಹೋರಾಟ ಚರಿತ್ರಾರ್ಹವಾದವು.

ಮಲಬಾರಿನ ಕೇರಳವರ್ಮ ೧೭೮೬ರಲ್ಲಿ ಟಿಪ್ಪುವಿನ ನೆರವು ಪಡೆದು, ಕ್ಯಾಪ್ಟನ್ ಜೇಮ್ಸ್‌ನ ಸೇನೆಯ ಮೇಲೆ ಮಾನಂತೋಡಿಯ ಬಳಿ ಎರಗಿ ಅವನನ್ನು ಪರಾಭವಗೊಳಿಸಿದ. ಮೇಜರ್ ಕ್ಯಾಮರೂನ್‌ನ ೧೧೦೦೦ ಸಿಪಾಯಿಗಳ ತಂಡದೊಡನೆ ಹೋರಾಡಿ ನೂರಾರು ಬ್ರಿಟಿಶ್ ಸೈನಿಕರನ್ನು ಕೊಂದ. ಮೇಜರ್ ಕ್ಯಾಮರೂನ್ ಈ ಯುದ್ಧದಲ್ಲಿ ಮಡಿದ. ೧೮೦೦ ರ ಎಪ್ರಿಲಿನಲ್ಲಿ ಬೆಲ್ಲಂ ಪ್ರಾಂತದ ಕೃಷ್ಣಪ್ಪ ನಾಯಕ ಕ್ರಾಂತಿಕಾರರ ನೆರವಿನಿಂದ ಬ್ರಿಟಿಶ್ ಪಡೆಗಳ ಮೇಲೆರಗಿ ಅದನ್ನು ಧೂಳೀಪಟ ಮಾಡಿದ. ಧೋಂಡೋ-ಜಿಯ ಭಾರೀ ಸೈನ್ಯ ಒಂದು ಕಡೆ ಕೇಂದ್ರೀಕರಿಸಿ ಹೋರಾಟ ನಡೆಸುವ ಕ್ರಮ ಕೈಗೊಂಡರೆ, ಜನಪ್ರಿಯ ಕೇರಳವರ್ಮ ವ್ಯಾಪಕವಾಗಿ ಮಲಬಾರಿನ ನಾನಾ ಕಡೆಗಳಲ್ಲಿ ಏಕಕಾಲದಲ್ಲಿ ದಂಗೆ ಏಳುವಂತೆ ಮಾಡಿದ್ದ. ಆಹಾರ, ದಿನಸಿ ಧಾನ್ಯ ಇತ್ಯಾದಿಗಳನ್ನು ಬಂಡಾಯಗಾರರಿಗೆ, ಚಳುವಳಿಗಾರರಿಗೆ ಒದಗಿಸುವವರಿಗೆ ಮರಣ ದಂಡನೆ ವಿಧಿಸುವುದಾಗಿ ೧೮೦೦ ರ ಅಕ್ಟೋಬರ್ ಮೂರರಂದು ಕಂಪನಿ ಸರಕಾರ ಆಜ್ಞೆ ಹೊರಡಿಸಿತು. ಆದರೂ ವರ್ತಕರು ಈ ಆಜ್ಞೆಯನ್ನು ತೃಣೀಕರಿಸಿ ಹೋರಾಟಗಾರರಿಗೆ ಸಹಾಯ ಮಾಡುತ್ತಿದ್ದರು.

ಡಿಸೆಂಬರ್ ೨೧ ರಂದು ಶ್ರೀರಂಗಪಟ್ಟಣದಿಂದ ಅತಿ ಬಲಿಶಾಲಿಯಾದ ಸೇನೆ ಕರ್ನಲ್ ಸ್ಟೀವನ್‌ಸನ್‌ನ ನಾಯಕತ್ವದಲ್ಲಿ ಹೊರಟಿತು. ದ್ರೋಹಿಯಾದ ಎಮಾನ್ ನಾಯರ್ ಸ್ಟೀವನ್‌ಸನ್ ಸೇನೆಯೊಡನೆಕೂಡಿಕೊಂಡ. ಇನ್ನೊಂದು ಸೇನಾಪಡೆ ಕರ್ನಲ್ ಬೋಲ್ಸ್‌ನ ನಾಯಕತ್ವದಲ್ಲಿ ಕಾಕನಕೋಟೆ ಮತ್ತು ಮಾನಂತಾಡಿ ಕೇಂದ್ರಗಳನ್ನು ವಶಪಡಿಸಿಕೊಳ್ಳಲು ಹೊರಟಿತು. ಇದನ್ನು ವಶಪಡಿಸಿಕೊಳ್ಳಲು ಕರ್ನಲ್ ಬೋಲ್ಸ್ ಮಾಡಿದ ಪ್ರಯತ್ನ

ವಿಫಲಗೊಂಡಿತು. ಇರಕೂರನ್ನು ವಶಪಡಿಸಿಕೊಳ್ಳಲು ಮೇಜರ್ ಬೀಯರ್ಡ್, ಕರ್ನಲ್ ಸಾಂಟೋರಿಯಸ್ಸರು ಪ್ರಯತ್ನಿಸಿದಾಗ ಚಟ್ಟಪ್ಪನ್ ನಂಬಿಯಾರಿನ ಕ್ರಾಂತಿಕಾರರು ವೀರಾವೇಶದಿಂದ ಹೋರಾಡಿ ಪ್ರಯತ್ನ ಫಲಿಸದಂತೆ ಮಾಡಿದರು. ಕರ್ನಲ್ ಸಾಂಟೋರಿಯಸ್, ಸ್ಟೀವನ್‌ಸನ್ ಇವರನ್ನು ಹೊಡೆದೋಡಿಸಿದರು. ಕೇರಳ ವರ್ಮನನ್ನು ಹಿಡಿದು ಕೊಟ್ಟವರಿಗೆ ೧೦,೦೦೦ ರೂಪಾಯಿ ಕೊಡುವುದಾಗಿ ಸರಕಾರ ಪ್ರಕಟಿಸಿತು.

ಮಳೆಗಾಲ ಮುಗಿಯುತ್ತಲೇ ಬ್ರಿಟಿಶರು, ಕ್ರಾಂತಿಕಾರರನ್ನು ಸದೆಬಡಿಯುವ ಪ್ರಯತ್ನವನ್ನು ಮತ್ತೆ ಮುಂದುವರೆಸಿತು. ರಾಷ್ಟ್ರದ್ರೋಹಿಗಳಾದ ನಾಯರುಗಳು ಬ್ರಿಟಿಶರ ನೆರವಿಗೆ ನಿಂತರು. ೧೮೦೧ ಜುಲೈ ೨೮ ರಂದು ಇಬ್ಬಕ್ಕೂರಿನಲ್ಲಿ ಚಟ್ಟಪ್ಪನ್ ನಂಬಿಯಾರ್, ಜೋಯಿಸ ಚಂದು ಇವರನ್ನು ಗಲ್ಲಿಗೇರಿಸಲಾಯಿತು. ನವೆಂಬರ್ ೨೦ರಂದು ರಹಮಾನ್, ಕಳ್ಳುಚಾಮು ಕುಂಜಪ್ಪನ್, ಕಣ್ಣಮಚೇರಿ ನಂಬಿಯಾರ್ ಮತ್ತು ಅವನ ೨೪ ವಯಸ್ಸಿನ ಮಗ ಮರಣ ದಂಡನೆಗೆ ಗುರಿಯಾದರು. ತನ್ನ ತೋಳಬಲ ಪ್ರದರ್ಶಿಸುವ ಉದ್ದೇಶದಿಂದಲೂ ಭಯ ಹುಟ್ಟಿಸಲೂ ಕ್ಯಾಪ್ಟನ್ ಟೇಲರ್, ಎಲ್ಲರ ಸಮ್ಮುಖದಲ್ಲಿ ಆ ತರುಣನ ರುಂಡವನ್ನು ಮುಂಡದಿಂದ ಬೇರ್ಪಡಿಸಿದ. ಅತ್ಯಂತ ಭೀಕರ ದಬ್ಬಾಳಿಕೆಯಿಂದ ಮತ್ತು ದೇಶದ್ರೋಹಿಗಳ ನೆರವಿನಿಂದ ಮಲಬಾರಿನ ಕ್ರಾಂತಿಯನ್ನು ಬ್ರಿಟಿಶರು ಹತ್ತಿಕ್ಕಿದರು.

ಬ್ರಿಟಿಶರ ವಿರುದ್ಧದ ಹೋರಾಟ ಇಷ್ಟಕ್ಕೇ ಅಂತ್ಯಗೊಳ್ಳಲಿಲ್ಲ. ಭಾರತಾದ್ಯಂತ ೧೮೫೭ ರ ವರೆಗೆ ಅಲ್ಲಲ್ಲಿ ಹೋರಾಟಗಳು ನಡೆಯುತ್ತಲೇ ಇದ್ದವು. ಬಿಹಾರ, ಒರಿಸ್ಸಾ, ಛೋಟಾ ನಾಗಪುರ, ಅಸ್ಸಾಂ ಈ ದುರ್ಗಮ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಖಾಸಿ, ಚೌರಾಸ್, ರಾಜಮಹಲ್ ಸಂತಾಲರು, ಅಹೋಂ ಮೊದಲಾದ ಹಿಂದುಳಿದ ಪಂಗಡಗಳು, ಅಕ್ರಮ ಅನೀತಿ ವ್ಯವಹಾರ ತಡೆಯಲಾರದೆ ಬಿಲ್ಲು ಬಾಣ ಹಿಡಿದು ಹೋರಾಡಿದರು. ೧೮೦೪ ರಲ್ಲಿ ವೈಕಾಗುಳ ಜಗಬಂಧು ಬಂಗಾಲದ ಬನಪುರವನ್ನು ವಶಪಡಿಸಿಕೊಂಡು ೧೮೨೫ರಲ್ಲಿ ಬ್ರಿಟಿಶರಿಗೆ ಶರಣಾಗತನಾದ. ೧೭೭೦ ರಲ್ಲಿ ಬಂಗಾಳ ಭಯಂಕರ ಬರದಿಂದ ತತ್ತರಿಸುತ್ತಿದ್ದಾಗ ೫೦,೦೦೦ ಸಂನ್ಯಾಸಿಗಳೂ ಫಕೀರರೂ ದವಸಧಾನ್ಯಗಳನ್ನು ಕೊಳ್ಳೆಹೊಡೆದು ಬಡವರಿಗೆ ಹಂಚುತ್ತಿದ್ದರು. ೫೦ ವರ್ಷ ಕಾಲ ಇವರ ಹಾವಳಿಯನ್ನು ಅಡಗಿಸಲು ಬ್ರಿಟಿಶರಿಗೆ ಸಾಧ್ಯವಾಗಲಿಲ್ಲ. ದೂರದೃಷ್ಟಿಯಿಲ್ಲದ ಮರಾಠರು ವೀರ ರಜಪೂತರನ್ನು ಬಲಿಸಿಕೊಂಡು ಬ್ರಿಟಿಶರ ವಿರುದ್ಧ ಹೋರಾಡದೇ ರಜಪೂತರ ಮೇಲೆಯೇ ಯುದ್ಧ ಮಾಡಿದರು. ೧೮೫೦ ರಿಂದ ೧೮೬೨ರ ವರೆಗೆ ಇಸ್ಲಾಂ ಮತಾಂಧರ ತಂಡವನ್ನು ನಾಶಪಡಿಸಲು ಬ್ರಿಟಿಶ್ ಸೇನೆ ಇಪ್ಪತ್ತು ಸಲ ಪ್ರಯತ್ನ ನಡೆಸಿತು. ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ಗ್ರಹಿಸದೆ, ಪ್ರತ್ಯೇಕವಾಗಿ ಹೋರಾಡಿ ನಾನಾ ಪಂಗಡಗಳು ಸೋಲು ಅನುಭವಿಸಿದವು. ಆದರೆ ಈ ಪಂಗಡಗಳು, ವ್ಯಕ್ತಿಗಳು, ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ್ದು ಐತಿಹಾಸಿಕ ಸತ್ಯ. ✡



**ಒಳ್ಳೆಯ ಸ್ಮರಣಶಕ್ತಿ ಕ್ಷುಲ್ಲಕವಾದುದನ್ನು ಮರೆಯುವ ಸ್ವಭಾವವನ್ನು ಮೈಗೂಡಿಸಿಕೊಂಡಿರುತ್ತದೆ.**

**–ಕ್ಲಿಫ್ಟನ್ ಫ್ಯಾಡಿಮನ್**



# ಖುದೀರಾಮ ಬೋಸ್

ಸುರೇಶ ಮೂನ

ಬಿಹಾರದ ಮುಜಫರ್‌ಪುರದ ಸರೈಯಾ-ಗಂಜ್ ಬಳಿಯಿರುವ ಕಚೇರಿ ಕಂಪೌಂಡಿನಲ್ಲಿ ಯುವಕನೊಬ್ಬನ ಎದೆಯ ಮಟ್ಟದ ಕಂಚಿನ ಪ್ರತಿಮೆಯೊಂದನ್ನು ಸ್ಥಾಪಿಸಲಾಗಿದೆ. ಕ್ರಾಂತಿಕಾರಿ ಯುವಕ ಖುದೀರಾಮ ಬೋಸನ ಪ್ರತಿಮೆ ಇದು. ಈ ಪ್ರತಿಮೆ ಈತ ಬಹಳ ಹಿಂದೆ ಇದೇ ಜಾಗದಲ್ಲಿ ನಡೆಸಿದ ಸಾಹಸ ಕೃತ್ಯ-ವೊಂದನ್ನು ನೆನಪಿಗೆ ತಂದುಕೊಡುತ್ತದೆ.

ಖುದೀರಾಮ ಬೋಸ್ ೧೮೮೯ರ ಡಿಸೆಂಬರ್ ೩ ರಂದು ಬಂಗಾಳದ ಬಡ ಕುಟುಂಬವೊಂದರಲ್ಲಿ ಜನಿಸಿದ. ಈತನ ತಂದೆ ತ್ರೈಲೋಕ್ಯನಾಥ ಬಸು ಮತ್ತು ತಾಯಿ ಲಕ್ಷ್ಮೀಪ್ರಿಯದೇವಿ. ಮಗನಿಗೆ ಉತ್ತಮ ವಿದ್ಯಾಭ್ಯಾಸ ಕೊಡಿಸುವುದು ಕಠಿಣವಾಗಿದ್ದರೂ ಅವನನ್ನು ಕಾಲೇಜಿಯೇಟ್ ಸ್ಕೂಲಿಗೆ ಸೇರಿಸಿದ್ದರು. ಅವನಿಗೆ ಪ್ರಮುಖ ಸಮಾಜ ಸೇವಕರೂ, ಉತ್ತಮ ಶಿಕ್ಷಕರೂ ಆದ ರಾಜನಾರಾಯಣ ಬಸು ಅವರ ಪರಿಚಯ-ವಾದದ್ದು ಅಲ್ಲಿಯೆ.

ಆಗ ಬಂಗಾಲವನ್ನು ವಿಭಜಿಸಿದ್ದರಿಂದ ಪರಿ-ಸ್ಥಿತಿ ವಿಕ್ಷುಬ್ಧವಾಗಿತ್ತು. ವಿದ್ಯಾರ್ಥಿ ಸಮು-ದಾಯ ಸಿಡಿದೆದ್ದಿತ್ತು. ಕ್ರಾಂತಿಯ ಮೂಲಕವೇ ಸ್ವರಾಜ್ಯ ಗಳಿಸಲು ಸಾಧ್ಯ ಎಂದು ಭಾವಿಸಿದ್ದ ಕಾಂಗ್ರೆಸ್ಸಿನ ಕೆಲವು ಕ್ರಾಂತಿಕಾರರು ಅದಕ್ಕಾಗಿ ನಾನಾ ಯೋಜನೆಗಳನ್ನೂ ರೂಪಿಸುತ್ತಿದ್ದರು. ಇದೇ ಸಮಯದಲ್ಲೇ ಅರವಿಂದ ಘೋಷ್ ಹಾಗೂ ಬಾರಿನ್ ಘೋಷರ ಭಾಷಣಗಳಿಂದ ಪ್ರಭಾವಿತನಾಗಿ ಖುದೀರಾಮ ಬೋಸ್ ತನ್ನ ಜೀವನವನ್ನು ಪಣವಿಟ್ಟಾದರೂ ದೇಶಕ್ಕಾಗಿ ಹೋರಾಡಬೇಕೆಂದು ನಿರ್ಧರಿಸಿದ.

ಆಗ ಕಲಕತ್ತದ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟನಾಗಿದ್ದ ಕಿಂಗ್ಸ್‌ಫೋರ್ಡ್‌ನೆಂದರೆ ಸ್ವಾತಂತ್ರ್ಯ ಹೋರಾಟಗಾರರಿಗೆ ಮುನಿಸು. ಅವನು ಹೋರಾಟಗಾರರಿಗೆ ಶಿಕ್ಷೆ ವಿಧಿಸುವು-ದಷ್ಟೇ ಅಲ್ಲ, ಅವರನ್ನು ನ್ಯಾಯಾಲಯದಲ್ಲೇ ಹೊಡೆಯಬೇಕೆಂದೂ ಆಜ್ಞೆ ಮಾಡುತ್ತಿದ್ದ. ಇದು ಖುದೀರಾಮನನ್ನು ರೊಚ್ಚಿಗೆಬ್ಬಿಸಿತು. ಆತ ಕಿಂಗ್ಸ್ ಫೋರ್ಡ್‌ನನ್ನೂ ಮುಗಿಸಿ ಬಿಡಲು ಹಂಚಿಕೆ ಹೂಡಿದ.

ಮುಂದೆ ಕಿಂಗ್ಸ್‌ಫೋರ್ಡ್‌ನನ್ನು ಮುಜ-

( ಈ ಲೇಖನದೊಂದಿಗಿನ ಚಿತ್ರ ಬಿಡಿಸಿದವರು ಶ್ರೀ ಮೋಹನ ವೇರ್ಣೇಕರ )

ಫರ್‌ಪುರಕ್ಕೆ ಜಿಲ್ಲಾ ನ್ಯಾಯಾಧೀಶನೆಂದು ವರ್ಗಾಯಿಸಿದಾಗ ಖುದಿರಾಮ ಇನ್ನೊಬ್ಬ ಕ್ರಾಂತಿಕಾರನೊಂದಿಗೆ ಅಲ್ಲಿಗೆ ಹೊರಟ. ಆದರೆ ಬಂಗಾಲದ ಪೋಲೀಸರಿಗೆ ಇದರ ಸುಳಿವು ದೊರೆತು ಅವರು ಕಿಂಗ್ಸ್‌ಫೋರ್ಡ್‌ನ ರಕ್ಷಣೆಯನ್ನು ಬಲಗೊಳಿಸಿದರು.

ಕಿಂಗ್ಸ್‌ಫೋರ್ಡ್ ದೊಡ್ಡ ಹೂದೋಟವಿದ್ದ ಬಂಗಲೆಯೊಂದರಲ್ಲಿದ್ದ. ಆತ ಬಿಳಿ ಕುದುರೆ ಹೂಡಿದ ಹಸಿರು ಗಾಡಿಯಲ್ಲಿ ಕುಳಿತು ಪ್ರತಿ ದಿನ ಯುರೋಪಿಯನ್ ಕ್ಲಬ್ಬಿಗೆ ಬರುತ್ತಿದ್ದುದನ್ನು ಗಮನಿಸಿದ ಈ ಇಬ್ಬರು ಯುವಕರು ಆತ ಗಾಡಿಯಲ್ಲಿ ಹೊರಟಾಗ ಬಾಂಬ್ ಎಸೆಯಬೇಕೆಂದು ನಿರ್ಧರಿಸಿದರು. ೧೯೦೮ರ ಏಪ್ರಿಲ್ ೩೦ರ ಸಂಜೆ, ಇವರು ಕ್ಲಬ್ಬಿನ ಬಳಿ ಓಡಾಡುವುದನ್ನು ಕಂಡು ಸಂದೇಹಪಟ್ಟ ಪೋಲೀಸರು ಅವರನ್ನು ಅಲ್ಲಿಂದ ಹೊರಟು ಹೋಗುವಂತೆ ಹೇಳಿದರು. ಆದರೆ ಕತ್ತಲಾದ ನಂತರ ಇಬ್ಬರೂ ಯಾರಿಗೂ ಕಾಣದ ಹಾಗೆ ಬಂದು ಕ್ಲಬ್ಬಿನ ಗೇಟಿನ ಬಳಿ ಮರವೊಂದರ ಹಿಂದೆ ಅಡಗಿ ಕುಳಿತರು. ರಾತ್ರಿ ಎಂಟು ಗಂಟೆಯ ವೇಳೆಗೆ ಹಸಿರು ಗಾಡಿ ಬರುತ್ತಿದ್ದಂತೆ ಬಾಂಬ್ ಎಸೆದರು. ಆದರೆ ಅವರ ಊಹೆ ತಪ್ಪಾಗಿತ್ತು. ಕಿಂಗ್ಸ್‌ಫೋರ್ಡ್‌ನ ಗಾಡಿಯಂತೆ ಕಾಣುತ್ತಿದ್ದರೂ ಅದು ವಾಸ್ತವವಾಗಿ ಅವನದಾಗಿರಲಿಲ್ಲ. ಪರಿಣಾಮವಾಗಿ ಒಳಗೆ ಕುಳಿತ ಪ್ಲೀಡರ್ ಪಿಂಗಲ್ ಕೆನೆಡಿ ಎಂಬುವನ ಪತ್ನಿ ಹಾಗೂ ಅವನ ಮಗಳು ತಕ್ಷಣ ಮರಣ ಹೊಂದಿದರು. ಪೋಲೀಸರು ತನಿಖೆ ನಡೆಸಿದಾಗ ಗೇಟಿನ ಬಳಿಯ ಮರದ ಕೆಳಗೆ ಒಂದು ಜೊತೆ ಬೂಟು ಹಾಗೂ ಒಂದು ರುಮಾಲು ದೊರೆತವು. ಹಿಂದಿನ ಸಂಜೆ ಕ್ಲಬ್ಬಿನ ಬಳಿ ಓಡಾಡುತ್ತಿದ್ದ ಇಬ್ಬರು ಯುವಕರದೇ ಈ ಕೆಲಸ ಎಂದು ಪೋಲಿಸರು ಸಂದೇಹಪಟ್ಟು ಕಾರ್ಯಮಗ್ನರಾದರು.



"ಪರಸ್ತ್ರೀಯನ್ನು ಕಂಡಾಗ ಉಂಟಾಗುವ ಕೆಟ್ಟ ಭಾವನೆಗೆ ಪರಿಹಾರವಾಗಿ ಹತ್ತು ಸಲ ನೆತ್ತಿಯಲ್ಲಿ ಶಿಲುಬೆಯನ್ನು ಬರೆಯಬೇಕೆಂದು ನೀವು ಹೇಳಿದ್ದು ಸರಿಯೇ... ಆದರೆ ಫಾದರ್ ಎರಡು ಸಲ ಬರೆಯುವಾಗಲೇ ಅವಳು ಈ ಅವಸ್ಥೆಯುಂಟಾಗುವಂತೆ ಮಾಡಿಬಿಟ್ಟಳು..."

ಈ ಇಬ್ಬರು ಯುವಕರನ್ನು ಹಿಡಿದು ಕೊಟ್ಟವರಿಗೆ ಬಹುಮಾನ ಕೊಡಲಾಗುವುದೆಂದು ಸಾರಲಾಯಿತು. ಎಲ್ಲೆಡೆಯಲ್ಲೂ ಪೋಲೀಸರು ಮುಫ್ತಿಯಲ್ಲಿ ಈ ಯುವಕರಿಗಾಗಿ ಶೋಧಿಸತೊಡಗಿದರು. ಇತ್ತ ಆ ಇಬ್ಬರೂ ಯುವಕರು ಪೋಲಿಸರಿಂದ ತಪ್ಪಿಸಿಕೊಳ್ಳಲು ಬೇರೆ ಬೇರೆ ದಾರಿ ಹಿಡಿದು ಹೊರಟರು. ಖುದೀರಾಮ ಬೋಸ್ ರೇಲ್ವೆ ಹಳಿಯ ಮಾರ್ಗದಲ್ಲಿ ಸುಮಾರು ಇಪ್ಪತ್ತೈದು ಮೈಲಿ ನಡೆದು ವಾಣಿ ಎಂಬ ಹಳ್ಳಿಯನ್ನು ತಲುಪಿದ;

ಮರುದಿನ ಬೆಳಿಗ್ಗೆ ಅವನು ತಿಂಡಿಯಂಗಡಿಯೊಂದರಲ್ಲಿ ತಿಂಡಿ ತಿನ್ನುತ್ತಿದ್ದಾಗ ಬಳಿಯಲ್ಲೇ ಯಾರೋ ದಿನಪತ್ರಿಕೆಯಲ್ಲಿ ಬಾಂಬು ಎಸೆದ ಸುದ್ದಿಯನ್ನು ಜೋರಾಗಿ ಓದುತ್ತಿದ್ದರು.

ಅವರು ಕೆನೆಡಿಯ ಪತ್ನಿ ಹಾಗೂ ಆಕೆಯ ಮಗಳು ಮೃತರಾದರೆಂದು ಓದಿದಾಗ ಖುದೀರಾಮ ತನಗರಿವಿಲ್ಲದಂತೆ ಜೋರಾಗಿ. "ಹಾಗಾದರೆ ಕಿಂಗ್ಸ್‌ಫೋರ್ಡ್ ಸಾಯಲಿಲ್ಲವೆ?" ಎಂದು ಉದ್ಗರಿಸಿದ. ಆಗ ಅಲ್ಲಿಯೇ ಇದ್ದ ಫತೇಸಿಂಗ್, ಶಿವ ಪ್ರಸಾದ ಮಿಶ್ರ ಎಂಬಿಬ್ಬರು ಪೋಲೀಸರು ಕೂಡಲೇ ಖುದೀರಾಮನನ್ನು ಬಂಧಿಸಿ ವಿಶೇಷ ರೇಲೊಂದರಲ್ಲಿ ಅವನನ್ನು ಜಿಲ್ಲಾ ಕೇಂದ್ರಕ್ಕೆ ಕರೆತಂದರು. ಅಲ್ಲಿ ನೆರೆದಿದ್ದವರ ಪೈಕಿ ಹೆಚ್ಚಿನ ಸಂಖ್ಯೆಯ ಜನರು ಅವನನ್ನು ಜಯಕಾರ ಹಾಕಿ ಸ್ವಾಗತಿಸಿದರು. ಪ್ರತಿಯಾಗಿ ಬಿಳಿ ಕುರ್ತಾ ಮತ್ತು ಧೋತರವನ್ನು ಧರಿಸಿದ್ದ ಖುದೀರಾಮ ಧೃತಿಗೆಡದೆ 'ವಂದೇ ಮಾತರಂ' ಎಂದು ಘೋಷಿಸಿದ.

ಇತ್ತ ಅವನ ಸಂಗಾತಿ ಪ್ರಫುಲ್ಲ ಕುಮಾರ ಚಾಕಿ ಸಮಸ್ತಿಪುರಕ್ಕೆ ಬಂದು ಅಲ್ಲಿಯ ರೇಲ್ವೆ ಕಾರ್ಮಿಕ ತ್ರಿಗುಣ ಚರಣ ಘೋಷ್‌ರಲ್ಲಿ ಆಶ್ರಯ ಪಡೆದ. ಆತ ಅವನಿಗೆ ಹೊಸ ಬಟ್ಟೆ ಹಾಗೂ ಮೊಕಾಮ ಎಂಬಲ್ಲಿಗೆ ಹೋಗಲು ರಾತ್ರಿಯ ರೈಲಿನಲ್ಲಿ ಇಂಟರ್‌ಕ್ಲಾಸ್ ಟಿಕೆಟು ತಂದುಕೊಟ್ಟ. ಆದರೆ ಆದೇ ರೈಲ್ವೆ ಬೋಗಿಯಲ್ಲಿ ಪ್ರಯಾಣಿಸುತ್ತಿದ್ದ ಪೋಲೀಸ್ ಇನ್‌ಸ್ಪೆಕ್ಟರ್ ನಂದಲಾಲ ಬ್ಯಾನರ್ಜಿಗೆ ಚಾಕಿಯ ಮೇಲೆ ಗುಮಾನಿ ಬಂದಿತು. ಆತ ಸ್ಟೇಶನ್ನೊಂದರಲ್ಲಿ ಇಳಿದು ಮುಜಫರ್‌ಪುರಕ್ಕೆ ತಂತಿ ಕಳುಹಿಸಿ ಅರೆಸ್ಟ್ ವಾರಂಟನ್ನೂ ತರಿಸಿಕೊಂಡ. ತನ್ನನ್ನು ಬಂಧಿಸಲು ಬರುತ್ತಿದ್ದ ಇನಸ್ಪೆಕ್ಟರನನ್ನು ಕಂಡು ಚಾಕಿ ತಾನು ಅಡಗಿಸಿಟ್ಟುಕೊಂಡಿದ್ದ ಪಿಸ್ತೂಲಿನಿಂದ ಎರಡು ಗುಂಡು ಹಾರಿಸಿದ. ಆದರೆ ಬ್ಯಾನರ್ಜಿ ಅವುಗಳಿಂದ ತಪ್ಪಿಸಿಕೊಂಡ. ಕೊನೆಗೆ ಬಂಧನಕ್ಕಿಂತ ಸಾವೇ ಲೇಸೆಂದು ಭಾವಿಸಿದ ಚಾಕಿ ತನಗೇ ಗುಂಡು ಹಾರಿಸಿಕೊಂಡು ಸತ್ತ. ಖುದೀರಾಮನ ವಿಚಾರಣೆಯ ಕಾಲಕ್ಕೆ ಮುಜಫರ್‌ಪುರದ ಜಿಲ್ಲಾ ನ್ಯಾಯಾಧೀಶ ಎಚ್. ಡಿ. ಓಲ್ಡ್‌ಮನ್ನರಿಗೆ, ಅವನ ಹಸನ್ಮುಖವನ್ನು ಕಂಡು ಆಶ್ಚರ್ಯವಾಯಿತು. ಖುದೀರಾಮ ಯಾವ ಅಳುಕೂ ಇಲ್ಲದೆ ತಾನು ಬಾಂಬ್ ಎಸೆದುದಾಗಿ ಹೇಳಿದ. ೩೦೨ನೇ ಕಲಮಿನ ಅನ್ವಯ ಖುದೀರಾಮನನ್ನು ಹೆಚ್ಚಿನ ವಿಚಾರಣೆಗೆ ಗುರಿಪಡಿಸಲಾಯಿತು. ಇದಕ್ಕಾಗಿ ವಿಶೇಷ ನ್ಯಾಯಾಧೀಶ ಕರ್ನ್‌ಡಫ್ ಎಂಬುವವರನ್ನು ನೇಮಿಸಲಾಯಿತು. ಸರಕಾರದ ಪರ ವಾದಿಸಲು ವಿನೋದ ಮುಜುಮದಾರ್ ಎಂಬುವರು ನೇಮಕಗೊಂಡರು.

ಕಾಲೀದಾಸ ಬಸು ಎಂಬ ಪ್ರಸಿದ್ಧ ವಕೀಲರು ಸತೀಶಚಂದ್ರ ಚಕ್ರವರ್ತಿ, ನಿಪಿಂದ್ರನಾಥ ಲಾಹಿರಿ ಮತ್ತು ಕುಲಕಮಲ ಸೇನ್ ಎಂಬುವವರ ಸಹಾಯದಿಂದ ಆರೋಪಿಯ ಪರವಾಗಿ ವಾದಿಸಿದರು. ವಿಚಾರಣೆ ಐದು ದಿನಗಳ ಕಾಲ ನಡೆಯಿತು. ಕೊನೆಗೆ ಖುದೀರಾಮನಿಗೆ ಮರಣ ದಂಡನೆಯನ್ನು ವಿಧಿಸಲಾಯಿತು. ಶ್ರೇಷ್ಠ ನ್ಯಾಯಾಲಯ ಸಹ ಇದೇ ತೀರ್ಪನ್ನು ಎತ್ತಿಹಿಡಿಯಿತು. ಆಗ ಖುದೀರಾಮನಿಗೆ ಕೇವಲ ಹದಿನೆಂಟು ವರ್ಷ.

೧೯೦೮ ರ ಅಗಸ್ಟ್ ೧೧ ರಂದು ಖುದೀರಾಮನನ್ನು ಗಲ್ಲಿಗೇರಿಸಲು ತೀರ್ಮಾನಿಸಲಾಯಿತು. ಅವನು ತನ್ನ ಉತ್ತರಕ್ರಿಯೆಗಳನ್ನು ನಡೆಸುವಂತೆ ಕಾಲೀದಾಸ ಬಸುರವರಿಗೆ ಕೇಳಿಕೊಂಡ. ಅದಕ್ಕೆ ನ್ಯಾಯಾಧೀಶರೂ ಅನುಮತಿಯಿತ್ತರು. ಗಲ್ಲಿಗೇರಿಸುವ ದಿನ ಬೆಳಿಗ್ಗೆ ಎಂಟು ಗಂಟೆಗೆ ಜೈಲಿನ ಹೊರಗೆ ಅಪಾರ ಜನಸಂದಣಿ ಸೇರಿತ್ತು. ಕೈಯಲ್ಲಿ ಭಗವದ್ಗೀತೆ ಹಿಡಿದಿದ್ದ ಖುದೀರಾಮ ಶಾಂತಚಿತ್ತದಿಂದ ನೇಣುಗಂಬವನ್ನೇರಿದ. ಅಂದು ಭಾರತದ ಮತ್ತೊಂದು ಪ್ರಕಾಶಮಾನವಾದ ದೇಶಭಕ್ತಿಯ ಹಣತೆ ನಂದಿಹೋಯಿತು. ❁



-೯೫-

## ಘೂರ್ಜರರ ಮೂಲ, ಓಗರದ ವಲಸೆ

ಗುರ್ಜರ, ಘೂರ್ಜರ, ಗುಜರಾತ್ ಎಂಬವು ಭಾರತದಲ್ಲಿ ದೇಶವಾಚಕಗಳಾಗಿ, ಸಂಸ್ಕೃತ-ದಲ್ಲಿಯೂ, ದೇಶಭಾಷೆಗಳಲ್ಲಿಯೂ ಎಷ್ಟು ಕಾಲದಿಂದ ಪ್ರಚುರವಾಗಿವೆಯೆಂದರೆ ಈ ಹೆಸರು ದೇಶ್ಯವಾಗಿರಲಿಕ್ಕಿಲ್ಲವೆಂಬ ಸಂಶಯು ಕೂಡ ನಮಗೆ ಬರಲಾರದು. ಆದರೆ ಇತಿಹಾಸಕಾರರೂ ಭಾಷಾಶಾಸ್ತ್ರಿಗಳೂ ಹಾಗೆ ಹೇಳುತ್ತಾರೆ. ಕ್ರಿಸ್ತ ಶಕ ಆರನೇ ಶತಮಾನದಲ್ಲಿ ಮಧ್ಯ ಏಶಿಯದಿಂದ ಭಾರತದೊಳಗೆ ನುಗ್ಗಿ ಬಂದ ಹೂಣ ಜನಾಂಗದ ಕುಲಗಳು ಕಾಶ್ಮೀರ, ಪಂಜಾಬ ಮತ್ತು ಈಗ ಗುಜರಾತ್ ಎನಿಸುವ ಪ್ರಾಂತದವರೆಗೂ ತಮ್ಮ ವಿಜಯದುಂದುಭಿ ಬಾರಿಸಿದವು. ಈ ಹೂಣರಲ್ಲಿ ಒಂದು ಕುಲದ ಹೆಸರು ಖಜರ್ ಎಂದಿತ್ತು. ಅವು ನೆಲೆಯೂರಿದಲ್ಲಿ ತಮ್ಮ ಹೆಸರಿನ ಅಚ್ಚೊತ್ತಿ-ದವು. ಈ "ಖಜರ್" ಏ ಭಾರತದಲ್ಲಿ ಗುಜರ್ ಎಂದು ರೂಪಾಂತರ ಹೊಂದಿದೆ. ಹೀಗೆ ಕಾಶ್ಮೀರ-ದಲ್ಲಿ, ಪಂಜಾಬದಲ್ಲಿ ಕೂಡ ಗುಜರಾತ್ ಎಂಬ ಸ್ಥಳ ಮತ್ತು ಗುಜ್ಜರ್ ಜನಾಂಗಗಳಿವೆ. ಗುಜರಾತ್ ಎಂಬ ಇಡಿ ಪ್ರದೇಶವೇ ಅವರ ಆಳಿಕೆಯ ಚಿಹ್ನೆಯಾದ ಹೆಸರನ್ನು ಹೊಂದಿತು. ಈ ಗುಜ್ಜರ ಅನೇಕ ಶಾಸನಗಳೂ ಗುಜರಾತ್ ಪ್ರದೇಶದಲ್ಲಿ ದೊರಕಿವೆ. ಗುಜ್ಜರು ಪ್ರಾರಂಭದಲ್ಲಿ ತಮ್ಮ ತುರ್ಕಿ ಬುಡಕಟ್ಟಿನ ಭಾಷೆಯನ್ನೂ ವ್ಯಕ್ತಿನಾಮಗಳನ್ನೂ (ಉದಾ :— ನಹಪಾನ, ಕ್ಷಹರಾತ, ದಾಮು-ಜಾದ ಇತ್ಯಾದಿ) ಉಳಿಸಿಕೊಂಡರೂ ಸ್ವಲ್ಪಕಾಲದಲ್ಲೇ ಭಾರತೀಯ ಭಾಷೆ, ವ್ಯಕ್ತಿನಾಮಗಳನ್ನು ಸ್ವೀಕರಿಸಿ ಇಲ್ಲಿಯ ಜನರಾಜಿಯಲ್ಲಿ ಲೀನವಾಗಿ ಹೋದರು.

*

**ಕಾಯಸ್ಥ** ಎಂಬ ಜಾತಿಯೊಂದು ಉತ್ತರ ಭಾರತದಲ್ಲಿ ಪ್ರಬಲವಾಗಿದೆ. ಮಹಾರಾಷ್ಟ್ರದಲ್ಲಿ **ಕಾಯಸ್ಥ ಪ್ರಭು** ಎಂಬ ಜಾತಿಯುಂಟು. ಬಾಬು ರಾಜೇಂದ್ರ ಪ್ರಸಾದರಂಥ ನಾಯಕರನ್ನು ನೀಡಿದ ಈ ಜಾತಿಯ ಹೆಸರು ಯಾಜ್ಞವಲ್ಕ್ಯ ಸ್ಮೃತಿಯಷ್ಟು ಪ್ರಾಚೀನ. ಸರಕಾರಿ ಗುಮಾಸ್ತ, ಕರಣಿಕ ಮತ್ತು ಒಟ್ಟು ದಸ್ತಾವೇಜು, ಲೆಕ್ಕ ಬರವಣಿಗೆ ಪ್ರಧಾನ ಉದ್ಯೋಗವಾದ ಈ ಜಾತಿ ಕ್ಷತ್ರಿಯನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ್ದೆಂದು ಸ್ಮೃತಿಗಳ ಹೇಳಿಕೆಯಿದ್ದರೂ, ಇದೊಂದು ಗೌರವಾರ್ಹ ಮತ್ತು ಆಸ್ತಿ ಪಾಸ್ತಿಯುಳ್ಳ ವರ್ಗವಾಗಿ ಮುಸ್ಲಿಂ ಆಳಿಕೆಯಲ್ಲಿ ಕೂಡ ಕರಣಿಕ ವೃತ್ತಿಯನ್ನು ಮುಂದುವರಿಸಿತ್ತು. ಇಂಥ ಜಾತಿಯ ಹೆಸರು ಮೂಲತಃ ವಿದೇಶಿ ಎನ್ನುವುದಕ್ಕೆ ಸಂಸ್ಕೃತದಲ್ಲಿ ಇದಕ್ಕೆ ಸಮರ್ಪಕ ವ್ಯುತ್ಪತ್ತಿ ಸಿಗದಿರುವುದು ಒಂದು ಕಾರಣ. ಹಳೇ ಪರ್ಶಿಯನ್ ಭಾಷೆಯಲ್ಲಿ ಕ್ಷಾಯಥಿಯ ಎಂದರೆ ರಾಜ. ಈ ಪದ ಉತ್ತರದಿಂದ ಭಾರತದೊಳಗೆ ನುಸುಳಿ ಗೌರವಾರ್ಥಕ ಪದವಾಗಿ ಪ್ರಾಕೃತ ಭಾಷೆಯಲ್ಲಿ ತೇಲುತ್ತಿತ್ತು. ಪ್ರಾಕೃತದಲ್ಲಿ ಅದು ಕಾಯತ್ಥ ಆಗಿತ್ತು. ಸರಕಾರಿ ಲೆಕ್ಕ ಪತ್ರಾಧಿಕಾರಿಗಳು ಅತ್ಯುನ್ನತ ಹುದ್ದೆಯವರಲ್ಲದಿದ್ದರೂ ಇಂದು ಕೂಡ ಜನಸಾಮಾನ್ಯರ ಮಟ್ಟಿಗೆ ಪ್ರಬಲರೇ ಆಗಿರುವಂತೆ ಆಗಲೂ ಇದ್ದರು. ಅವರನ್ನು ಮೆಚ್ಚಿಸಿ-ಕೊಳ್ಳಲು ಜನಸಾಮಾನ್ಯರು ರಾಜ ಎಂಬ ಮೂಲಾರ್ಥದ ಈ ಕಾಯತ್ಥ ಪದದಿಂದ ಸಂಬೋಧಿಸು ತ್ತಿದ್ದಿರಬೇಕು. ಈಗ "ಸಾಹೇಬರೇ" ಅನ್ನುವಂತೆ, ಕೊನೆಗೆ ಅದು ಒಂದು ಜಾತಿಗೇ ತಗಲಿಕೊಂಡಿ-ತೆಂದು ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ. ಬಾಯಲ್ಲಿ ರಾಜರು ಎಂದು ಏರಿಸಿದರೂ ಜನರು ಒಳಗೊಳಗೆ ಈ ವರ್ಗವನ್ನು ದ್ವೇಷಿಸುತ್ತಿದ್ದರು (ಈಗ್ಗೆಯೂ ಅದು ಮುಂದುವರಿದಿದೆಯಲ್ಲ!), ಎಂಬುದಕ್ಕೆ ಸಾಹಿತ್ಯದಲ್ಲಿ ಸಾಕಷ್ಟು ಪುರಾವೆ ಸಿಗುತ್ತದೆ. ಕಾಶ್ಮೀರದ ಕ್ಷೇಮೇಂದ್ರ ಕವಿ ಇವರ ಲಂಚಗುಳಿತನ, ಕೊರಳು ಕೊಯ್ಯುತನ ಮೊದಲಾದವನ್ನು ಉದ್ಘಾಟಿಸಲು ಒಂದು ಚಿಕ್ಕ ಕಾವ್ಯವನ್ನೇ ಬರೆದಿದ್ದಾನೆ! ಅದು ಬೇರೆ ಮಾತು!

**ಅನ್ನ** ಎಂಬುದು ಸಂಸ್ಕೃತ ಶಬ್ದ. ಋಗ್ವೇದದಲ್ಲೇ ಸಿಗುತ್ತದೆ. "ಅತ್ತುಂ ಯೋಗ್ಯಂ ಅನ್ನಂ" ಉಣ್ಣಲು ತಕ್ಕದ್ದು ಅನ್ನ ಎಂದು ನಿಷ್ಪತ್ತಿ. ಇದರ ಬೇರಾದ **ಅದ್** ಧಾತು ಭಾರೋಪ್ಯ ಭಾಷೆಗಳಲ್ಲಿ ಜ್ಞಾತಿ ಪದಗಳನ್ನು ಹೊಂದಿದೆ (ಇಂಗ್ಲೀಷಿನ eat ಅನ್ನು ಉದಾಹರಿಸಬಹುದು). ಆದರೂ **ಅನ್ನ** ಎಂದೊಡನೆ ನಮಗೆ ಹೊಳೆಯುವುದು **ಅಕ್ಕಿಯನ್ನು ಬೇಯಿಸಿದ್ದು** ಎಂದು — ಹೊರತು ಬೇರೆ ಖಾದ್ಯ ಧಾನ್ಯಗಳ ತಯಾರಿಕೆಗಳಲ್ಲ. ಕನ್ನಡಕ್ಕಂತೂ ಇದು ಸಾರ್ವತ್ರಿಕವಾಗಿ ಅನ್ವಯಿಸುತ್ತದೆ. ಬಂಗಾಲಿಯಲ್ಲಿ ಅನ್ನವೆಂದರೆ ಪ್ರಧಾನವಾಗಿ ಅಕ್ಕಿಯದೇ. ಸಂಸ್ಕೃತದಲ್ಲಿ ಕೂಡ ಅನ್ನವೆಂದರೆ ಮುಖ್ಯವಾಗಿ ಅಕ್ಕಿಯ ಅನ್ನವೇ. ಬಂಗಾಲಿಗಳಿಗೆ ಅಕ್ಕಿಯೇ ಮುಖ್ಯ ಆಹಾರವಾದ್ದರಿಂದ ಅವರು ಅದನ್ನೇ ಅನ್ನವೆನ್ನುವುದು ಅರ್ಥವಾಗತಕ್ಕ ಮಾತು. ಜೋಳ ಪ್ರಧಾನವಾಗಿರುವ ಕರ್ನಾಟಕದಲ್ಲಿ ಹೀಗೇಕೆ? ಇದು ಉತ್ತರವಿಲ್ಲದ ಪ್ರಶ್ನೆ. ಸಾಮಾನ್ಯವನ್ನು ವಿಶೇಷಕ್ಕೂ, ವಿಶೇಷವನ್ನು ಸಾಮಾನ್ಯಕ್ಕೂ ಅನ್ವಯಿಸುವ ಪ್ರಕ್ರಿಯೆ ಭಾಷೆಗಳಲ್ಲಿ ಆಕಸ್ಮಿಕವೆಂದೇ ತೋರುತ್ತದೆ.

ಓಗರ ಎಂಬುದು ಅಕ್ಕಿಯ ಅನ್ನವೆಂಬ ಅರ್ಥ ಕೊಡುವ ಇನ್ನೊಂದು ಶಬ್ದ. ತಮಿಳು, ತೆಲುಗುಗಳಲ್ಲಿಯೂ ಜ್ಞಾತಿ ಪದಗಳುಳ್ಳ ಈ ಶಬ್ದ ಕನ್ನಡದಲ್ಲಿ ಈಗ ಸ್ವತಂತ್ರವಾಗಿ ಬಳಕೆಯಲ್ಲಿ ಇಲ್ಲದಿದ್ದರೂ **ಮೇಲೋಗರ** (ಓಗರದ ಮೇಲೆ ಬಡಿಸಿಕೊಳ್ಳುವಂಥಾದ್ದು — ಹುಳಿ, ಪಲ್ಯ ಇತ್ಯಾದಿ), **ಪುಳಿಯೋಗರ** (ಒಂದು ಬಗೆಯ ಕಲಸನ್ನ) ಮೊದಲಾದವುಗಳಲ್ಲಿ ಜೀವಂತವಾಗಿದೆ. ಆರ್ಯಭಾಷೆಯಾದ ಮೈಥಿಲಿಯಲ್ಲಿ ಇದು ಕಾಣಿಸುತ್ತಿದ್ದರೂ ಮೂಲತಃ ಇದು ದ್ರಾವಿಡ ಶಬ್ದವೆಂದು ಭಾವಿಸಲಾಗಿದೆ. ಓಗರ ಶಬ್ದದ ಒಂದು ವಿಶೇಷವೆಂದರೆ ಇದು ಅನೇಕ ಭಾಷೆಗಳಲ್ಲಿ ಕಿಚಡಿ (ಅಕ್ಕಿ ತರಕಾರಿ ಸೇರಿ ಬೇಯಿಸಿದ ಮಿಶ್ರಖಾದ್ಯ) ಎಂಬರ್ಥದಲ್ಲಿ ಬಳಕೆಯಲ್ಲಿರುವುದು. ಬಂಗಾಲಿಯಲ್ಲಿ ಓಗರ ಎಂದರೆ ಅಕ್ಕಿ — ಬೇಳೆ ಸೇರಿಸಿ ಬೇಯಿಸಿದ್ದು, **ಓಗರ ಭಾತ್** ಎಂದರೆ ಅಕ್ಕಿ ತರಕಾರಿ ಸೇರಿಸಿ ಬೇಯಿಸಿದ್ದು. ಓಗರ ಶಬ್ದದ ಬೇರೆ ಬೇರೆ ಪ್ರಯೋಗಗಳನ್ನು ನೋಡಿದರೆ ಅವಕ್ಕೆ ಬೆರಕೆ ಎಂಬರ್ಥವೇ ಪ್ರಧಾನವೆನಿಸುತ್ತದೆ. ಉದಾಹರಣೆಗೆ ಪಂಪನು ಮಿಶ್ರಗಂಧ ಎಂಬರ್ಥದಲ್ಲಿ **ಓಗರಗಂಪು** ಎನ್ನುತ್ತಾನೆ. ಪ್ರಾಕೃತದಲ್ಲಿಯೂ ಕಿಚಡಿಗೆ **ಓಗರಭಟ್ಟಾ** ಎಂಬ ಹೆಸರಿದೆ. ಹಿಂದಿಯಲ್ಲಿ ಇದು ಕಾಣಿಸುವುದಿಲ್ಲ. ಓಗರ ದ್ರಾವಿಡವೇ ಹೌದಾದರೆ ಬಂಗಾಲಿ ಮಿಥಿಲಿ ಭಾಷೆಗೆ ಅದರ ಪ್ರವೇಶದ ವಿವರಣೆಗೆ ಇತಿಹಾಸದ ಆಶ್ರಯ ಪಡೆಯಬಹುದು. ಮಿಥಿಲೆ ಮತ್ತು ಬಂಗಾಲದಲ್ಲಿ ಕನ್ನಡ ಅರಸರ ಆಳಿಕೆ ಸಾಕಷ್ಟು ಕಾಲ ನಡೆದಿತ್ತು. ಸೇನರು ಕರ್ನಾಟಕದ ಸೇನರೆಂದೇ ಖ್ಯಾತರಾಗಿದ್ದರು.

*

ದಡ್ಡ ಎಂದರೆ ಮಂದಮತಿ. ಈ ಶಬ್ದಕ್ಕೆ ಪರಿಷತ್ ಕನ್ನಡ ನಿಘಂಟು ದೂರಗಾಮಿ ನಿಷ್ಪತ್ತಿಯನ್ನು ಕೊಟ್ಟಿಲ್ಲ; ತುಳು ಕೊಡವ ಭಾಷೆಗಳಲ್ಲಿಯೂ ಅದು ಇರುವುದನ್ನು ಸೂಚಿಸಿ ಕೈಬಿಟ್ಟಿದೆ. ಇದು ಪ್ರಾಕೃತದ ಜಡ್ಡದಿಂದ ಬಂತು. ಜಡ್ಡ ಸಂಸ್ಕೃತದ ಜಡದಿಂದಲೂ ಅದು ವೈದಿಕ ಸಂಸ್ಕೃತದ ಜಳ್ಹುವಿನಿಂದಲೂ ಬಂತು. ಅದರಾಚೆಗೆ ಲ್ಯಾಟಿನ್ನಿನಲ್ಲಿ **ಗೇಲು** (gelu) ಕೂಡ ಅದೇ ಕುಳಿನದು. ಇಂಗ್ಲಿಷಿನ ಡಲ್ (dull) ಕೂಡ ದಡ್ಡನಿಗೇ ಸಂಬಂಧಿಸಿರಬಹುದು.

*

**ಕಟಕ** ಎಂದರೆ ಸಂಸ್ಕೃತದಲ್ಲಿ ಸೈನ್ಯ ಶಿಬಿರ, ಸೈನ್ಯ, ರಾಜರ ತಾತ್ಕಾಲಿಕ ನೆಲೆ, ನೆಲೆಬೀಡು. ಕಟಕ ಶಬ್ದವು ಬಳೆ, ಕಡಗ ಇತ್ಯಾದಿ ಅರ್ಥಗಳಲ್ಲಿ ಸಾಕಷ್ಟು ಪ್ರಾಚೀನವಾದರೂ ಸೈನ್ಯ, ಶಿಬಿರ ಎಂಬರ್ಥದಲ್ಲಿ ಕ್ರಿಸ್ತಶಕ ಏಳೆಂಟು ಶತಮಾನಗಳಲ್ಲಿ ತಾನೇ ಬಂತು. ಒರಿಸ್ಸಾದ ರಾಜಧಾನಿ ಕಟಕ ಕೂಡ ಶಿಬಿರ, ನೆಲೆ ಎಂಬರ್ಥದ ಶಬ್ದವೇ. ಕನ್ನಡದಲ್ಲಿಯೂ **ರಾಯಕಟಕಾಚಾರ್ಯ** ಎಂದರೆ ಸೇನಾಪತಿ ಎಂಬ ಅರ್ಥ ಇದೆ. ಈ **ಕಟಕದ** ಮೂಲಕ್ಕೆ ನಾವು ತುರ್ಕಿ ಭಾಷೆಯನ್ನು ಸಮೀಪಿಸಬೇಕೆಂದು ಸುನೀತಿ ಚಟರ್ಜಿ ಮತ. ತುರ್ಕಿ ಭಾಷೆಯಲ್ಲಿ **ಕಟಕ** ಎಂದರೆ ಸೈನ್ಯ ಶಿಬಿರ. ಮುಸ್ಲಿಂ ತುರುಕರ ಸಂಬಂಧ ನಮಗೆ ಹತ್ತನೇ ಶತಕದ ನಂತರದ್ದಾದರೂ ವ್ಯಾಪಾರಾದಿ ಸಂಬಂಧಗಳು ಕ್ರಿ.ಶ. ೫–೬ನೇ ಶತಮಾನದಿಂದಲೇ ಇದ್ದುವೆಂದು ಗಮನಿಸಿದರೆ ಈ ಊಹೆ ಅಸಾಧ್ಯವೆನಿಸುವುದಿಲ್ಲ. **— ಪಾವೆಂ.**

ಹದಿನೈದನೆಯ ಶತಮಾನದ ಶೂರ ಸ್ತ್ರೀ

# ಮೃಗನಯನೆ

**ಮಾಧವ ಮಂಗಳೂರು**

ಗ್ವಾಲಿಯರಿನಿಂದ ಹನ್ನೊಂದು ಮೈಲಿ ದೂರದಲ್ಲಿ ಸಾಂಕೀ ನದಿ ದಡದ ಮೇಲಿನ ಒಂದು ಚಿಕ್ಕ ಹಳ್ಳಿ ರಾಯಿ. ಈ ಹಳ್ಳಿಯಲ್ಲಿ ಗೂಜರಿ ಕುಲದ ಆಟಲನೆಂಬವನೊಬ್ಬ ತನ್ನ ತಂಗಿ ನಿನ್ನಿಯೊಂದಿಗೆ ಗುಡಿಸಲು ಕಟ್ಟಿಕೊಂಡು ವಾಸವಾಗಿದ್ದ. ನಿನ್ನಿ ಬಾಲ್ಯದಿಂದಲೇ ಚುರುಕಾಗಿದ್ದಳು. ಒಳ್ಳೆ ಬಿಲ್ಲುಗಾತಿ. ಇವಳಿಗೆ ಲಾಖಿ ಎಂಬ ಸ್ನೇಹಿತೆ.

ನಿನ್ನಿ ಜೀವದ ಹಂಗನ್ನೂ ತೊರೆದು ರಾಯಿಯ ಕಾಡು ಮೇಡುಗಳಲ್ಲಿ ಕ್ರೂರ ಮೃಗಗಳನ್ನು ಬೇಟೆಯಾಡುತ್ತಿದ್ದಳು. ನಿನ್ನಿಯೊಂದಿಗೆ ಆಕೆಯ ಸ್ನೇಹಿತೆ ಲಾಖಿಯೂ ಕಾಡಿಗೆ ಹೋಗಿ ಮೃಗ ಬೇಟೆ ಕಲಿತಳು. ಅಲ್ಲಿ ವೇಳೆ ದೊರೆತಾಗ, ಮುತ್ತುಗದ ಮರ ಭರ್ಚಿ ಪ್ರಯೋಗದ ಕಣವಾಗುತ್ತಿತ್ತು. ಅದರ ಕಾಂಡ ತುಂಬ ಭರ್ಚಿ ಚುಚ್ಚಿದ ಗುರುತುಗಳು.

ನಿನ್ನಿ ಮಂಡಿಯ ತನಕ ಕಚ್ಚೆ, ಎದೆಗೆ ರವಕೆ, ಕೈಗೆ ಬಳೆ, ಕುತ್ತಿಗೆಯಲ್ಲಿ ಮಣಿ ಸರ ಧರಿಸುತ್ತಿದ್ದಳು. ಬಿಲ್ಲು ಬಾಣ ಮತ್ತು ಭರ್ಚಿ ಅವಳ ಆಯುಧಗಳು. ಮುಖದಲ್ಲಿ ತುಂಬಿದ ಕಾಂತಿಯಲ್ಲಿ ಉತ್ಸಾಹದ ಕಳೆ. ಎಣ್ಣೆ ಕಾಣದ ಈಕೆಯ ನೀಳ ಕೇಶರಾಶಿ ಗಾಳಿಗೆ ಚೆಲ್ಲುತ್ತಿತ್ತು. ಬಿಸಿಲಿನ ಝಳಕ್ಕೆ ಸೆರಗನ್ನು ತಲೆಗೆ ಸುತ್ತುತ್ತಿದ್ದಳು. ಬಾಯಾರಿದಾಗ ನದಿಯ ದಡಕ್ಕಿಳಿದು ಬೊಗಸೆಯಿಂದ ನೀರು ಕುಡಿಯುತ್ತಿದ್ದಳು.

ನಿನ್ನಿ ಕಾಡುಬೆಕ್ಕಿನಂತೆ ಚೂಟಿ. ಅವಳ ಮಿನುಗುವ ಚಂಚಲ ಬೊಗಸೆಗಣ್ಣುಗಳು ಜಿಂಕೆಯ ಮರಿಯ ಕಣ್ಣುಗಳನ್ನು ಹೋಲುತ್ತಿದ್ದವಾದ್ದರಿಂದ ಅವಳು 'ಮೃಗನಯನೆ' ಎಂದೇ ಹೆಸರು ಗಳಿಸಿದಳು. ಎಂಥ ಸೂಕ್ಷ್ಮ ಸದ್ದೂ ಅವಳ ಕಿವಿಗೆ ಬೀಳುತ್ತಿತ್ತು.

ಮೃಗನಯನೆಯ ಅಣ್ಣ ಅಟಲ ಬತ್ತ-ಜೋಳದ ಬೇಸಾಯ ಕೆಲಸಗಳನ್ನೂ ಮಾಡುತ್ತಿದ್ದ. ಅಣ್ಣ ತಂಗಿ ಹೊಲದಲ್ಲಿ ಬೆಳೆದಿದ್ದ ಪೈರು ಪಚ್ಚೆಗಳನ್ನು ಕಾಯುತ್ತಿದ್ದರು. ಲಾಖಿಯೂ ಈ ಕೆಲಸದಲ್ಲಿ ಭಾಗಿಯಾಗುತ್ತಿದ್ದಳು.

ಕಾಡು ಪ್ರಾಣಿಗಳನ್ನು ದೂರಕ್ಕಟ್ಟಿ ಬೆಳೆಯನ್ನು ರಕ್ಷಿಸಲು ಬದುವಿನ ಬದಿಯಲ್ಲಿದ್ದ ಅಟ್ಟಣಿಗೆಯ ಮೇಲೆ ನಿನ್ನಿ, ಲಾಖಿಯರು

ರಾತ್ರಿಯಿಡೀ ಕಾವಲು ಕಾಯುತ್ತಿದ್ದರು. ಹಾಡು ಸಾಹಸಗಳಲ್ಲೇ ಬೆಳಕು ಹರಿಯುತ್ತಿತ್ತು. ಅಕ್ಷರ ಜ್ಞಾನವಿಲ್ಲದಿದ್ದರೂ ನಿನ್ನಿ ಜಾನಪದ ಸುಲಲಿತ. ಜೊತೆಗೆ ಅಟಲನೂ ಇರುತ್ತಿದ್ದ.

ನಿನ್ನಿಗೆ ಪ್ರಕೃತಿ ಸೌಂದರ್ಯ ತುಂಬ ಇಷ್ಟ. ನಾರ ನದಿಯ ತೀರೆಂದರೆ ತುಂಬ ಪ್ರೇಮ. ಪರ್ವತಮಯ ಪ್ರಕೃತಿಯ ಕಗ್ಗಾಡಿನ ಹಸಿರು ಕಾಣುವುದರಲ್ಲೂ ಆನಂದ. ಅಂದವಾದ ಪಕ್ಷಿಗಳ ಕೂಗು. ಪೈರು ಪಚ್ಚೆಗಳು ಗಾಳಿಗೆ ತಮ್ಮ ತಲೆದೂಗುವ ಚಿತ್ರಣವೂ ಆಕೆಗೆ ಮೆಚ್ಚುಗೆ.

“ರಾಯಿ ಗ್ರಾಮದಲ್ಲಿ ನಿನ್ನಿ, ಲಾಖಿ ಎಂಬ ಗೂಜರ ತರುಣಿಯರಿದ್ದಾರೆ. ಕ್ರೂರ ಮೃಗ ಬೇಟೆಯಲ್ಲಿ ಹೆಸರು ಗಳಿಸಿದ್ದಾರೆ. ಕ್ರೂರ ಮೃಗಗಳನ್ನು, ನೆಲದ ಮೇಲೇನೇ ಅವಿತು ನಿಂತು ಬಾಣದಿಂದ ಬೇಟೆಯಾಡುವರು. ಕೋರೆ ದಾಡಿಯ ಹಂದಿಗೂ ಇವರು ಅಂಜುವುದಿಲ್ಲ-ವಂತೆ. ಒಂದೇ ಬಾಣದಿಂದ ಹುಲಿಯನ್ನು ಬೇಟೆ ಯಾಡುವ ಜಾಣಾಕ್ಷ ಹೆಣ್ಣು ನಿನ್ನಿ. ಸಿಕ್ಕಿದ ಮಹಾ ಭಾರದ ಬೇಟೆಯನ್ನು ತನ್ನ ಹೆಗಲ ಮೇಲೇನೇ ಹೊತ್ತು ತರುವ ಶಕ್ತಿಯಿದ್ದವಳಂತೆ” ಎಂದು ಇವಳ ಕೀರ್ತಿ ಸುತ್ತಲೆಲ್ಲ ಹಬ್ಬಿತು.

ಮಾಂಡು, ಮೇವಾಡದ ಚಿತ್ತೂರು, ಗುಜ-ರಾತಿನ ಅಹಮದಾಬಾದು ಮುಂತಾದ ಕಡೆ ಗಳಿಗೂ ನಿನ್ನಿಯ ಶೌರ್ಯದ ಸುದ್ದಿ ಹಬ್ಬಿದಾಗ ಈಕೆ ತನ್ನ ಸೈನ್ಯಕ್ಕೆ ಸರಿ ಹೊಂದಬಹುದು ಎಂದು ಅನೇಕ ರಾಜರು ಹಾಗೂ ಸಾಮಂತರು ಅವಳನ್ನು ಪಡೆಯಲು ಆತುರರಾದರು.

ಮಾಂಡುವಿನ ಸುಲ್ತಾನ ಗಿಯಾಸುದ್ದೀನ್, ನಿನ್ನಿ ಲಾಖಿಯರನ್ನು ತಂದೊಪ್ಪಿಸಿದವರಿಗೆ ಚಿನ್ನ, ನಗದ ಇನಾಮು ಕೊಡುವುದಲ್ಲದೆ ಮಾಂಡುವಿನಲ್ಲಿ ಸುಂದರ ನಿವಾಸವನ್ನೂ ಕಟ್ಟಿಸಿ ಕೊಡುವುದಾಗಿ ಡಂಗುರ ಸಾರಿದ.

ಈ ತರುಣಿಯರನ್ನು ಹಿಡಿದು ತರಲು ಡೊಂಬರನ್ನು ನಿಯಮಿಸಿದ. ರಾಯಿ ಗ್ರಾಮಕ್ಕೆ ಬಂದ ಡೊಂಬರು ವಸ್ತ್ರ ಒಡವೆಗಳ ಆಸೆ ತೋರಿಸಿ ಪುಸಲಾಯಿಸಿ ನಿನ್ನಿ ಮತ್ತು ಲಾಖಿ ಯನ್ನು ಕರೆದೊಯ್ಯಲು ಪ್ರಯತ್ನಿಸಿದರು. ಈ ಮೋಸದ ಜಾಲವನ್ನರಿತ ನಿನ್ನಿ ಲಾಖಿಯರು ಡೊಂಬರನ್ನು ಹೊಡೆದೋಡಿಸಿದರು. ಗಿಯಾ ಸುದ್ದೀನನ ಸಶಸ್ತ್ರ ಸೈನಿಕರು ಕುದುರೆಯ ಮೇಲೆ ಬಂದು ದಾಳಿ ಮಾಡಿದಾಗ ಸೋಲು ಅವರಿಗೆ ಕಟ್ಟಿಟ್ಟ ಬುತ್ತಿಯಾಯಿತು.

ಒಮ್ಮೆ ಸಿಕಂದರ್ ಲೋದಿಯ ಆಕ್ರಮಣ ದಿಂದಾಗಿ ರಾಯಿ ಗ್ರಾಮ ನಾಶವಾಯಿತು. ಜನರು ದಿಕ್ಕಾಪಾಲಾದರು. ಗುಡಿಯೂ ನಾಶ ವಾಯಿತು. ವೈರಿ ಆಕ್ರಮಣ ತೆರವಾದ ಬಳಿಕ ಜಾನುವಾರುಗಳೊಂದಿಗೆ ಜನ ಮರಳಿ ಊರಿಗೆ ಬಂದರು. ಗುಡಿಯಿದ್ದ ಜಾಗದಲ್ಲಿ ಹುಲ್ಲಿನ ಹಾಸು ಹಾಸಿ ದೇವರನ್ನು ಮತ್ತೆ ಪ್ರತಿಷ್ಠಾ ಪಿಸಿದರು. ಪೂಜಾರಿ ಬೋದನ ಶಾಸ್ತ್ರಿ ಗುಡಿಯ ಜೀರ್ಣೋದ್ಧಾರಕ್ಕೆ ಸಹಾಯ ಯಾಚಿಸಿ ರಾಜಾ ಮಾನಸಿಂಹನ ಬಳಿಗೆ ಹೋಗಿ ರಾಯಿಯ ತೊಂದರೆಗಳನ್ನು ನಿವೇದಿಸಿದ.

“ಮಹಾರಾಜಾ......ರಾಯಿಯಲ್ಲಿ ಕಾಟಿ, ಹಂದಿಗಳ ಹಾವಳಿ ಭಯಂಕರ. ಹುಲಿ, ಚಿರತೆ ಮುಂತಾದ ಕ್ರೂರ ಮೃಗಗಳ ಹಾವಳಿಯೂ ಹೆಚ್ಚಿದೆ. ಜನ ಭಯಭೀತರಾಗಿದ್ದಾರೆ. ಅತ್ತ ಗಮನ ಹರಿಸಬೇಕು.”

“ಇವುಗಳನ್ನು ಬೇಟೆಯಾಡುವವರೇ ಇಲ್ಲವೇ ಆ ಊರಲ್ಲಿ?”

“ಇಲ್ಲದೆ ಏನು?... ಮೂವರು ಗುರಿಕಾರ ರಿದ್ದಾರೆ ಸ್ವಾಮೀ...ಗೂಜರಿ ಅಣ್ಣ ತಂಗಿ ಹಾಗೂ ಗೊಲ್ಲರ ಲಾಖಿ ಎಂಬ ಹುಡುಗಿ. ಇವರಲ್ಲಿ ನಿನ್ನಿ ಎಂಬವಳು ಅಪ್ರತಿಮ ಸುಂದರಿ. ಬಾಣಪ್ರಯೋಗದಲ್ಲೂ ಚತುರೆ. ಅವಳ ಬಾಣದ ಗುರಿಯಿಡುವಿಕೆಯನ್ನು ಎಂತಹ ಮಹಾ ರಾಜರಾದರೂ ಗಮನಿಸಲೇಬೇಕು. ಇವಳ ಮೃಗ ಬೇಟೆ ಮೆಚ್ಚುವಂಥದು.”

ಬೋದನನ ಮಾತನ್ನಾಲಿಸುತ್ತಿದ್ದ ರಾಜನಿಗೆ ಒಮ್ಮೆಲೇ ಆಶ್ಚರ್ಯ. ನಿನ್ನಿಯ ಸಾಹಸದ ಬಗ್ಗೆ

ಚಕಿತನಾದ-ಅವನು ಅವಳನ್ನು ಕಾಣಲು ಆತುರನಾದ. "ಹೌದೇ... ನಮ್ಮ ರಾಜ್ಯದಲ್ಲಿ ಇಂತಹ ಶೂರ ಮಹಿಳೆ ಇದ್ದಾಳೆಯೇ? ನಾನವಳನ್ನು ಖಂಡಿತಾ ನೋಡಬೇಕು. ಈ ಉದ್ದೇಶವಿಟ್ಟುಕೊಂಡೇ ನಾನೊಮ್ಮೆ ರಾಯಿಗೆ ಬರುವವನಿದ್ದೇನೆ. ರಾಯಿಯ ಕಾಡುಗಳಲ್ಲಿ ಬೇಟೆಯಾಡುವುದರ ಜೊತೆಗೆ ನಿನ್ನಿಯ ಗುರಿಗಾರಿಕೆಯನ್ನು ಕಣ್ಣಾರೆ ನೋಡಬೇಕೆಂದಿದ್ದೇನೆ. ರಾಯಿಗೆ ಬಂದಾಗ ಗುಡಿಯ ಜೀರ್ಣೋದ್ಧಾರದ ಬಗ್ಗೆಯೂ ವಿಚಾರ ಮಾಡೋಣ" ಎಂದ ಮಾನಸಿಂಹ.

ರಾಯಿ ಗ್ರಾಮದ ಪ್ರಜೆಗಳು ಮಹಾರಾಜನ ಸ್ವಾಗತದ ಸಿದ್ಧತೆ ನಡೆಸಿದರು.

ಕುದುರೆಯೇರಿ ರಾಜಾ ಮಾನಸಿಂಹ ರಾಯಿಗೆ ಆಗಮಿಸಿದ. ಅವನೊಂದಿಗೆ ಸೇನಾಪತಿ ನಿಹಾಲಸಿಂಹ, ಜೊತೆಗೆ ಆನೆ ಕುದುರೆಗಳ ಸೈನ್ಯ ಪರಿ-



ವಾರವೂ ಆಗಮಿಸಿತ್ತು.

ರಾಜ ಕುದುರೆಯಿಂದಿಳಿದು ಬಂದ. ಸ್ವಾಗತ ಬಯಸಲು ಬಂದ ಚೋದನ ಶಾಸ್ತ್ರಿಗೆ ವಂದಿಸಿದ. ಮಂತ್ರ ಪಠಿಸುತ್ತಿದ್ದ ಚೋದನ, ರಾಜನಿಗೆ ಆಶೀರ್ವಾದ ಮಾಡಿದ. ರಾಜನ ವಿಶಾಲ ಹಣೆಗೆ ಗಂಧದ ತಿಲಕವಿಟ್ಟು ಕೊರಳನ್ನು ಹೂ ಹಾರದಿಂದ ಅಲಂಕರಿಸಿದ. ರಾಜ ಸಂತೋಷದಲ್ಲಿ ಅಲ್ಲಿ ನೆರೆದಿದ್ದವರಿಗೆ ಪ್ರತಿವಂದನೆ ಸೂಚಿಸಿದ.

ಬಳಿಕ ರಾಜ ಅಲ್ಲಿನ ಮಹಿಳೆಯರು ನಿಂತಿದ್ದೆಡೆಗೆ ನೋಟ ಬೀರಿದ. ಎದಿರಲ್ಲೇ ಮೃಗನಯನೆ ಕಂಡಾಗ ಚೋದನ ಶಾಸ್ತ್ರಿ ಹೇಳಿದ ಮಾತುಗಳು ನೆನಪಿಗೆ ಬಂದವು.

"ಮಹಾಪ್ರಭೂ... ಈಕೆಯೇ ಪ್ರಸಿದ್ಧ ಬಿಲ್ಲುಗಾತಿ ಮೃಗನಯನೆ," ಎಂದ ಪೂಜಾರಿ.

ಆಗ ರಾಜ ಮುಗಳ್ನಕ್ಕು, "ಶಾಸ್ತ್ರಿಗಳೇ ಮೃಗನಯನೆಯನ್ನು ಪಡೆದಿರುವ ನಿಮ್ಮ ಗ್ರಾಮ ನಿಜಕ್ಕೂ ಧನ್ಯ" ಎಂದ.

ರಾಜನ ನಗುವಿನ ಹಿಂದೆ ಅವ್ಯಕ್ತ ಬಯಕೆ ಗರಿಬಿಚ್ಚುತ್ತಿತ್ತು. ಅವನ ಕಣ್ಣುಗಳಲ್ಲಿ ಆಶ್ಚರ್ಯ ಮಿನುಗುತ್ತಲಿತ್ತು. ಮೃಗನಯನೆಯ ಯೋಗ್ಯತೆಯನ್ನು ಒರೆಗೆ ಹಚ್ಚಿ ನೋಡುವ ಆತುರವಿತ್ತು ಅವನ ಮಾತುಗಳಲ್ಲಿ.

"ಮೃಗನಯನೆ, ನಿನ್ನ ಬಿಲ್ಲುಗಾರಿಕೆಯನ್ನು ಕಣ್ಣಾರೆ ನೋಡಬೇಕೆಂಬ ಅಪೇಕ್ಷೆ ನನ್ನದು. ನಿನ್ನ ಲಕ್ಷ್ಯಭೇದದ ಬಗೆಯನ್ನು ಕಂಡು ಅರಿಯಬೇಕು. ಆ ಬಳಿಕವೇ ನಮ್ಮ ಪರಿವಾರ ಗ್ವಾಲಿಯರಿಗೆ ಹಿಂದಿರುಗೀತು" ಎಂದು ರಾಜ ತನ್ನಿಷ್ಟವನ್ನು ಬಹಿರಂಗಪಡಿಸಿದ.

ರಾಜನ ಮಾತು ಕೇಳಿ ಮೃಗನಯನೆ ಪುಲಕಿತಳಾದಳು. ಮಹಾರಾಜನ ಮುಂದೆ ತಾನೆಲ್ಲಿಯವಳು ಎಂಬ ಕೀಳರಿಮೆ ಅವಳನ್ನು ಆವರಿಸಿದ್ದರೂ ಸಂತಸದಲ್ಲಿ ಮುಂದೆ ಬಂದಳು. ಕೈಯಲ್ಲಿ ಹಿಡಿದಿದ್ದ ಆರತಿಯನ್ನು ರಾಜನಿಗೆ ಎತ್ತಿ ಬೆಳಗಿದಳು. ತಟ್ಟೆಯಲ್ಲಿದ್ದ ಬಿಡಿ ಹೂವನ್ನೆತ್ತಿ ರಾಜನ ಶಿರದ ಮೇಲಿರಿಸಿ ವಂದಿಸಿದಳು.

ಮೃಗನಯನೆಯೊಂದಿಗೆ ಮಾನಸಿಂಹ ಬೇಟೆಯಾಡುವ ಉದ್ದೇಶದಿಂದ ಕಾಡಿಗೆ ಕಾಲಿಟ್ಟ. ದಟ್ಟಡವಿಯ ನೆರಳು ಹೊರ ಜಗತ್ತನ್ನು ಮರೆಮಾಡುತ್ತಿತ್ತು. ಕಾಡಿನಲ್ಲಿ ಮರದ ಮೇಲೆ ರಾಜನಿಗಾಗಿಯೇ ವಿಶೇಷ ಅಟ್ಟಣಿಗೆ ಸಿದ್ಧವಾಗಿತ್ತು. ಮಾನಸಿಂಹ ಅಟ್ಟಣಿಗೆಯನ್ನೇರಿ ಬೇಟೆಗೆ ಸಿದ್ಧನಾಗಿ ಕುಳಿತ. ನಿಬಿಡ ಕಾಡಿನ ಪೊದೆಗಳೆಡೆ ಪ್ರಾಣಿಗಳು ಹರಿದಾಡಿ ಬೇಟೆಗಾಗಿ ಹೊಂಚು ಹಾಕಿದ್ದವು.

ಕೆಲ ಸಮಯದ ನಂತರ ಚಿರತೆ ಅಲ್ಲಿಗೆ ನುಗ್ಗಿ ಬಂತು; ಮೃಗನಯನೆ ಬಾಣ ಬಿಡಲು ಹದೆಯೇರಿಸಿದಾಗ ಅದು ಸದ್ದು ಮಾಡದೆ ಜಾರಿ ಸರಿದಿತ್ತು. ಮತ್ತೆ ಬಣ್ಣದ ಕಾಡು ಬೆಕ್ಕುಗಳು ಕಾಣಿಸಿಕೊಂಡು ಅರೆಕ್ಷಣದಲ್ಲೇ ಓಡಿ ಮರೆಯಾದವು. ಆ ಬಳಿಕ ಕಡವೆಗಳು ಬೆದರಿ ನೆಗೆದು ಬಂದಿದ್ದವು. ಮೃಗನಯನೆ ಅವುಗಳನ್ನು ತಡೆಯುವಷ್ಟರಲ್ಲಿ ಗಾಬರಿಗೊಂಡು ದೂರಕ್ಕೆ ಜಿಗಿದಿದ್ದವು. ಹೆಮ್ಮರಗಳ ನೆರಳಲ್ಲಿ ಪೊದೆಯಿಂದಲೋ ಗರ್ಜನೆ. ಆ ಧ್ವನಿ ಕೇಳಿಸುತ್ತ ಮೃಗನಯನೆ ದೃಷ್ಟಿ ನೆಟ್ಟಳು.

ರಾಜ ಅಟ್ಟಣಿಗೆಯ ಮೇಲಿಂದ ನೋಡುತ್ತಲಿದ್ದ. ಕಾಡು ಹಂದಿ ನುಗ್ಗಿ ಬಂದಾಗ ರಾಜ ಅದಕ್ಕೆ ಗುರಿಯಿಟ್ಟು ಕೊಂದ. ಅ[illegible] ಹುಸಿಯಾಗಲಿಲ್ಲ. ನಂತರ ಹುಲಿಯ ಗರ್ಜನೆ ಕೇಳಿ ಮೈನಡುಕ ಬರುವಂತಿದ್ದರೂ ರಾಜನಿಗೆ ಆ ಪ್ರಾಣಿ ಕಾಣಲಿಲ್ಲ. ಮೃಗನಯನೆಯ ಪ್ರತಿಕ್ರಿಯೆಯನ್ನು ತಿಳಿಯಲು ಕಾದು ಕುಳಿತ. ಗರ್ಜನೆ ಕೇಳಿದಾಕ್ಷಣವೇ ಅದೇ ದಿಕ್ಕಿಗೆ ಮೃಗನಯನೆ ಬಾಣ ಪ್ರಯೋಗಿಸಿದಳು. ಮೃಗನ[illegible] ಬಿಡುಗಡೆಗೊಂಡ ಬಾಣ ಗಾಳಿಯನ್ನು ಸೀಳುತ್ತ ರೊಂಯ್ಯನೆ ಧಾವಿಸಿತ್ತು. ನೆಟ್ಟ ನೋ[illegible] ಬಾಣವು ಹೆಬ್ಬುಲಿಯ ಕತ್ತಲ್ಲಿ ನಾಟಿಕೊಂಡಿತ್ತು. ಒಂದೇ ಬಾಣಕ್ಕೇ ಆ ಹುಲಿ ನೆಲದುರುಳಿತ್ತು. ರಾಜ ಮೆಚ್ಚುಗೆಯಲ್ಲಿ ಕೇಕ್ಕರಿದು ಬರುವವಲ್ಲಿದ್ದ. ಅಷ್ಟರಲ್ಲಿ ಕಾಟಿ ಅಲ್ಲಿ ನುಗ್ಗಿ ಬಂತು. ಮೃಗನಯನೆಯಿಂದ ಮತ್ತೆ ಬಾಣದ ಪ್ರ[illegible]

ಗುರಿ ತಪ್ಪಲಿಲ್ಲ. ಕಾಟಿಯ ನೆತ್ತಿಗೆ ಬಾಣ ನಾಟಿತ್ತು.

ಆನೆಯನ್ನೂ ಮೀರುವ ಶಕ್ತಿಯ ಕಾಟಿ ಸಿಟ್ಟಿನಿಂದ ಮೃಗನಯನೆಯತ್ತ ನುಗ್ಗಿ ಬಂದಾಗ ಆಕೆ ಭರ್ಚಿ ಪ್ರಯೋಗ ಮಾಡಿದಳು.

ಈ ತಿವಿತಕ್ಕೂ ಕಾಟಿ ಜಗ್ಗಲಿಲ್ಲ. ರಕ್ತ ಸುರಿಯುತ್ತಿದ್ದರೂ ಅದು ಮುನ್ನುಗ್ಗಿ ಬಂತು. ನಿಶ್ಶಸ್ತ್ರಳಾದ ಮೃಗನಯನೆಗೆ ಈಗ ಮಲ್ಲಯುದ್ಧವೊಂದೇ ಉಳಿದ ದಾರಿ. ತನ್ನ ಬರಿಗೈಗಳಿಂದಲೇ ಕಾಟಿಯ ಕೊಂಬುಗಳನ್ನು ಬಿಗಿಯಾಗಿ ಹಿಡಿದು ತನ್ನ ಶಕ್ತಿಯನ್ನೆಲ್ಲ ಒಮ್ಮೆಲೇ ಪ್ರಯೋಗಿಸಿದಳು. ಆ ಕಾಟಿಮೃಯನ್ನೆತ್ತಿ ಗಿರಗಿರನೆ ತಿರುಗಿಸಿ ದೂರಕ್ಕೆಸೆಯುವುದನ್ನು ಕಂಡು ರಾಜ ದಂಗಾದ.

ಅವನು ಅಟ್ಟಣೆಗೆಯಿಂದಿಳಿದು ಬಂದ. ಬೇಟೆಗೆ ನಾಟಿದ ಗುರಿಗಳನ್ನು ಪರೀಕ್ಷಿಸಿದ. ನಿರೀಕ್ಷೆಗೂ ಮೀರಿದ ಮೃಗನಯನೆಯ ಶೌರ್ಯ ಸಾಹಸ ಕಂಡು ಮೆಚ್ಚುಗೆ ವ್ಯಕ್ತಪಡಿಸಿ ತನ್ನ ಕೊರಳಲ್ಲಿದ್ದ ರತ್ನಖಚಿತ ಹಾರವನ್ನು ಮೃಗನಯನೆಗೆ ತೊಡಿಸಿ ಹೇಳಿದ:

"ನಿನ್ನ ಬಳಿ ಹೇಳಲೇಬೇಕಾದ ಒಂದು ಮುಖ್ಯ ವಿಚಾರವನ್ನು ಇಲ್ಲಿಯ ತನಕ ನನ್ನಲ್ಲೇ ಬಚ್ಚಿಟ್ಟುಕೊಂಡಿದ್ದೆ. ಅದನ್ನೀಗ ಬಿಚ್ಚಿ ಹೇಳಲು ನಿನ್ನನ್ನು ಮೆಚ್ಚಿಕೊಂಡ ನನ್ನ ಮನಸ್ಸಿಗೆ ಆತುರ. ನೀನು ಅರ್ಜಿಸಿದ ಮೂ ನನ್ನ ಶಿರದಲ್ಲಿನ್ನೂ ಪರಿಮಳ ಬೀರುತ್ತಲೇ ಇದೆ. ಇದರರ್ಥ ಒಡೆದು ಹೇಳಲೇ ಜಾಣೆ? ನನ್ನ ಮನಸ್ಸನ್ನು ಸೂರೆಗೊಂಡ ನಿನ್ನನ್ನು ವರಿಸಬೇಕೆಂದಿರುವೆ. ಅಡ್ಡಿಯಿಲ್ಲ ತಾನೇ?"

ಮೃಗನಯನೆಗೆ ಮಾತೇ ಹೊರಡಲಿಲ್ಲ. ಅಂತಸ್ತು ಐಶ್ವರ್ಯ ಅಂಜಿಕೆಯನ್ನುಂಟು ಮಾಡಿತು. ಆದರೂ ಮನಮೆಚ್ಚಿದ ರಾಜನಿಗೆ ಒಲ್ಲೆನೆನ್ನುವ ಧಾರ್ಷ್ಟ್ಯವಿರಲಿಲ್ಲ. ಕುಡಿನೋಟದಲ್ಲೇ ಮೆಚ್ಚುಗೆ ವ್ಯಕ್ತಪಡಿಸಿದಳು..

"ಮೃಗನಯನೆ ನಿನಗೆ ಬೇಟೆಯಲ್ಲಿ ಇಷ್ಟೊಂದು ಆಸಕ್ತಿ ಹೇಗೆ ಹುಟ್ಟಿತೆಂಬ ಕಾರಣ ಹೇಳಬಹುದೇ?" ರಾಜ ಕೇಳಿದ.

"ತಾಯಿನಾಡಿನ ಪ್ರೇಮ, ಸಾಂಕಿ ನದಿಯ ನೀರೇ ನನಗೆ ಶಕ್ತಿ, ಆಸಕ್ತಿಯನ್ನು ತುಂಬಿವೆ. ಈ ಸಾಂಕಿ ನದಿಯ ನೀರನ್ನು ಬಿಟ್ಟು ನಾನಿರಲಾರೆ." ಎಂದು ಕೊಂಚ ತಡೆದು "ನಿಮ್ಮೊಂದಿಗೆ ವಿವಾಹವಾಗಿ ನಾನು ಗ್ವಾಲಿಯರಿಗೆ ಬರಬೇಕೆಂದು ನಿಮಗಿಷ್ಟವಿದ್ದರೆ, ಈ ನದಿಯ ನೀರನ್ನೂ ಗ್ವಾಲಿಯರಿಗೆ ಹರಿಸುವ ಕೃಪೆಮಾಡಬೇಕು ನೀವು" ಎಂದಳು.

ರಾಜ ಒಪ್ಪಿದ.

ತೋಮರ ಕುಲದ ಮಾನಸಿಂಹ ಹಾಗೂ ಗೂಜರಿ ಕುಲದ ಮೃಗನಯನೆಯರ ವಿವಾಹ ೧೪೮೬ರಲ್ಲಿ ನಡೆದಿರಬೇಕೆಂಬ ಹೇಳಿಕೆಯಿದೆ. ಮದುವೆಯ ವೇಳೆಗೆ ರಾಜನ ಯೋಗ್ಯತೆಗೆ ತಕ್ಕಂತೆ ಮೃಗನಯನೆಗೆ ಅಮೂಲ್ಯ ವಸ್ತ್ರ ಒಡವೆಗಳನ್ನು ತೊಡಿಸಿದ್ದರಂತೆ. ಮೃಗನಯನೆಯ ಪರವಾಗಿ ಬೋದನ ಶಾಸ್ತ್ರಿಯೂ ಮಾನಸಿಂಹನ ಪರವಾಗಿ ವಿಜಯ ಜಂಗಮರೂ ಪೌರೋಹಿತ್ಯ ವಹಿಸಿದ್ದರೆನ್ನಲಾಗಿದೆ.

ರಾಯಿಯಿಂದ ರಾಜದಂಪತಿಗಳು ದಿಬ್ಬಣ ಸಮೇತರಾಗಿ ಗ್ವಾಲಿಯರನ್ನು ತಲಪಿದರು.

ಗ್ವಾಲಿಯರಿನ ಅರಮನೆಯನ್ನು ಪ್ರವೇಶಿಸಿದ ಮೃಗನಯನೆಗೆ ಹಿಂದೆಂದೂ ಕಾಣದ, ಊಹಿಸಲೂ ಅಸಾಧ್ಯವಾದ ಹೊಸ ಅನುಭವಗಳು. ಹೊಸ ರಾಣಿಯನ್ನು ಉಪಚರಿಸಲು ದಾಸಿಯರು ಸೇವೆಗಾಗಿ ಕಾದಿದ್ದರು. ತನಗೆ ಇಷ್ಟೊಂದು ವೈಭವವೇಕೆಂದೂ ತಿಳಿಯದು ಹಳ್ಳಿಗಾಡಿನ ಈ ಮುಗ್ಧೆಗೆ ಮಾನಸಿಂಹನ ಎಂಟು ಜನ ರಾಣಿಯರಲ್ಲಿ ಸುಮನಮೋಹಿನಿ ಹಿರಿಯಳು. ಮೃಗನಯನೆ ಒಂಬತ್ತನೆಯವಳಾದಳು.

ಮೃಗನಯನೆ ರಾಜವೈಭವವನ್ನು ಅನುಭವಿಸುತ್ತಿದ್ದರೂ ಅವಳಿಗೆ ತಾಯ್ನಾಡಿನ ನೆನಪು ಮಾಸಲಿಲ್ಲ. ಬಾಲ್ಯದ ಅನುಭವ ಹಸಿರಾಗುತ್ತಿತ್ತು. ಬಡತನದ ನೋವು ನಲಿವುಗಳು; ಕಾಡಿನ ಕ್ರೂರ ಮೃಗಗಳ ಬೇಟೆಯ ನೆನಪು; ಅಣ ಅಟಲ, ಸ್ನೇಹಿತೆ ಲಾಖಿಯರೊಂದಿಗೆ

ಕಳೆದ ದಿನಗಳ ನೆನಪೂ ಮರುಕಳಿಸುತ್ತಿತ್ತು.

ಮೃಗನಯನೆಗೆ ಅರಮನೆಯ ರಾಜ ವೈಭವ ಅನಾಯಾಸವಾಗಿ ಬಂದ ಭಾಗ್ಯ. ಉದ್ಯಾನದಲ್ಲಿನ ಪಕ್ಕಿಗಳ ಇಂಪಾದ ಗಾನದೆಡೆಗೇ ಲಕ್ಷ್ಯ ಹರಿಯುತ್ತದೆ. ತಾನೂ ಹಾಡುತ್ತಾಳೆ. ಆದರೂ ತಾನು ಅವಿದ್ಯಾವಂತೆ. ಅರಮನೆಯ ವಿದ್ಯಾವಂತರ ಮುಂದೆ ತನ್ನ ಹಾಡು ಇಂಪು ಬೀರೀತೇ? ಎಂಬ ಸಂಕೋಚದಿಂದ ಸುಮ್ಮನಾಗುತ್ತಾಳೆ.

ಅರಮನೆಯ ಗೋಡೆಗಳ ಮೇಲೆ ಸಾಲು ಸಾಲಾಗಿ ಸುಂದರ ಪಟ್ಟಿಕೆಗಳಲ್ಲಿನ ಚಿತ್ರಗಳನ್ನು ಕಂಡಾಗ ಚಿತ್ರ ಕಲೆಯ ಅಭ್ಯಾಸ ತನಗೂ ಆಗಬೇಕೆಂದು ಅವಳಲ್ಲಿ ಆಸೆ ಚಿಗುರಿತು.

ಆಗ ಅರಮನೆಯಲ್ಲಿ ಬದಿಯ ಕೋಣೆಯಿಂದ ಮಧುರ ಸ್ವರ ತರಂಗದೊಂದಿಗೆ ಇಂಪಾದ ಗಾನ ಹರಿದು ಬರುತ್ತದೆ. ಇಂತಹ ಗಾನವನ್ನು ಅವಳು ಹಿಂದೆಂದೂ ಆಲಿಸಿರಲಿಲ್ಲ. ಅಲ್ಲಿ ಪ್ರಸಿದ್ಧ ಆಸ್ಥಾನದ ಗಾಯಕ ಬೈಜೂನಾಥ (ಬೈಜು ಬಾವ್ರಾ) ಹಾಡುತ್ತಿದ್ದರೆಂದು ಮೃಗನಯನೆಗೆ ಆ ಮೇಲೆ ತಿಳಿಯಿತು.

ರಾಯಿ ಗ್ರಾಮದಿಂದ ಸಾಂಕಿ ನದಿಯ ನೀರನ್ನು ಗ್ವಾಲಿಯರಿಗೆ ಹರಿದು ಬಿಡಲು ಕಾಲುವೆ ತೋಡುವ ಕೆಲಸ ನಿಗದಿಪಡಿಸಿದಂತೆ ಪ್ರಾರಂಭವಾಯಿತು. ಗ್ವಾಲಿಯರಿಗೆ ಶತ್ರುಗಳ ದಾಳಿ ತಪ್ಪಿಸಲು. ಇಲ್ಲಿಂದ ಸಾಂಕಿ ನದಿಯ ಈ ಕಾಲುವೆಗೆ ಶತ್ರುಗಳಿಂದ ದಾಳಿಯಾಗಬಾರದೆಂದು ಭೂಗತ ಕಾಲುವೆಯ ನಿರ್ಮಾಣಕ್ಕೆ ಆಜ್ಞೆ ಹೊರಟಿತು. ಇದೇ ಸಮಯಕ್ಕೆ ಮಾನಸಿಂಹ ಮೃಗನಯನೆಯನ್ನು ವರಿಸಿದ ಸುದ್ದಿ ತಿಳಿದ ಮಾಂಡುವಿನ ಸುಲ್ತಾನ ಗಿಯಾಸುದ್ದೀನ್ ಮತ್ತೆ ಗ್ವಾಲಿಯರಿನ ಮೇಲೆ ದಾಳಿ ಮಾಡಬೇಕೆಂದು ಬಯಸಿದ, ಮೃಗನಯನೆಯನ್ನು ಪಡೆಯಬೇಕೆಂಬ ಆಶೆಯಿಂದ. ಆದರೆ ಗಿಯಾಸುದ್ದೀನ್ ಸೋಲನ್ನು ಅನುಭವಿಸಿ ಹಿಂದಿರುಗುತ್ತಾನೆ.

ಒಂದು ದಿನ ಮಾನಸಿಂಹ ಮೃಗನಯನೆ ಜೊತೆಗೆ ಬಿಸಿಲು ಮಚ್ಚಿನಲ್ಲಿ ಕುಳಿತು ಮಾತುಕತೆಯಲ್ಲಿ ತೊಡಗಿದ್ದಾಗ ತಾನು ವೀಣೆ ನುಡಿಸುವುದನ್ನು ಕಲಿತುಕೊಳ್ಳಬೇಕೆಂಬ ಹಂಬಲವನ್ನು ರಾಜನಲ್ಲಿ ಹೇಳುತ್ತಾಳೆ.

"ನೀನೂ ವೀಣೆ ನುಡಿಸುವೆಯೇನು? ನಿಜ ಹೇಳಬೇಕೆಂದರೆ ಬೇರೆ ಯಾರೇ ಆದರೂ ಒಂದು ಮಾಸದಲ್ಲಿ ತಿಳಿದುಕೊಳ್ಳುವುದನ್ನು ನೀನು ಒಂದೇ ದಿವಸದಲ್ಲಿ ಅರಿತುಬಿಡುವಷ್ಟು ಜಾಣೆ ಎಂದು ಬೈಜುರವರೇ ನಿನ್ನ ಬಗ್ಗೆ ಹೇಳುತ್ತಿದ್ದರು," ಎಂದು ಮಾನಸಿಂಹ ನಕ್ಕು ನುಡಿದ.

"ರಾಜಾ, ನನ್ನಿಷ್ಟ ಇಲ್ಲಿಗೆ ಮುಗಿಯದು. ಓದು ಬಲ್ಲವಳಾಗಬೇಕೆಂಬ ಆಸಕ್ತಿ ನನ್ನಲ್ಲಿ ಕುಂದುರಿದೆ. ಚಿತ್ರಕಲೆಯಲ್ಲೂ ಪಳಗಬೇಕೆಂಬ ಮನಸ್ಸಾಗಿದೆ. ಶಾಸ್ತ್ರೀಯ ಸಂಗೀತದ ಜ್ಞಾನ ಪಡೆಯಬೇಕೆಂಬ ಹಂಬಲವೂ ಹೆಚ್ಚಾಗುತ್ತಿದೆ. ವಿದ್ಯೆಯೇ ಜೀವನದ ಸರ್ವಸ್ವ ಎಂಬ ಭಾವನೆ ನನ್ನಲ್ಲಿ ಸ್ಪಷ್ಟವಾಗುತ್ತಿದೆ. ವಿದ್ಯಾವಂತಳಾಗಿ ಪ್ರವೀಣೆಯಾಗಬೇಕೆಂಬ ಹುಮ್ಮಸ್ಸು ನನ್ನೊಳಗೆ ಬಲವಾಗಿದೆ" ಎಂದು ಮನಬಿಚ್ಚಿ ಹೇಳಿಕೊಂಡಳು ಮೃಗನಯನೆ.

ರಾಜ ಅದೆಲ್ಲಕ್ಕೂ ಏರ್ಪಾಡು ಮಾಡಿದ.

ವಿದ್ಯಾಭ್ಯಾಸಕ್ಕೆಂದು ವಿಜಯಜಂಗಮನನ್ನು ಗೊತ್ತು ಮಾಡಿ ಅರಮನೆಯಲ್ಲೇ ಓದುಬರಹಕ್ಕೆ ಏರ್ಪಾಡಾಯಿತು. ಲಲಿತ ಕಲೆ ಅಭ್ಯಾಸದ ವ್ಯವಸ್ಥೆಯೂ ಆಯಿತು. ಗಾಯನ ವಾದನ ತರಬೇತಿಗೆ ಬೈಜೂನಾಥ. ಚಿತ್ರಕಲೆಗೆ ಕಲಾದೇವಿ ನಿಯಮಿಸಲ್ಪಟ್ಟರು.

ಈ ಎಲ್ಲ ಸೌಲಭ್ಯಗಳು ಒಂಭತ್ತನೆಯ ರಾಣಿ ಮೃಗನಯನೆಗೆ ಮೀಸಲಾದದ್ದು ಉಳಿದ ರಾಣಿಯರ ಮನಸ್ಸಿಗೆ ಬರಲಿಲ್ಲ. ಅವರೆಲ್ಲ ಮೃಗನಯನೆಯ ಅಭಿವೃದ್ಧಿಯನ್ನು ಕಂಡು ಮತ್ಸರಪಟ್ಟರು.

ಇದು ರಾಜನಿಗೆ ಗೊತ್ತಾಯಿತು. ಈ ಹೊಟ್ಟೆಕಿಚ್ಚಿನ ಎಂಟು ರಾಣಿಯರನ್ನಾಳುವುದೆಂದರೆ ಗ್ವಾಲಿಯರಿನಂತಹ ಎಂಟು ರಾಜ್ಯಗಳನ್ನು ಆಳುವುದಕ್ಕಿಂತಲೂ ಕಠಿಣ ಎಂದು ಅವನು ಅರಿತಿದ್ದ. ವಿನಯ ವ್ಯವಹಾರಗಳಿಂದಲೇ ಇವರ

[illegible] ರಿಸಬೇಕು ಎಂದು ಆತ ಯೋಚಿಸುತ್ತಿದ್ದ.

ಅದೇ ವೇಳೆಗೆ ಮೃಗನಯನೆಯ ಅಣ್ಣ [illegible]ನಿಗೆ ಲಾಖಿಯೊಂದಿಗೆ ವಿವಾಹವಾಯಿತು. ಈ ಸಂದರ್ಭದಲ್ಲಿ ಮಾನಸಿಂಹ ವಿಶೇಷ ಉತ್ಸವಗಳನ್ನು ಏರ್ಪಡಿಸಿದ. ರಾಜ್ಯದ ಸಾಮಂತ ಶ್ರೀಮಂತರೂ ಉತ್ಸವಗಳಲ್ಲಿ ಪಾಲ್ಗೊಂಡರು. ನವದಂಪತಿಗಳಿಗೆ ಮೃಗನಯನೆ ಅರಮನೆಯಲ್ಲೇ ವಿಶೇಷ ಔತಣ ಏರ್ಪಡಿಸುವ ಸುದ್ದಿ ತಿಳಿದು ರಾಣೀವಾಸದಲ್ಲಿ ಅಲ್ಲೋಲ-ಕಲ್ಲೋಲವೆದ್ದಿತು.

"ರಾಣಿಯರಲ್ಲಿ ಅತಿ ಕಿರಿಯಳಾದವಳು ಔತಣ ಏರ್ಪಡಿಸುವ ಸಂಪ್ರದಾಯವಿಲ್ಲ. ಪದ್ಧತಿಯಂತೆ ಹಿರಿಯ ರಾಣಿ ಔತಣ ಏರ್ಪಡಿಸಬೇಕಾದುದು ಇಲ್ಲಿನ ಸಂಪ್ರದಾಯ" ಎಂದು ಸುಮನ ಮೋಹಿನಿ ಈ ಏರ್ಪಾಡುಗಳ ನೇತೃತ್ವವನ್ನು ವಹಿಸಿಕೊಂಡಳು.

"ನಮ್ಮ ಕುಲಪದ್ಧತಿಯಂತೆ ಮೊದಲಿಗೆ ಲಾಖಿಯೇ ಎಲ್ಲರಿಗೂ ಬಡಿಸುವ ಕ್ರಮವಾಗಬೇಕು...ಹೀಗಾದರೆ ಚೆನ್ನ." ಎಂದಳು ಮೃಗನಯನೆ.

ಆಗ ಸುಮನಮೋಹಿನಿ, "ಅದೆಲ್ಲಿನದೋ ಹಳ್ಳಿಯ ಗುಗ್ಗುಗಳ, ಹೆಡ್ಡ ಪಡ್ಡರ ಪದ್ಧತಿಯಿರಬೇಕು. ಈ ರಾಣೀವಾಸಕ್ಕೆ ಅದು ತಕ್ಕುದಲ್ಲ" ಎಂದಳು.

ಈ ಮಾತನ್ನು ಆಲಿಸಿದ ಮೃಗನಯನೆಗೆ ತಾಳ್ಮೆಗೆಟ್ಟಿತು. ಲಾಖಿಯೊಂದಿಗೆ ಔತಣಕೂಟದಿಂದ ಹೊರ ನಡೆದು ಬಂದಳು.

ಮೃಗನಯನೆ ಮತ್ತು ಲಾಖಿಗೆಂದು ಬಡಿಸಿಟ್ಟ ಊಟದ ತಟ್ಟೆ ಹಾಗೆಯೇ ಇತ್ತು. ಈ ತಟ್ಟೆಗಳನ್ನು ದಾಸಿಯೊಬ್ಬಳು ಎತ್ತಿ ಹೊರ ನಡೆದಾಗ ಸುಮನಮೋಹಿನಿ,

"ಆ ತಟ್ಟೆಗಳಲ್ಲಿರುವ ಊಟ ಕಸ ಹೊಡೆಯುವವರಿಗೂ ತಕ್ಕುದಲ್ಲ. ಕಸದ ಗುಂಡಿಗೆ ಎಸೆದು ಬಾ," ಎಂದಳು. ದಾಸಿ ಹಾಗೆಯೇ ಮಾಡಿದಳು. ಅದನ್ನುಂಡ ನಾಯಿಗಳು ಸಾಯುತ್ತವೆ.

ಒಮ್ಮೆ ಸಭಾಭವನದಲ್ಲಿ ಬೈಜುವಿನ ಗಾಯನ ಸಭೆ ನಡೆಯಿತು. ರಾಣಿ ಪರಿವಾರದವರೂ ಈ ಗಾಯನ ಸಭೆಗೆ ಆಗಮಿಸಿದರು. ಆಗ ಸುಮನ ಮೋಹಿನಿ, ಚಿನ್ನದ ಹರಿವಾಣದಲ್ಲಿ ಗಮಗಮಿಸುವ ತಾಂಬೂಲವನ್ನಿರಿಸಿ ಸಂಗೀತದ ಗುಂಗಿನಲ್ಲಿದ್ದ ಮೃಗನಯನೆ ಮತ್ತು ಲಾಖಿಯರಿಗೆ ಅದನ್ನು ದಾಸಿಯ ಕೈಯಲ್ಲಿಕೊಟ್ಟು ಕಳುಹಿಸಿದಳು. ಈ ತಾಂಬೂಲ ಪ್ರಾಯಶಃ ಮರಣ ವೀಳ್ಯವೂ ಆಗಿದ್ದಿತು ಎಂದು ಮೃಗನಯನೆ ತನಗೆಂದು ಕಳುಹಿಸಿದ್ದ ವೀಳ್ಯವನ್ನೆತ್ತಿ ತಿನ್ನುವ ನೆಪದಲ್ಲಿ ಸೆರಗಲ್ಲಿ ಬಚ್ಚಿಟ್ಟಳು. ಕಣ್ಣಂಚಿನಲ್ಲೇ ಲಾಖಿಗೂ ಎಚ್ಚರಿಕೆ ನೀಡಿದಳು.

ಗಾಯನ ಸಭೆಯ ಅನಂತರ ಹೊರಬಂದ ಮೃಗನಯನೆ ತನ್ನ ಬಳಿಯಿದ್ದ ವೀಳ್ಯವನ್ನು ಪರೀಕ್ಷಿಸಿ ನೋಡಿದಳು. ಅದರಲ್ಲಿ ವಿಷ ಬೆರೆತುದು ಸ್ಪಷ್ಟವಾಯಿತು.




"ಈಗೇನು ಭಿಕ್ಷೆ ಹಾಕ್ತೀರೋ ಇಲ್ಲ, ರೌಡಿಗಳನ್ನ ಬಿಟ್ಟು ಮೂಳೆ ರಿಪೇರಿ ಮಾಡಿಸ್ಲೊ...?"

ಅಟಲ ಅಂತರ್ಜಾತೀಯ ವಿವಾಹವಾದನೆಂದು ತನ್ನ ಕೋಮಿನವರು ಆತನಿಗೆ ಬಹಿಷ್ಕಾರ ಹಾಕಿದ್ದರು. ಅವಮಾನಗೊಂಡ ಅಟಲ ಹಾಗೂ ಲಾಖಿ ರಾಯಿ ತೊರೆದು ಪರಾರಿಯಾಗಿದ್ದರು. ಇದನ್ನು ಕೇಳಿ ಮೃಗನಯನೆಗೆ ಬಹಳ ದುಃಖವಾಯಿತು.

ಇದೇ ವೇಳೆಗೆ ಮಾಂಡುವಿನ ಸುಲ್ತಾನ ಗ್ವಾಲಿಯರ ರಾಜ್ಯದ ನರವರಕ್ಕೆ ಮುತ್ತಿಗೆ ಹಾಕುವನೆಂಬ ಸುದ್ದಿ ತಲಪಿತು. ಮಾನಸಿಂಹ ನರವರದತ್ತ ಪ್ರಯಾಣ ಬೆಳೆಸಿದ.

ಇತ್ತ ರಾಯಿಯಿಂದ ತಲೆ ಮರೆಸಿಕೊಂಡ ಅಟಲ ಮತ್ತು ಲಾಖಿ ಸುಳಿವು ಸಿಗದಂತೆ ನರವರದ ಕೋಟೆಯನ್ನು ಸೇರಿದ್ದರು.

ನರವರದ ಕೋಟೆಯ ಗೋಡೆಗಳು ಎತ್ತರವಾಗಿದ್ದವು. ಕೋಟೆಯ ಮೂರು ಬಾಗಿಲುಗಳ ಮೇಲೂ ಶತ್ರು ದಾಳಿ. ಗೋಡೆಯನ್ನು ದಾಟಲು ಸುಲ್ತಾನನಿಂದ ಹಲವು ಪ್ರಯತ್ನಗಳು ನಡೆದವು: ಕೊನೆಗೆ ಡೊಂಬರ ಪಿಲ್ಲಿ ಎಂಬಾಕೆಯನ್ನು ಕೋಟೆಯ ಗೋಡೆ ಏರಲು ಬಿಟ್ಟು ಸೈನ್ಯವನ್ನು ಕೋಟೆಯೊಳಕ್ಕೆ ನುಗ್ಗಿಸುವ ಉಪಾಯ ಹೂಡಿದ ಸುಲ್ತಾನ. ಡೊಂಬರ ಪಿಲ್ಲಿ ಹಗ್ಗದ ಏಣಿಯಲ್ಲಿ ಕೋಟೆಯ ಗೋಡೆ ಏರುತ್ತಿದುದ್ದನ್ನು ಲಾಖಿ ಕಂಡಳು. ಹಗ್ಗವನ್ನು ಕಡಿದು ಹಾಕಿದಳು. ಪಿಲ್ಲಿ ಕಂದಕಕ್ಕೆ ಉರುಳಿ ಪ್ರಾಣ ಬಿಟ್ಟಳು.

ನರವರದ ಕೋಟೆಗೆ ಶತ್ರುಗಳು ನುಗ್ಗುವುದನ್ನು ಲಾಖಿ ತಡೆದಳೆಂಬ ಸುದ್ದಿ ತಿಳಿದ ಮಾನಸಿಂಹ ಆಕೆಗೆ ರತ್ನದ ಹಾರವನ್ನು ತೊಡಿಸಿದ. ನರವರದ ಕೋಟೆ ಮತ್ತು ನಗರಗಳನ್ನು ಅಟಲನಿಗೆ ಜಹಗೀರೆಂದು ಬಿಟ್ಟುಕೊಟ್ಟ. ಆಟಲ ಹಾಗೂ ಲಾಖಿಯರನ್ನು ಗ್ವಾಲಿಯರಿಗೆ ಕರೆತರಲು ಆನೆಯ ಏರ್ಪಾಡು ಮಾಡಿಸಿದ.

ಗ್ವಾಲಿಯರಿನಲ್ಲೊಮ್ಮೆ ಭೂಕಂಪವಾಯಿತು. ಭೂಮಿ ಅಲುಗಿದಾಗ ಮಾನಸಿಂಹ ಬಳಿಯಲ್ಲಿದ್ದ ಮೃಗನಯನೆಯನ್ನು ಆಲಿಂಗಿಸಿ ಕಣ್ಣುಗಳನ್ನು ಮುಚ್ಚಿ ಕುಳಿತಿದ್ದ.

"ರಾಜಾ...ಈ ಭೂಕಂಪ ಸುಮ್ಮಸುಮ್ಮನೇ ಉಂಟಾಗಲಿಲ್ಲ. ನಮ್ಮ ಕರ್ತವ್ಯ ಪ್ರಜ್ಞೆಯನ್ನು ಜ್ಞಾಪಿಸಲು ಅದು ಸಂಭವಿಸಿತು." ಎಂದಳು ಮೃಗನಯನೆ. ಮಾನಸಿಂಹನ ಇತರ ರಾಣಿಯರಂತೆ ಕೇವಲ ಅಂತಃಪುರದ ವಿಲಾಸೀ ಜೀವನದಲ್ಲಿ ಉಳಿಯದೆ ಪ್ರಜೆಗಳ ಹಿತರಕ್ಷಣೆ, ಶತ್ರುಗಳ ಬಗ್ಗೆ ಎಚ್ಚರದ ಅವಶ್ಯಕತೆಯನ್ನು ಮೃಗನಯನೆ ತನ್ನ ರಸನ ನೆನಪಿಗೆ ತರುತ್ತಿದ್ದಳೆಂಬುದಕ್ಕೆ ಇದು ಒಂದು ಉದಾಹರಣೆ.

ಸಿಕಂದರ್ ಲೋದಿಯು ನೈಋತ್ಯ ಗ್ವಾಲಿಯರಿನ ಮೇಲೆ ದಂಡೆತ್ತಿ ಬರುವ ವಿಚಾರ ತಿಳಿದಾಗ ಮಾನಸಿಂಹ ತನ್ನ ಸೈನ್ಯದ ಸಿದ್ಧತೆಯಲ್ಲಿ ತೊಡಗಿದ. ಆಗ ಮೃಗನಯನೆ,

"ನಾನೂ ಶತ್ರುಗಳೊಂದಿಗೆ ಹೋರಾಡಲು ಸಿದ್ಧಳೇ. ನನ್ನಂಥವರು ಕೇವಲ ರಾಣೀವಾಸಕ್ಕೆ ಮೀಸಲಲ್ಲ. ರಾಣಿ ಎನಿಸಿಕೊಂಡವಳ ಕೈಯಲ್ಲಿ ಖಡ್ಗವೂ ನಲಿಯಬೇಕು, ಬಿಲ್ಲು ಅವಳ ಬೆನನ್ನು ಮುಸೆಯಬೇಕು," ಎಂದಳು.

ಮೃಗನಯನೆಯ ಸ್ಫೂರ್ತಿ ಹಾಗೂ ಬೆಂಬಲದಿಂದ ಸೈನ್ಯಬಲವನ್ನು ಸಜ್ಜಾಗಿಸಿ ಮಾನಸಿಂಹನು ಶತ್ರು ದಾಳಿಯನ್ನೆದುರಿಸಲು ಸಕಲ ಸಿದ್ಧತೆ ನಡೆಸಿದ.

ಅಷ್ಟರಲ್ಲಿ ಸಿಂಕದರ್ ರಾಯಿ ಗಡದ ಮೇಲೆ ದಾಳಿ ನಡೆಸಿದ. ಶತ್ರುಗಳ ವಿರುದ್ಧ ಲಾಖಿ ಹಗಲು ರಾತ್ರಿಗಳ ಭೇದವಿಲ್ಲದೆ ಹೋರಾಡಿ ಶತ್ರುಗಳಿಗೆ ಬಲಿಯಾದಳು. ಸಿಕಂದರನ ಕಾಕದೃಷ್ಟಿ ಗ್ವಾಲಿಯರಿನ ಕೋಟೆಯ ಮೇಲೂ ಇತ್ತು. ಈ ವಿಚಾರ ರಾಜನಿಗೆ ತಿಳಿದು ಕೋಟೆಯ ಕಾವಲನ್ನು ಸನ್ನದ್ಧ ಸ್ಥಿತಿಯಲ್ಲಿಡಲಾಯಿತು.

ಗ್ವಾಲಿಯರಿನ ದುರ್ಗವಿದ್ದ ಬೆಟ್ಟದ ತಪ್ಪಲಲ್ಲಿ ಮೃಗನಯನೆಗೆಂದೇ ಎರಡಂತಸ್ತಿನ ಗೂಜರಿ ಮಹಲಿನ ನಿರ್ಮಾಣವಾಯಿತು. ಸಾಂಕಿ ನದಿಯಿಂದ ಗುಪ್ತ ನಾಲೆಯನ್ನು ನಿರ್ಮಿಸಿ

ಈ ಮಹಲಿನ ಕೊಳಕ್ಕೆ ಜೋಡಿಸಲಾಯಿತು. ಈ ಕಟ್ಟಡದ ನಡುವೆ ವಿಶಾಲ ಪ್ರಾಂಗಣ. ಸುತ್ತಲೂ ಮಹಡಿ ಹಾಗೂ ಬಿಸಿಲು ಮಚ್ಚುಗಳು. ಲತಾಮಂಟಪದಂತೆ ಬಾಗಿಲುವಾಡಗಳು. ನಾನಾ ವಿನ್ಯಾಸಗಳ ಜಾಲಾಂಧ್ರದಿಂದ ಕೂಡಿದ ಕಿಟಕಿಗಳು ಮಹಲಿನ ಚೆಲುವನ್ನು ಹೆಚ್ಚಿಸಿದ್ದವು.

ಆ ಸುಂದರ ವಿನ್ಯಾಸದ ಗೂಜರಿ ಮಹಲು ತಾಯಿ ತನ್ನಿಬ್ಬರು ಮಕ್ಕಳೊಂದಿಗೆ ಕುಳಿತಿರುವಂತೆ ತೋರುತ್ತಿತ್ತು.

ಈ ಮಹಲಿನ ದಕ್ಷಿಣಕ್ಕೆ ಇನ್ನೊಂದು ಸುಂದರ ಭವನದ ನಿರ್ಮಾಣವಾಯಿತು. ಇದು ವಿಷ್ಣುವಿನ ಆರಾಧನೆಗೇ ಮೀಸಲಿರಬೇಕೆಂದು ಇದನ್ನು 'ಮಂದಿರ' ಎಂದು ಕರೆದರು. ಬಳಿಕ ಇದುವೇ 'ಮಾನ ಮಂದಿರ' ಎಂದು ಹೆಸರು ಪಡೆಯಿತು.

ಈ ಎರಡೂ ಮಂದಿರಗಳು ೧೫೦೭ರ ವೇಳೆಗೆ ನಿರ್ಮಿಸಲ್ಪಟ್ಟವು.

ಗ್ವಾಲಿಯರಿನ ದುರ್ಗದೊಳಗೇ ಬೈಜುವಿಗೆ ಎರಡಂತಸ್ತಿನ ನಿವಾಸವಿತ್ತು. ಆತ ಯಾವಾಗಲೂ ಹೊಸ ಹೊಸ ರಾಗಗಳ ಸೃಷ್ಟಿಯ ಯೋಚನೆಯಲ್ಲಿರುತ್ತಿದ್ದ.

ತನ್ನ ಪರಿಶ್ರಮ ಶ್ರದ್ಧೆಗಳಿಂದಾಗಿ ಮೃಗನಯನೆ ಲಲಿತ ಕಲೆಗಳಲ್ಲಿ ಪಳಗಿದಳು. ಬೈಜುವಿಗೆ ಈಕೆಯ ಸಹಕಾರ ಸಹಾಯದಿಂದ ಹೊಸ ಹೊಸ ರಾಗಗಳನ್ನು ಸೃಷ್ಟಿಸಲು ಸ್ಫೂರ್ತಿ. ಇವುಗಳಲ್ಲಿ ಹೆಸರಾದುದು ಧ್ರುವಪದದ ಹೊಸದೊಂದು ಪರಿಪಾಠ. ಬೈಜು ಹಾಗೂ ಮೃಗನಯನೆಯ ಪ್ರಯತ್ನಗಳಿಂದ, ಮಾನಸಿಂಹನ ನೆರವು ಪ್ರೋತ್ಸಾಹಗಳಿಂದ ಧ್ರುವಪದದ ನಾಲ್ಕು ಅಂಗಗಳಾದ ಸ್ಥಾಯಿ, ಅಂತರಾ, ಸಂಚಾರಿ ಹಾಗೂ ಅಭೋಗ ಎಂಬವುಗಳು ಹುಟ್ಟಿಕೊಂಡವು ಎನ್ನಲಾಗಿದೆ. ಗುರುವಿನ ಮೂಲಕ ಮೃಗನಯನೆ ಸಂಗೀತಕ್ಕೆ ಹೊಸ ರೂಪವನ್ನೇ ತಂದುಕೊಟ್ಟಳು ಎಂದು ಹೇಳಲಾಗಿದೆ. ವಿಕಾಸದ ಆಸಕ್ತಿಯು ಕಸುವುತನ ಅಭ್ಯಾಸದಲ್ಲಿ ಮುಸೆಯುತ್ತಿತ್ತು. ಮೃಗನಯನೆಯ ಹೆಸರಲ್ಲಿ ಕೆಲವು ರಾಗಗಳೂ ಪ್ರಸಿದ್ಧವಾಗಿವೆ. ಅವುಗಳಲ್ಲಿ ಗೂಜರಿ ತೋಡಿ, ಮಾಲ ಗೂಜರಿ, ಬಹುಲ ಗೂಜರಿ ಹಾಗೂ ಮಂಗಲ ಗೂಜರಿ ರಾಗಗಳು ಬಹಳ ಜನಪ್ರಿಯ ಎನ್ನಲಾಗಿದೆ.

ಸಂಗೀತಕ್ಕೆ ಕುಳಿತ ಮೃಗನಯನೆ ಭಾವಪರವಶಳಾಗಿ, ತಂಬೂರಿ ಮೀಟುತ್ತ ಹಾಡುತ್ತಿದ್ದಳು. ಮಧುರವಾಗಿ ಹಾಡುವ ಇವಳ ಧ್ರುವಪದವನ್ನು ಮಾನಸಿಂಹ ಮೆಚ್ಚಿಕೊಂಡಿದ್ದ.

ಗುರು ಬೈಜುವಿನ ಮೂಲಕ ಮೃಗನಯನೆ ಗ್ವಾಲಿಯರಿನಲ್ಲಿ ಸಂಗೀತ ವಿದ್ಯಾಪೀಠವನ್ನು ಸ್ಥಾಪಿಸಿದಳು. ಸಾಧನೆಗಳಿಗೆ ಹೆಸರಾದ ಬೈಜುವಿನ ಸಂಗೀತ ಪರಿಪಾಠ ಈ ವಿದ್ಯಾಪೀಠದಿಂದ



"ಛೇ... ನಾನು ಈ ಬೋರ್ಡನ್ನು ಸರಿಯಾಗಿ ಅರ್ಥ ಮಾಡದ್ದೇ ತಪ್ಪು...ನಾನೆಲ್ಲೋ ಇಪ್ಪತ್ತೊಂದನೇ ಶತಮಾನದ ಹೊಸ ಫ್ಯಾಶನ್ ಅಂತ ಅಂದುಕೊಂಡೆ..!!?!!"

[illegible]ಸಿತು. (ಗಾಯಕ ತಾನಸೇನನೂ ಈ ವಿದ್ಯಾಪೀಠದ ಶಿಷ್ಯರುಗಳಲ್ಲಿ ಹೆಸರು ಗಳಿಸಿದ್ದನೆನ್ನಲಾಗಿದೆ.)

ಮೃಗನಯನೆ ಚಿತ್ರಕಲಾ ಶಾಲೆಯನ್ನೂ ಸ್ಥಾಪಿಸಿದ್ದಳು. ಅಲ್ಲಿ ಅವಳು ರಚಿಸಿದ ಹಲವಾರು ಕೃತಿಗಳಿದ್ದವು. ಅವು ಸಂಗೀತ ನೃತ್ಯ ವಾದನಗಳಿಗೆ ಸಂಬಂಧಿಸಿದವುಗಳು. ಮಾನಸಿಂಹನ ವಿವಿಧ ಭಂಗಿಗಳು, ಪ್ರಕೃತಿಯ ಪ್ರತಿಕೃತಿಗಳು, ಶೌರ್ಯದ ಚಿತ್ರಗಳು, ಶತ್ರುಗಳನ್ನು ಎದುರಿಸುವ ಕಾವಲು ಪಡೆ ಇತ್ಯಾದಿ.

ಚಿತ್ರಕಲೆ ಸಾಹಿತ್ಯ ಜನಪ್ರಿಯಗೊಳ್ಳಲು ಮೃಗನಯನೆ ಶ್ರಮಿಸಿದ್ದಳು.

ಅವಳು ಶಿವತಾಂಡವ ಸ್ತೋತ್ರವನ್ನು ಹಾಡುತ್ತ ತಾಂಡವ ನೃತ್ಯದಲ್ಲೂ ತೊಡಗುತ್ತಿದ್ದಳು. ಜೀವನದಲ್ಲಿ ವಿವಿಧ ಆಕಾರ ಪ್ರಕಾರಗಳಲ್ಲಿ ಶಕ್ತಿಯ ಸಂಚಯ, ಶಿವನ ಶಕ್ತಿ ಲೀಲೆಯಿಂದ ಶಕ್ತಿಯ ಪ್ರಚೋದನೆ, ಹೀಗೆ ತಾಂಡವ ನೃತ್ಯದ ಸಾತ್ವಿಕತೆಯನ್ನು ಮೃಗನಯನೆ ನೃತ್ಯವಾಡಿ ತೋರಿಸುತ್ತಿದ್ದಳಂತೆ. ಮೃಗನಯನೆಯ ನೃತ್ಯವನ್ನು ಕಂಡಾಗ ಅವಳ ಸ್ತ್ರೀತ್ವದ ಪೂರ್ಣ ಸೌಂದರ್ಯ ವಿಕಾಸವನ್ನು ಕಾಣಬಹುದಿತ್ತಂತೆ.

ಶತ್ರು ದಾಳಿಯಿಂದ ಬೋಧನ ಶಾಸ್ತ್ರಿ ಕೊಲೆಗೀಡಾಗಿ ರಾಜನಿಗೆ ಬಹಳ ದುಃಖವಾದಾಗ ಮೃಗನಯನೆ ತಾಂಡವ ನೃತ್ಯದಿಂದ ಅರಸನನ್ನು ಸಂತೈಸಿದಳಂತೆ.

ಮೃಗನಯನೆಗೆ ರಾಜಹಂಸ ಹಾಗೂ ಬಾಲ ಹಂಸ ಎಂಬಿಬ್ಬರು ಮಕ್ಕಳು. ಹಿರಿಯ ರಾಣಿ ಸುಮನಮೋಹಿನಿಗೆ ವಿಕ್ರಮನೆಂಬ ಕುಮಾರನಿದ್ದ. ವಯಸ್ಸಿಗೆ ಕಾಲಿರಿಸಿದ ತನ್ನ ಪುತ್ರನಿಗೇ ಪಟ್ಟಕಟ್ಟಬೇಕೆಂದು ಪಟ್ಟು ಹಿಡಿಯುತ್ತಿದ್ದಳು ಸುಮನ ಮೋಹಿನಿ.

ಮಾನಸಿಂಹನಿಗೆ ಇದು ಒಪ್ಪಿಗೆಯಿರಲಿಲ್ಲ. ಮೃಗನಯನೆಯ ಕುವರನೇ ಪಟ್ಟಕ್ಕೇರಬೇಕೆಂಬುದು ಅವನ ಇಚ್ಛೆಯಾಗಿತ್ತು. ಆದರೆ ಹಿರಿಯನನ್ನು ಕಡೆಗಣಿಸಿ ಕಿರಿಯನಾದ ತನ್ನ ಮಗನಿಗೆ ರಾಜ್ಯಾಧಿಕಾರ ಸಲ್ಲದು ಎಂದು ಮೃಗನಯನೆ ಯೋಚಿಸಿದಳು.

ಇಲ್ಲಿ ಕರ್ತವ್ಯದ ದೃಷ್ಟಿಯೇ ಮುಖ್ಯ ಹೊರತು ಸ್ವಾರ್ಥದ ಅಧಿಕಾರ ಸ್ಥಾನವಲ್ಲ. ವಿಕ್ರಮಸಿಂಹನಿಗೇ ಅಧಿಕಾರದ ಪಟ್ಟ ಕಟ್ಟಬೇಕೆಂದು ಮೃಗನಯನೆ ರಾಜನಿಗೆ ಸಲಹೆ ನೀಡಿದಳು. ಇದು ಅವಳ ಔದಾರ್ಯಕ್ಕೆ ಹಿಡಿದ ಕನ್ನಡಿ.

ಮೃಗನಯನೆ ಅತಿ ಹಿಂದುಳಿದಿದ್ದ ಗುಡ್ಡಗಾಡಿನ ಕುವರಿಯಾದರೂ ತನ್ನ ಸಾಧನೆ ಪರಿಶ್ರಮ ಯೋಗ್ಯತೆಯಿಂದ ರಾಣಿಯಾಗಿ ಮೆರೆದಳು. ಶೌರ್ಯದಲ್ಲಿ ಹೆಸರಾದಳು. ಮದ, ಮತ್ಸರಗಳನ್ನು ತುಳಿದು ನಿಂತು ನಿಃಸ್ವಾರ್ಥದಲ್ಲಿ ಕೂಡಿ ಬಾಳಿದಳು. ಲಲಿತ ಕಲೆಗಳಲ್ಲಿ ಮೆರೆದಳು. ಸ್ವದೇಶ ಪ್ರೇಮ, ಕರ್ತವ್ಯಪ್ರಜ್ಞೆ, ಜನತೆಯ ಕಲ್ಯಾಣದ ಹೊಣೆಯನ್ನರಿತು ಸ್ವಾತಂತ್ರ್ಯ ರಕ್ಷಣೆಯಲ್ಲೂ, ಆಡಳಿತದಲ್ಲೂ ರಾಜನೊಂದಿಗೆ ಸಹಕರಿಸಿದಳು. ❁



ಧೀರವೀರರೆಲ್ಲ ಪ್ರೇಮವೀರರೂ ಹೌದು. ಪ್ರೇಮಕ್ಕಾಗಿ ಅವರು ಎಂಥ ಧೈರ್ಯವನ್ನಾದರೂ ತೋರಿಸುತಾರಷ್ಟೇ ಅಲ್ಲ, ಧೀರರನ್ನು ಪ್ರೇಮಿಸುತ್ತಾರೆ ಕೂಡ. ಶೌರ್ಯ ಸೌಂದರ್ಯಗಳ ಮಿಲನ ಎಂದಿಷ್ಟು ಹೇಳಿದರಾಯಿತು: ನಮ್ಮ ಜಗತ್ತಿನ ಇತಿಹಾಸವನ್ನು ಕಿರಿದಾಗಿ ಹೇಳಿದಂತೆಯೇ ಸರಿ.

-ಹ್ಯೂಮನಿಸ್ಟ್

# ಚರ್ಚಾಗೋಷ್ಠಿ : ಹೀಗೆ ಮಾಡಿ

—ಟಿ. ಕೆ. ನಾಗಭೂಷಣ

೧. ಸಭೆಗೆ ಬರುವ ಮುನ್ನ ವಿಚಾರಗಳನ್ನು ಆಲೋಚಿಸಿ ಮನಸ್ಸಿನಲ್ಲಿಟ್ಟುಕೊಂಡೇ ಬನ್ನಿ: ಸಮಸ್ಯೆಗಳೇನು? ಪ್ರಶ್ನೆಗಳೇನು? ಎನ್ನುವುದನ್ನು ಗುರುತಿಸಿಟ್ಟುಕೊಂಡು ಚರ್ಚೆಗಾಗಿ ಮುಂದಿಡಿ. ಕಾರ್ಯಕ್ರಮದ ಪಟ್ಟಿಯನ್ನು ಮುಂಗಡವಾಗಿ ಪರಿಶೀಲಿಸಿ.

೨. ಇತರರು ಹೇಳುವುದನ್ನು ವಿಚಾರಪರ ಮತ್ತು ವಿಮರ್ಶಾತ್ಮಕ ರೀತಿಯಲ್ಲಿ ಕೇಳಿಸಿಕೊಳ್ಳಿ, ಬೇರೆ ವ್ಯಕ್ತಿಗಳ ಅಭಿಪ್ರಾಯವೇನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿ. ಆದರೆ ನೆನಪಿನಲ್ಲಿಡಿ; ಸಾಧಾರಣವಾಗಿ ಪ್ರತಿ. ಯೊಂದು ಪ್ರಶ್ನೆಗೂ, ಸಮಸ್ಯೆಗೂ ಹಲವಾರು ಅಭಿಪ್ರಾಯಗಳಿರುತ್ತವೆ.

೩. ಮನ ಬಿಚ್ಚಿ ಮಾತನಾಡಿರಿ; ಗೋಷ್ಠಿಯಲ್ಲಿ ಭಾಗವಹಿಸುವ ನಿಮಗೂ ಜವಾಬ್ದಾರಿಯಿದೆ. ನೀವು ಆಲೋಚಿಸಿದಂತೆ ಮಾತನಾಡಲು ಸಿಕ್ಕಿರುವ ಅವಕಾಶವನ್ನು ಬಳಸಿಕೊಳ್ಳಿ.

೪. ಚರ್ಚೆಯಲ್ಲಿ ಏಕಸ್ವಾಮ್ಯ ಸ್ಥಾಪಿಸುವ ಪ್ರಯತ್ನ ಮಾಡಬೇಡಿ; ಒಂದು ಬಾರಿಗೆ ಒಂದೇ ಸಮನೆ ಒಂದು ನಿಮಿಷಕ್ಕಿಂತ ಹೆಚ್ಚು ಸಮಯ ಮಾತನಾಡಬೇಡಿ. ನೀವು ಹೇಳಹೊರಟಿರುವ ಪ್ರಧಾನ ವಿಷಯವನ್ನು ಕೆಲವೇ ಪದಗಳಲ್ಲಿ ಮುಗಿಸಿ, ಮತ್ತೊಬ್ಬರಿಗೆ ಅವಕಾಶ ಕೊಡಿ. ಭಾಷಣ ಬಿಗಿಯಲನುವಾಗಬೇಡಿ, ಎಲ್ಲರಿಗೂ ಕೇಳಿಸುವಷ್ಟು ಗಟ್ಟಿಯಾಗಿ ಮಾತನಾಡಿ.

೫. ಚರ್ಚೆ ನಿಮ್ಮ ಹಿಡಿತದಿಂದ ದೂರಾಗಿ ಹೋಗಲು ಬಿಡಬೇಡಿ; ಏನಾದರೂ ವಿಷಯ ಅರ್ಥವಾಗದಿದ್ದಲ್ಲಿ ಹಾಗೆಂದು ವ್ಯಕ್ತಪಡಿಸಿ. ಪರಿಸ್ಥಿತಿಯನ್ನು ಅರಿತುಕೊಳ್ಳಲೋಸುಗ ಪ್ರಶ್ನೆಗಳನ್ನು ಕೇಳಿ. ಉದಾಹರಣೆಗಳಿಗಾಗಿ ಕೋರಿಕೊಳ್ಳಿ.

೬. ಪಕ್ಕದಲ್ಲಿ ಕುಳಿತಿರುವವರೊಡನೆ ಉಪಸಂಭಾಷಣೆಗಳಲ್ಲಿ ತೊಡಗಬೇಡಿ; ಅದು ನಯವಲ್ಲದ ನಡವಳಿಕೆ ಹಾಗೂ ಸಭೆಯಲ್ಲಿರುವವರ ಏಕಾಗ್ರತೆಯನ್ನು ಭಂಗಗೊಳಿಸುತ್ತದೆ.

೭. ಭಿನ್ನಾಭಿಪ್ರಾಯಗಳು ಬಂದಾಗ ಸ್ನೇಹದಿಂದಲೇ ವರ್ತಿಸಿ; ಬೇರೆಯವರ ಅಭಿಪ್ರಾಯಗಳಿಗಿಂತ ನಿಮ್ಮದು ಬೇರಾದಾಗ ಅದು ಏಕೆಂಬುದನ್ನು ತಿಳಿಸಿ. ಆದರೆ ಸಹನೆ ಕಳೆದುಕೊಂಡು, ಅಂತಹ ಸನ್ನಿವೇಶಗಳು ಗೆಲುವು – ಸೋಲುಗಳೆಂಬ ವಾಗ್ಯುದ್ಧಗಳಾಗಿ ಪರಿಣಮಿಸುವುದನ್ನು ತಪ್ಪಿಸಿ.

೮. ಸೂಕ್ತವಾದ ಅಭಿಪ್ರಾಯಗಳು ಮನಸ್ಸಿಗೆ ತೋರಿದೊಡನೆ ಶಬ್ದಗಳಲ್ಲಿ ವ್ಯಕ್ತಪಡಿಸಿ; ಮುಂದೂಡಿದರೆ ಅವನ್ನು ಮರೆಯುವ ಸಾಧ್ಯತೆಯಿದೆ. ಅಥವಾ ಅವು ಆ ಚರ್ಚೆಗೆ ಅಪ್ರಾಸಂಗಿಕವಾಗಬಹುದು.

೯. ಸಕ್ರಿಯಾಶೀಲರಾಗಿರಿ: ಚರ್ಚೆಯ ಫಲವಾಗಿ ಹೊರಬಂದ ಉಪಯುಕ್ತ ಅಂಶಗಳನ್ನು ಕಾರ್ಯರೂಪಕ್ಕೆ ತರಬಹುದಾದ ಸಾಧ್ಯಸಾಧ್ಯಗಳನ್ನು ತರ್ಕಬದ್ಧವಾಗಿ ಆಲೋಚಿಸಿ.

೧೦. ಎಲ್ಲಕ್ಕಿಂತ ಮಿಗಿಲಾಗಿ; ಅತ್ಯಂತ ಅಪರೂಪವಾದ ಸಂಪರ್ಕ ಕಲಾಕೌಶಲವಾದ "ಕೇಳಿಸಿಕೊಳ್ಳುವ ಕಲೆ"ಯನ್ನು ನಿಮ್ಮಲ್ಲೇ ಬೆಳೆಸಿಕೊಳ್ಳಲು ಪ್ರಯತ್ನಿಸಿ. ಸಭೆ ಮುಗಿದ ನಂತರ; "ಅದರಲ್ಲಿ ನನ್ನ ಕೊಡುಗೆ ಏನಾಗಿತ್ತು?" ಎಂದು ನಿಮ್ಮನ್ನು ನೀವೇ ಕೇಳಿಕೊಳ್ಳಿ. ಮುಂದಿನ ಸಲ ಅವಕಾಶ ದೊರಕಿದಾಗ ಹೆಚ್ಚಿನದನ್ನು ಸಾಧಿಸುವ ಸಂಕಲ್ಪ ಮಾಡಿ. ✡



# ಪ್ಲೇಟೋ ಪಾಠ ಹೇಳಿದ ಶಾಲೆ

ವಿ. ನರಹರಿ

ಖ್ಯಾತ ಗ್ರೀಕ್ ತತ್ವಜ್ಞಾನಿ ಪ್ಲೇಟೋ ಪಾಠ ಹೇಳಿದ ಶಾಲ(ದಿ ಅಕೆಡೆಮಿ)ಯ ಯಾವ ಭಾಗವಾದರೂ ಉಳಿದಿದೆಯೆ? ಎಂಬುದನ್ನು ಪತ್ತೆಹಚ್ಚಲು ೧೯೩೩ರಲ್ಲಿ ಶಾಸ್ತ್ರೀಯ ಪುರಾತನಗಳ ಬಗೆಗಿನ ಖ್ಯಾತ ಪರಿಣತರ ಸಲಹೆಯ ಮೇರೆಗೆ ಅಥೆನ್ಸ್ ಬಳಿ ಗ್ರೀಕ್ ಅಧಿಕಾರಿಗಳು ಒಂದು ಉತ್ಖನನವನ್ನು ಕೈಗೊಂಡರು.

ಪ್ಲೇಟೋವಿನ ಶಾಲೆಯ ಈ ನಿಜ ನಿವೇಶನವನ್ನು ಅಗೆದು ತೆಗೆದಾಗ ನೂರಾರು ಮಂದಿ ಪಂಡಿತರು ಹರ್ಷೋದ್ಗಾರ ಮಾಡಿ ವಿಪರೀತ ಸಂತೋಷದಿಂದ ಮಕ್ಕಳಂತೆ ಅತ್ತರು. ಕೇವಲ ಪ್ಲೇಟೋವಿನ ಶಾಲೆಯಷ್ಟೇ ಅಲ್ಲ, ದಿನದಲ್ಲಿ ಆತ ಹಲವಾರು ಬಾರಿ ಓಡಾಡುತ್ತಿದ್ದ ವಿಶಾಲವಾದ ರಸ್ತೆಯನ್ನೂ ಪತ್ತೆ ಮಾಡಲಾಯಿತು. ಆ ರಸ್ತೆಯ ಒಂದು ತುದಿಯಲ್ಲಿ ಆತನ ಶಾಲೆ ಹಾಗೂ ಮನೆ, ಮತ್ತೊಂದು ತುದಿಯಲ್ಲಿ ಶಾಲೆಯ ತೋಟ ಹಾಗೂ ಹಳೆಯ ನಿವೇಶನವೂ ಇದ್ದವು.

ಪ್ಲೇಟೋವಿಗಿಂತ ಮೊದಲು ಕೂಡ ಪುರಾತನ ಅಥೆನ್ಸ್ ನಾಗರಿಕರು ಅಕೆಡಮಿ ಎಂಬ ಹೆಸರಿನಿಂದ ಸಂಸ್ಥೆಗಳನ್ನು ನಡೆಸುತ್ತಿದ್ದರು. ಗ್ರೀಕ್ ಪುರಾಣದ ದೇವತೆ 'ಅಕೆಡೆಮಿಸ್'ನಿಂದ 'ಅಕೆಡೆಮಿ' ಶಬ್ದ ಹುಟ್ಟಿತು. ಅಥೆನ್ಸ್ ನಗರದ ಬಹಿರ್ವಲಯದಲ್ಲಿ ಆ ದೇವರ ಹೆಸರಿನಲ್ಲಿ ಒಂದು ದೇವಾಲಯವನ್ನೂ ಕಟ್ಟಲಾಗಿತ್ತು. ಕೆಲವು ನೀರ್ಬುಗ್ಗೆಗಳು, ಪವಿತ್ರ ಆಲಿವ್ ಪೊದೆ ಹಾಗೂ ಒಂದು ಉತ್ತಮ ವ್ಯಾಯಾಮ ಶಾಲೆಯಿಂದ ಆ ಜಾಗ ನಿಸರ್ಗರಮ್ಯವಾಗಿತ್ತು.

ವ್ಯಾಯಾಮಶಾಲೆಯಲ್ಲಿ ೨೦೦ ಗಜ ಉದ್ದದ ಓಟದ ಪಂದ್ಯದ ದಾರಿ, ಈಟಿ ಹಾಗೂ ಡಿಸ್ಕಸ್‌ಗಳ ಎಸೆತಕ್ಕಾಗಿ ಒಂದು ತೆರೆದ ಮೈದಾನ, ಉಡುಪು ಬದಲಿಸಲು ಕೊಠಡಿಗಳು, ಸ್ನಾನಗೃಹಗಳು, ಸವಾರಿ ಮಾಡಲು ಮಾರ್ಗಗಳು ಹಾಗೂ ಕುಸ್ತಿಗೆ ಸ್ಥಳ ಸೌಲಭ್ಯ ಮತ್ತು ಒಳಾಂಗಣ ಆಟಗಳಿಗೆ ವ್ಯವಸ್ಥೆಗಳೆಲ್ಲಾ ಇದ್ದವು. ಎಲ್ಲಾ ಅಭಿರುಚಿಗಳ ಹಾಗೂ ಸ್ವಭಾವದ

ಯುವ ಅಥೆನ್ಸ್ ನಾಗರಿಕರನ್ನು ಆಕರ್ಷಿಸಲೆಂದೇ ಈ ವಿಸ್ತೃತ ಏರ್ಪಾಟುಗಳಿದ್ದದ್ದು. ಹಿರಿಯರಿಗೆ ಇದ್ದದ್ದೆಲ್ಲಾ ಒಂದೇ ಗುರಿಯೆಂದರೆ ಅತ್ಯುತ್ತಮ ದೇಹಸಂಪತ್ತಿಯಿಂದ ಬೆಳೆಯುವ ಯುವ ಪೀಳಿಗೆಯನ್ನು ತರಬೇತಿಗೊಳಿಸುವುದು. ಆದರೆ ದೇಹಸಂಸ್ಕೃತಿಯೊಂದನ್ನೇ ಗುರಿಯಾಗಿ ಪರಿಗಣಿಸಲಿಲ್ಲ. ಅದು ಗುರಿಗೆ ಒಂದು ಸಾಧನ ಮಾತ್ರ. ಮಾನಸಿಕ ಹಾಗೂ ನೈತಿಕ ವಿಚಾರಗಳೆರಡರಲ್ಲೂ ಒಂದೇ ರೀತಿಯ ಹಿರಿಮೆಯನ್ನು ಸಾಧಿಸಲು ಜನರೆಲ್ಲರೂ ಒಟ್ಟಾಗಿಯೇ ಆಶಿಸಿದ್ದರು. ಈ ವಿಷಯಗಳಲ್ಲಿ ಶಾಶ್ವತ ಯಶಸ್ಸಿಗೆ ಬಲಿಷ್ಠ ಹಾಗೂ ಆರೋಗ್ಯಕರ ದೇಹ ಸಾಮರ್ಥ್ಯ ಅಗತ್ಯವಾದುದರಿಂದ ಶರೀರ ಸಂಸ್ಕೃತಿಯನ್ನು ಪ್ರೋತ್ಸಾಹಿಸಲಾಗುತ್ತಿತ್ತು.

ಅಕೆಡಮಸ್‌ನ ತೋಟದಲ್ಲಿ ಕುಳಿತುಕೊಂಡು ಪ್ರಮುಖ ವಿಷಯಗಳ ಬಗೆಗೆ ಚರ್ಚೆಯನ್ನು ಉತ್ತೇಜಿಸಲು ಕೆಲವು ಮರೆಮಾಡಿದ ಸ್ಥಳಗಳೂ ಇದ್ದವು. ಹೆಚ್ಚಿನ ಹಾಗೂ ಸಾಪೇಕ್ಷವಾದ ಕಲಿಕೆಗೆ ಉನ್ನತ ಸ್ಥಾನ ನೀಡಲು ಹೆಚ್ಚಾಗಿ ತಾತ್ವಿಕ ಹಾಗೂ ರಾಜಕೀಯ ವಿಚಾರಗಳಿಗೆ ಉತ್ತೇಜನವಿತ್ತು. ಈ ಆಕಾಂಕ್ಷೆಗಳು ಪರಿಗಣನೀಯವಾಗಿದ್ದರೂ ಶಾಲೆಯು ಕೆಲ ಮಟ್ಟಿಗೆ ಅವ್ಯವಸ್ಥಿತವಾಗಿತ್ತು. ತನ್ನದೇ ಆದ ಶಾಲೆಯನ್ನು ತೆರೆಯುವವರೆಗೆ ಪ್ಲೇಟೋ ಈ ಶಾಲೆಯಲ್ಲಿ ಕೆಲವು ಕಾಲ ಬೋಧಿಸಿದನು.

ಅರಿಸ್ಟಾನ್ ಮತ್ತು ಪರೆಕ್‌ಟೋನಿಯಾಳ ಮಗನಾದ ಪ್ಲೇಟೋ ಕ್ರಿಸ್ತಪೂರ್ವ ೪೨೭ರಲ್ಲಿ ಅಥೆನ್ಸಿನಲ್ಲಿ ಜನಿಸಿದ. ಕುಟುಂಬ ಬಲು ಶ್ರೀಮಂತವಾಗಿದ್ದು ಆತನಿಗೆ ಒಳ್ಳೆಯ ಶಿಕ್ಷಣ ದೊರಕಿತು. ಆತನ ದೈಹಿಕ ಬೆಳವಣಿಗೆಯ ಬಗೆಗೂ ನಿಗಾವಹಿಸಲಾಯಿತು. ತುಂಬಾ ಸ್ಫುರದ್ರೂಪಿಯಲ್ಲದಿದ್ದರೂ ಆತ ಆರೋಗ್ಯವಂತನಾಗಿದ್ದ. ಚರಿತ್ರಕಾರರು ಆತನ ನಿಜ ನಾಮಧೇಯ ಅರಿಸ್ಟೋಕ್ಲೆಸ್ ಎನ್ನುತ್ತಾರೆ. ವಿಶಾಲವಾದ ಭುಜಗಳುಳ್ಳವನು ಎಂದು ಗ್ರೀಕ್ ಭಾಷೆಯಲ್ಲಿ ಅರ್ಥ ನೀಡುವ 'ಪ್ಲೇಟೋ' ಎಂಬ ಹೆಸರಿನಿಂದ ಅವನನ್ನು ಕರೆಯಲಾಯಿತು. ಯುವಕನಾಗುವ ಮೊದಲೇ ನಿಜ ಹೆಸರು ಮರೆಯಾಗಿ ಕ್ರಮೇಣ ಆತ ಪ್ಲೇಟೋ ಎಂದೇ ಪರಿಚಿತನಾದ.

ತಾರುಣ್ಯ ಪೂರ್ವದಲ್ಲೇ ಆತ ನಾಟಕಗಳನ್ನು ಹಾಗೂ ಕವನಗಳನ್ನು ಬರೆಯಲಾರಂಭಿಸಿದ್ದ. ಆತನ ೨೦ನೇ ವಯಸ್ಸಿನಲ್ಲಿ ಆತನನ್ನು ಖ್ಯಾತ ಚಿಂತಕ ಸಾಕ್ರಟೀಸನ ಮುಂದೆ ತರಲಾಯಿತು. ಆ ಮಹಾಪುರುಷನಿಂದ ೮ ವರ್ಷಗಳ ಕಾಲ ವಿವಿಧ ವಿಷಯಗಳಲ್ಲಿ ಆತನಿಗೆ ಶಿಕ್ಷಣ ದೊರಕಿತು. ಸುಲಭವಾಗಿಯೇ ಪ್ಲೇಟೋ ಸಾಕ್ರಟೀಸನ ಮೆಚ್ಚಿನ ಶಿಷ್ಯನಾದ.

ಸಾಕ್ರಟೀಸನ ಬಲವಂತ ಆತ್ಮಹತ್ಯೆಯ ನಂತರ ಪ್ಲೇಟೋ ಅಥೆನ್ಸ್ ನಗರವನ್ನು ಬಿಟ್ಟು ಪ್ರಯಾಣ ಹೊರಟ. ಗ್ರೀಸ್‌ನ ಬಹುತೇಕ ಎಲ್ಲಾ ಪ್ರಮುಖ ಸ್ಥಳಗಳಿಗೂ ಆತ ಭೇಟಿ ನೀಡಿದ. ಪಶ್ಚಿಮದಲ್ಲಿ ಸಿಸಿಲಿಯ ವರೆಗೂ ಪೂರ್ವದಲ್ಲಿ ಇಜಿಪ್ಟಿನ ವರೆಗೂ ಆತ ಹೋದ. ಇವು ಕೇವಲ ಮನೋರಂಜನೆಯ ಭೇಟಿಗಳಾಗಿರದೆ ಉದ್ದೇಶಪೂರ್ವಕವಾದವುಗಳಾಗಿದ್ದವು.

ತಾನು ವಿವೇಕ ಮೂಡಿಸಿ ನಾಗರಿಕರನ್ನಾಗಿಸಬೇಕೆಂದಿದ್ದ ಅಥೆನ್ಸಿನ ನಾಗರಿಕರ ಅನಿಯಂತ್ರಿತ ಭಾವನೆಗಳು, ದುರಭಿಪ್ರಾಯ ಹಾಗೂ ಅಂಧಶ್ರದ್ಧೆಗಳಿಗೆ ಸಾಕ್ರಟಿಸ್ ಬಲಿಯಾದ. ಪ್ಲೇಟೋವಿನ ಮೊದಲ ಸ್ಫೂರ್ತಿಯೂ ಇದೇ ರೀತಿಯದಾಗಿತ್ತು. ಗ್ರೀಕ್ ಪ್ರಪಂಚದಾದ್ಯಂತ ಕಾನೂನಿನ ಆಡಳಿತವನ್ನು ಸ್ಥಾಪಿಸಲು ಆತ ಅಪೇಕ್ಷಿಸಿದ. ಇನ್ನೂ ಹೆಚ್ಚೆಂದರೆ ಪ್ರಮುಖ ಆಳರಸರನ್ನು ನ್ಯಾಯ, ದಯೆ ಹಾಗೂ ನೈತಿಕ ಭಾವನೆಗಳಿಂದ ಉತ್ತೇಜಿಸಲು ಅಪೇಕ್ಷಿಸಿದ.

ಒಂದು ಕಥೆ ಹೀಗಿದೆ: ಅವನೊಮ್ಮೆ ಸಿಸಿಲಿಯಲ್ಲಿದ್ದಾಗ ಆ ದ್ವೀಪದ ರಾಜನಾದ ಹಿರಿಯ ಡಿಯೋನಿಸಿಯಸ್‌ನನ್ನು ಸಂಪರ್ಕಿಸಿ ಆತನನ್ನು

ಶಿಕ್ಷಣದ ಆಗ್ರಹದಿಂದ ಜ್ಞಾನಿಯಾಗಿಸಲೆತ್ನಿಸಿದ. ಆದರೆ ಕೋಪಗೊಂಡ ರಾಜ ಆತನನ್ನು ಗುಲಾಮನನ್ನಾಗಿ ಮಾರಿಬಿಟ್ಟ. ಕೊನೆಯಲ್ಲಿ ಸಿರೇನ್‌ನ ಅನ್ನಿಸೆರಿಸ್ ಎಂಬುವನು ಆತನನ್ನು ಬಿಡುಗಡೆ ಮಾಡಿದ.

ಅನಂತರ ಪ್ಲೇಟೋ ಅಥೆನ್ಸ್‌ಗೆ ಹಿಂದಿರುಗಿದ. ಹಾವನಾದ ತಕ್ಷಣ ಆಗಲೇ ಜನಪ್ರಿಯವಾಗಿದ್ದ ಅಕೆಡಮಿಸ್‌ನ ತೋಟದ ಹಳೆಯ ಶಾಲೆಯಲ್ಲಿ ಬೋಧಿಸಲಾರಂಭಿಸಿದ.

ಸಾಕ್ರಟೀಸನ ನಂತರ ಪ್ಲೇಟೋ ಪೈಥಾಗೋರಿಯನ್ ತಂತ್ರಜ್ಞರಿಂದಲ್ಲದೆ ವಿಶೇಷವಾಗಿ ಫಿಲೋಲಾಅಸ್, ಆರ್ಕಿಟಾಸ್ ಮತ್ತು ಯೂರಿಟಿಸ್‌ರಿಂದ ಗಣನೀಯವಾಗಿ ಪ್ರಭಾವಿತನಾದ. ಅವರೆಲ್ಲರನ್ನೂ ತಾನಾಗಿಯೇ ಭೇಟಿಯಾದ.

ಸಾಕ್ರಟೀಸನ ಮರಣಾನಂತರ ಒಂದು ದಶಕದ ಕಾಲವನ್ನು ಪ್ಲೇಟೋ ಅನೇಕ ರೀತಿಗಳಲ್ಲಿ ತನ್ನ ಸ್ವಾಭಾವಿಕವಾಗಿ ಫಲವತ್ತಾದ ಮತ್ತು ಸಂಗ್ರಾಹಕ ಮನಸ್ಸನ್ನು ಶ್ರೀಮಂತಗೊಳಿಸಲು ಬಳಸಿದ. ನೂರಾರು ಗ್ರೀಕ್ ದ್ವೀಪಗಳಲ್ಲಿ ಸಸ್ಯಗಳನ್ನು ಮತ್ತು ಖನಿಜಗಳನ್ನು ಅಭ್ಯಾಸ ಮಾಡಿದ. ಸಿಸಿಲಿಯಲ್ಲಿ ಜ್ವಾಲಾಮುಖಿಗಳನ್ನು ಮತ್ತು ಇತರ ಪುರಾತನ ಶಿಲ್ಪಗಳ ಅವಶೇಷಗಳನ್ನು ಅಭ್ಯಸಿಸಿದ.

ತಾನು ಭೇಟಿಯಿತ್ತ ಪ್ರತಿಯೊಂದು ಜಾಗದಲ್ಲಿಯೂ ಅಲ್ಲಿಯ ಪಂಡಿತರ ಸಂಪರ್ಕ ಪಡೆಯುವುದನ್ನು ತಪ್ಪಿಸಿಕೊಳ್ಳಲಿಲ್ಲ. ಇದರ ಫಲವಾಗಿ ಅಥೆನ್ಸ್‌ಗೆ ಆತ ಹಿಂದಿರುಗಿದಾಗ ವಿವಿಧ ಭಾಗಗಳ ಉತ್ತಮಾಂಶಗಳೆಲ್ಲವನ್ನೂ ರಕ್ತಗತವಾಗಿಸಿಕೊಂಡಂತೆ ಕಂಡುಬಂದಿತು.

ಹಿರಾಕ್ಲಿಟಸ್‌ನ ಭೌತಶಾಸ್ತ್ರ, ಪೈಥಾಗೋರಸನ ಭೌತಾತೀತಶಾಸ್ತ್ರ ಹಾಗೂ ಸಾಕ್ರಟೀಸನ ನೀತಿಯ ಅಂಶಗಳನ್ನೊಳಗೊಂಡು ತನ್ನ ತಾತ್ವಿಕ ವಿಚಾರಗಳನ್ನೂ ಆತ ರೂಪಿಸಿದ.

ಹಳೆಯ ಅಕೆಡಮಿಯ ಅವ್ಯವಸ್ಥಿತ ಶಿಕ್ಷಣ ವಿಧಾನದಲ್ಲಿ ಆತ ಸಂಪೂರ್ಣವಾಗಿ ಅತೃಪ್ತಿ ವ್ಯಕ್ತಪಡಿಸಿದ. ಆದ್ದರಿಂದ ಅದರ ತೋಟದ ಪಕ್ಕದಲ್ಲೇ ಒಂದು ಮನೆಯಿದ್ದ ಕೈದೋಟವನ್ನು ಕೊಂಡುಕೊಂಡ. ಇಷ್ಟು ಹೊತ್ತಿಗಾಗಲೇ ಸಾಕಷ್ಟು ಸಂಖ್ಯೆಯಲ್ಲಿ ಯೋಗ್ಯ ಹಾಗೂ ಆಕರ್ಷಕ ವ್ಯಕ್ತಿತ್ವದ ಯುವಕರು ಆತನ ಸುತ್ತ ಸೇರಿದ್ದರು. ತನ್ನದೇ ಆದ ಜಾಗದಲ್ಲಿ ತಾನು ಕಲ್ಪಿಸಿದಂತಹ ಶಾಲೆಯನ್ನು ಪುನರ್ ವ್ಯವಸ್ಥೆಗೊಳಿಸಲು ಆವನು ಪ್ರಸ್ತಾಪಿಸಿದಾಗ ಎಲ್ಲರೂ ಆತನಿಗೆ ನೆರವಾದರು.

ಚಿಂತಕನಾಗಿ, ಶಿಕ್ಷಕನಾಗಿ, ತತ್ವಜ್ಞನಾಗಿ ಪ್ಲೇಟೋ ಅಲ್ಪ ಕಾಲದಲ್ಲೇ ಪ್ರಪಂಚದಲ್ಲೆಲ್ಲಾ ಪ್ರಖ್ಯಾತನಾದ. ೪೦ ವರ್ಷಗಳ ಕಾಲ (ಕ್ರಿಸ್ತ ಪೂರ್ವ ೩೮೭ರಿಂದ ೩೪೭ರ ವರೆಗೆ) ಆ ಶಾಲೆಯ ಮುಖ್ಯಸ್ಥನಾಗಿ ಬೋಧಿಸಿದ.

"ಜ್ಯಾಮಿತಿಯನ್ನು ಬಲ್ಲದ ಯಾರೂ ಇಲ್ಲಿ ಪ್ರವೇಶಿಸದಿರಲಿ," ಎಂಬ ವಾಕ್ಯ ಪ್ಲೇಟೋವಿನ ಮನೆಯ ಬಾಗಿಲ ಮೇಲಿತ್ತು. ತನ್ನ ಶಿಷ್ಯರಾಗಿ ಸೇರಿಕೊಳ್ಳುವವರಿಗೆ ಕನಿಷ್ಠ ಔಪಚಾರಿಕ ಶಿಕ್ಷಣದ ಅಗತ್ಯವನ್ನು ಈ ಮೂಲಕ ಪ್ಲೇಟೋ ವಿಧಿಸಿದ್ದನೆಂದು ಕೆಲ ಪಂಡಿತರು ಹೇಳುತ್ತಾರೆ. ಆದರೆ ಶಾಲೆಗೆ ಪ್ರವೇಶವು ಯಾವುದೇ ಒಂದು ನಿರ್ದಿಷ್ಟ ವಿಷಯದಲ್ಲಿ ಕನಿಷ್ಠ ಶಿಕ್ಷಣವಾಗಿರದೆ ಎಲ್ಲಾ ವಿಷಯಗಳಲ್ಲೂ ಅಗತ್ಯವಿತ್ತೆಂದು ಇತರರು ಹೇಳುತ್ತಾರೆ. ಈ ವಾಕ್ಯವು ಕೇವಲ ಪ್ಲೇಟೋನ ಸಾಮಾನ್ಯ ಅಭಿರುಚಿ ಮತ್ತು ಆದ್ಯತೆಯನ್ನು ಸೂಚಿಸುತ್ತದೆಂದು ಅವರ ಮತ.

ಗಣಿತ ಮತ್ತು ಖಗೋಳಶಾಸ್ತ್ರವನ್ನು ಶಾಲೆಯಲ್ಲಿ ಹೆಚ್ಚು ಶ್ರದ್ಧೆಯಿಂದ ಬೋಧಿಸಲಾಗುತ್ತಿತ್ತು." ಮತ್ತು ವಿದ್ಯಾರ್ಥಿಗಳು ಇದನ್ನು ಶ್ರದ್ಧೆಯಿಂದ ಕಲಿಯುತ್ತಿದ್ದರು. ಶಾಲೆಯಲ್ಲಿ ಪ್ಲೇಟೋವಿನ ಇಬ್ಬರು ಸಹೋದ್ಯೋಗಿಗಳು ತಮ್ಮ ಸಾಧನೆಗಳಿಂದ ಶಾಶ್ವತ ಕೀರ್ತಿಯನ್ನು ಪಡೆದರು.

ಪ್ಲೇಟೋವಿನ ಸಂಭಾಷಣೆಗಳ ನಾಯಕನೆಂದು ಅಮರನಾದ ಥಿಯೆಕ್‌ಟೆಟಸ್‌ನು ತ್ರಿಪರಿಮಾಣ

ಜ್ಯಾಮಿತಿಯನ್ನು ಹುಟ್ಟು ಹಾಕಿದರೆ ಯುಡೋಕ್ಸಸ್‌ನು ಅನುಪಾತದ ಸಿದ್ಧಾಂತ ವನ್ನು ಕಂಡುಹಿಡಿದ.

ಹೊರಾಕ್ಲಿಟಿಸ್ ಪೊನ್‌ಟಿಕಸ್‌ನು ಭೂಮಿಯ ಅಕ್ಷಭ್ರಮಣವನ್ನು ಮತ್ತು ಶುಕ್ರ ಹಾಗೂ ಬುಧರ ಸೂರ್ಯ ಪರಿಭ್ರಮಣವನ್ನು ಸಂಶೋಧಿಸಿದನು. ಮೆನಾಕ್‌ಚಿಮ್ಸ್‌ನು ಶಂಕುವಿನ ಖಂಡ (Conic sections)ಗಳನ್ನು ಕಂಡುಹಿಡಿದನು. ವಿನೋದ ಕವಿಯಾದ ಎಪಿಕ್ರೇಟಸನು ತನ್ನ ಪ್ರಸಿದ್ಧ ಸಂಭಾಷಣೆಗಳೊಂದರಲ್ಲಿ ಶಾಲೆಯ ಸಸ್ಯಶಾಸ್ತ್ರದ ಮತ್ತು ಜೈವಿಕ ವಿಧಾನ ಗಳನ್ನು ಚಿತ್ರಿಸಿದ್ದಾನೆ.

ಶಾಲೆಯಲ್ಲಿ ವಾಕ್ಪಟುತ್ವ ತರಬೇತಿಯು ಕ್ರಮ ಪ್ರಕಾರವಾಗಿತ್ತು. ಹಾಗೂ ವ್ಯಾಸಂಗದ ಬಲು ಮುಖ್ಯ ಶಾಖೆಯಾಗಿತ್ತು. ಜನಾಂಗಗಳು, ಅವುಗಳ ನಡತೆ ಹಾಗೂ ಸಂಪ್ರದಾಯಗಳು, ರಾಜಕೀಯ ಹಾಗೂ ಸಾಮಾಜಿಕ ಇತಿಹಾಸ ಮತ್ತು ಧಾರ್ಮಿಕ ನಂಬಿಕೆಗಳ ಅಧ್ಯಯನವನ್ನು ಭೂಗೋಳಶಾಸ್ತ್ರದಲ್ಲಿ ಜಾಗರೂಕತೆಯಿಂದ ಬೋಧಿಸಲಾಗುತ್ತಿತ್ತು. ವ್ಯಾಯಾಮವೂ ಇಲ್ಲಿ ಮುಖ್ಯ ಸ್ಥಾನ ಪಡೆದಿತ್ತು.

ಕಾನೂನು ಮತ್ತು ರಾಜಕೀಯದಲ್ಲಿ ಪಾಠ ಬೋಧಿಸುವ ಈ ಶಾಲೆಯ ಯಶಸ್ಸು ಪ್ಲೇಟೋವಿನ ತಾರುಣ್ಯದ ಕನಸನ್ನು ನೇರವಾಗಿ ಈಡೇರಿಸಿದಂತಾಗಿತ್ತು. ಏಕೆಂದರೆ, ದೇಶವಲ್ಲಿ ಯಾವುದೇ ಅಧಿಕಾರದ ಪದವಿಯನ್ನು ಒಪ್ಪಲು ಪ್ಲೇಟೋ ನಿರಾಕರಿಸಿದರೂ ಆಡಳಿತದಲ್ಲಿ ಪ್ರಮುಖ ಸ್ಥಾನಗಳಲ್ಲಿದ್ದ ತನ್ನ ಅನೇಕ ಯಶಸ್ವೀ ಶಿಷ್ಯರ ಮೂಲಕ ಗ್ರೀಸ್‌ನ ವಿದ್ಯಮಾನಗಳನ್ನು ತಾನೇ ನಿಜವಾಗಿ ನಿಯಂತ್ರಿಸಿದ್ದ.

ಪ್ಲೇಟೋವಿನ ಮರಣಾನಂತರವೂ ಅನೇಕ ಶತಮಾನಗಳವರೆಗೆ ಶಾಲೆಯ ಕೀರ್ತಿ ಮತ್ತು ಪ್ರಭಾವವು ಏರುತ್ತಲೇ ಇತ್ತು. ಶಾಲೆಯ ಅತ್ಯಂತ ಯಶಸ್ವೀ ಪಂಡಿತನಾದ ಅರಿಸ್ಟಾಟಲ್ ಅನಂತರ ಅದರ ಶಿಕ್ಷಕರಲ್ಲೊಬ್ಬನಾದನು. ಅಲೆಕ್ಸಾಂಡರನು ತನ್ನ ಬಾಲ್ಯದ ದಿನಗಳಲ್ಲಿ ಈತನ ಶಿಷ್ಯರಲ್ಲೊಬ್ಬನಾಗಿದ್ದನು. ಆದರೂ ಕೊನೆಯಲ್ಲಿ ಅರಿಸ್ಟಾಟಲನು ತನ್ನದೆ ಆದ ಬೇರೆ ದಾರಿ ಹಿಡಿದು ಲೈಸೆಯುಂನಲ್ಲಿ ತನ್ನದೇ ಆದ ಸಂಸ್ಥೆಯೊಂದನ್ನು ಸ್ಥಾಪಿಸಿದ. ವಿವಿಧ ಕಾಲ ಗಳಲ್ಲಿ ಪ್ಲೇಟೋವಿನ ಶಾಲೆಯಲ್ಲಿ ಬೋಧಕರಾಗಿದ್ದ ಯೂಡೋಕ್ಸಸ್, ಕ್ಸೆನೋಕ್ರೇಟಿಸ್, ಮಿನೆಡೆಮಸ್, ಫೋರಮಿಯಾನ್ ಮತ್ತು ಅರಿಸ್ಟೋನಿಮಸ್‌ರವರನ್ನೂ ತಮ್ಮ ತಮ್ಮ ಕಾಲದಲ್ಲಿ ಅನೇಕ ಗ್ರೀಕ್ ಮತ್ತು ರೋಮನ್ ದೊರೆಗಳು ಸಲಹೆ ಕೇಳುತ್ತಿದ್ದರು.

ಇಲ್ಲಿ ಬೋಧಿಸಿದ ಹಾಗೂ ಕಲಿತ ವಿಷಯಗಳ ಪಟ್ಟಿಯಲ್ಲಿ ತತ್ತ್ವಶಾಸ್ತ್ರವು ಅತಿ ಹೆಚ್ಚಿನ ಪ್ರಾಮುಖ್ಯ ಪಡೆಯುತ್ತದೆಂದು ಬೇರೆ ಹೇಳ ಬೇಕಾಗಿಲ್ಲ. ತತ್ತ್ವಶಾಸ್ತ್ರವನ್ನು ಅದರ ಎಲ್ಲಾ ಶಾಖೆಗಳಲ್ಲೂ ಅಭ್ಯಸಿಸಲಾಗುತ್ತಿತ್ತು.

ತತ್ವಶಾಸ್ತ್ರದ ಅಂತಿಮ ಸತ್ಯಗಳನ್ನು ಹೇಗೆ ಸಾಧಿಸುವುದು? ಈ ಬಲು ಮುಖ್ಯವಾದ ಪ್ರಶ್ನೆಗೆ ಪ್ಲೇಟೋ ತನ್ನ ಪತ್ರಗಳೊಂದರಲ್ಲಿ (೭ನೇ ಪತ್ರ) ಅತಿ ಸ್ಪಷ್ಟ ಶಬ್ದಗಳಲ್ಲಿ ಉತ್ತರಿಸಿದ್ದಾನೆ. ದರ್ಶನ ಶಾಸ್ತ್ರದ ಸತ್ಯಗಳನ್ನು "ಪ್ರತಿಯೊಂದು ಪ್ರಯತ್ನವನ್ನೂ ಹಾಗೂ ಅಪಾರ ಸಮಯವನ್ನೂ ಮುಡುಪಾಗಿಡುವುದರಿಂದ ದೊರಕಿಸಿಕೊಳ್ಳಬಹುದು. ಈ ಎಲ್ಲಾ ವಿವಿಧ ವಿಷಯಗಳನ್ನು, ಪದಗಳನ್ನು, ಹೇಳಿಕೆಗಳನ್ನು, ದೃಶ್ಯಪ್ರತಿಮೆಗಳನ್ನು ಮತ್ತು ಸಂವೇದನೆಗಳನ್ನು ಪರಸ್ಪರ ಉಜ್ಜಿನೋಡಬೇಕು; ದ್ವೇಷರಹಿತ ಪ್ರಶ್ನೋತ್ತರಗಳಿಂದ ಮಿತ್ರಸಂಭಾಷಣೆಯಲ್ಲಿ ಇವನ್ನು ಬಳಸಿ ಪರೀಕ್ಷಿಸಲೇಬೇಕು. ಮನುಷ್ಯನ ಮನಸ್ಸನ್ನು ಬಳಲಲು ಸಾಧ್ಯವೋ ಆಗಲೇ ಪ್ರತಿಯೊಂದು ವಿಷಯದ ಅರಿವು ಹೊಳೆದೀತು," ಎಂದಿದ್ದಾನೆ.

ಇಲ್ಲಿ ಬಳಸಿದ ಬೋಧನಾ ವಿಧಾನವೆಂದರೆ ಚರ್ಚೆ, ವಾದ ಹಾಗೂ ಪ್ರಶ್ನೋತ್ತರಗಳು. ಬೋಧನೆಯ ಅಂತಿಮ ಹಂತವಾದ "ಪ್ರಶ್ನೆ ಮತ್ತು ಉತ್ತರ"ವು ವಾಸ್ತವವಾಗಿ ಅತಿ ಪ್ರಮುಖ

ಭಾಗವಾಗಿತ್ತು. ಏಕೆಂದರೆ, ಪ್ಲೇಟೋ ಈ ವಿಧಾನದಲ್ಲೇ ಪರಿಣಾಮಕಾರಿಯಾಗಿದ್ದ. ಆತನ ಎಲ್ಲಾ ವಿಸ್ತೃತ ಬರಹಗಳೂ ಸಂಭಾಷಣೆಯ ಸ್ವರೂಪದಲ್ಲೇ ಸಂಯೋಜಿಸಲಾಗಿವೆಯಷ್ಟೆ.

ಕ್ರಿಯಾತ್ಮಕ ಉದ್ದೇಶಗಳಲ್ಲಂತೂ ಶಾಲೆಯು ಸಂಪೂರ್ಣವಾಗಿ ಅಸಾಂಪ್ರದಾಯಿಕ ದೃಷ್ಟಿಕೋನವನ್ನು ಪಡೆದಿತ್ತು. ಇಂದಿನ ಸಂಶೋಧಕರಂತಹ ತನ್ನ ಹಿರಿಯ ವಿದ್ಯಾರ್ಥಿಗಳಿಗೆ ಪ್ಲೇಟೋ ಒಂದು ವಿಷಯದ ಬಗೆಗೆ ಪರೀವಿಕ್ಷಣೆ ಹಾಗೂ ಚರ್ಚೆಗಳನ್ನು ಪ್ರಾಮಾಣಿಕವಾಗಿ ಹಾಗೂ ತೀವ್ರವಾಗಿ ನಡೆಸಲು ಸ್ಫೂರ್ತಿ ನೀಡಿದ್ದ. ಹೀಗೆ ಲಭ್ಯವಾದ ಫಲಿತಾಂಶಗಳು ಕೆಲವೇಳೆ ಪರಸ್ಪರ ತದ್ವಿರುದ್ಧವಾಗಿರುತ್ತಿದ್ದವು.

ಯೂಡೋಕ್ಸಸ್ ಎಂಬ ಗಣಿತಜ್ಞನ ಹಾಗೂ ಸ್ಪೆಯುಸಿಪಸ್‌ರ ನಡುವೆ ಸತ್ ಜೀವನದಲ್ಲಿ ಸುಖದ ಪಾತ್ರದ ಬಗೆಗೆ ಅಭಿಪ್ರಾಯ ಭೇದವನ್ನು ಸ್ವತಃ ಅರಿಸ್ಟಾಟಲನೇ ಬರೆದಿದ್ದಾನೆ. ಮಾನವ ಜೀವನದಲ್ಲಿ ಸುಖವು ಅತ್ಯಂತ ಸತ್ ಎಂದು ಯುಡೋಕ್ಸಸ್ ಹೇಳಿದರೆ ಸ್ಪೆಯುಸ್ಸಿಯಸ್ ಸತ್ ಜೀವನದಲ್ಲಿ ಸುಖಕ್ಕೆ ಸ್ಥಾನವಿರಬಾರದೆನ್ನುತ್ತಾನೆ.

ಖ್ಯಾತ ಕಲಾವಿದ ರ್‍ಯಾಫೆಲ್ಲನು ಪ್ಲೇಟೋ ಮತ್ತು ಅರಿಸ್ಟಾಟಲ್ ತಮ್ಮ ಸುತ್ತ ಶಿಷ್ಯರನ್ನು ಗುಂಪಾಗಿಸಿಕೊಂಡು ಮನಸ್ಸು ಹಾಗೂ ಆತ್ಮದ ವಿಚಾರದಲ್ಲಿ ಬೋಧಿಸುವ ಅಥೆನಿಯನ್ ಅಕೆಡಮಿಯ ಅದ್ಭುತವಾದ ಊಹಾ ವರ್ಣಚಿತ್ರವೊಂದನ್ನು ಚಿತ್ರಿಸಿದ್ದಾನೆ.

ಡಯೋಜಿನಸ್ ಪ್ರಕಾರ ಕ್ರಿಸ್ತಪೂರ್ವ ೩೪೭ರಲ್ಲಿ ತನ್ನ ೮೧ನೇ ಹುಟ್ಟಿದ ದಿನದಂದೇ ಪ್ಲೇಟೋ ನಿಧನನಾದ. ಆತನ ಸಾವಿನ ನಂತರ ಅವನ ಅಣ್ಣನ ಮಗ ಸ್ಪೆಯುಸ್ಸಿಯಸ್ ಶಾಲೆಯ ಮುಖ್ಯಸ್ಥನಾಗಿ ೮ ವರ್ಷಗಳ ಕಾಲವಿದ್ದು ತೀರಿಕೊಂಡ. ಅನಂತರ ಕ್ಸೆನೊಕ್ರೆಟಸ್ ಸಂಸ್ಥೆಯ ಯಜಮಾನನಾಗಿ ಆಯ್ಕೆಯಾಗಿ ೨೫ ವರ್ಷಗಳ ಕಾಲ ಕೀರ್ತಿವಂತನಾಗಿ ಅದನ್ನು ನಡೆಸಿಕೊಂಡು ಬಂದ.

ಹೀಗೆ ಪ್ಲೇಟೋ ಸ್ಥಾಪಿಸಿದ ಶಾಲೆ ಸುಮಾರು ೯೦೦ ವರ್ಷಗಳವರೆಗೆ ಆತನ ಸಾವಿನ ನಂತರವೂ ಮುಂದುವರೆಯಿತು. ಅನಂತರ ಕ್ರಿಸ್ತಶಕ ೫೨೯ರಲ್ಲಿ ಪೂರ್ವ ರೋಮನ್ ಚಕ್ರಾಧಿಪತ್ಯದ ಪ್ರಮುಖ ದೊರೆ ಮೊದಲನೇ ಜಸ್ಟಿನಿಯನ್ ಎಂಬುವನು ಸ್ವಲ್ಪವಟ್ಟಿನ ಸಂಪ್ರದಾಯಿಕ ಕ್ರೈಸ್ತಮತದ ಕಟ್ಟಾ ಆಸ್ಥೆಯಿಂದಾಗಿ ಪ್ಲೇಟೋವಿನ ಶಾಲೆಯನ್ನೂ ಮತ್ತು ದರ್ಶನಶಾಸ್ತ್ರ, ಕಾನೂನು ಹಾಗೂ ರಾಜಕೀಯದಲ್ಲಿ ಪಾಠ ನೀಡುತ್ತಿದ್ದ ಇತರ ಎಲ್ಲಾ ಸಂಸ್ಥೆಗಳನ್ನೂ ಮುಚ್ಚಿದ.

ಆದರೆ ಆ ವೇಳೆಗಾಗಲೇ ಶಾಲೆಯು ತನ್ನ ಆಕಾಂಕ್ಷೆಗಿಂತ ಹೆಚ್ಚು ಕೆಲಸಮಾಡಿತ್ತು. ತನಗಿಂತ ಹಿಂದಿದ್ದ ಎಲ್ಲಾ ಮಾನವ ಚಿಂತನೆಯ ಪ್ರಮುಖ ಅಂಶಗಳ ಪೂರ್ಣಜ್ಞಾನವನ್ನು ಪ್ಲೇಟೋ ಗಳಿಸಿದ ಮತ್ತು ತನ್ನ ಕಡೆಯಿಂದ ತನ್ನ ನಂತರದ ಎರಡು ಸಾವಿರ ವರ್ಷಗಳ ಅಥವಾ ಇನ್ನೂ ಹೆಚ್ಚಿನ ವರ್ಷಗಳ ಎಲ್ಲರ ಚಿಂತನೆಯ ಮೇಲೂ ಪ್ರಭಾವ ಬೀರಿದ.

ಒಂದು ವಿಷಯವನ್ನಂತೂ ದೃಢವಾಗಿ ಹೇಳಬಹುದು. ಒಂದು ಹೊಸ ನಾಗರಿಕತೆಯನ್ನು ಅಂದರೆ ಇಂದಿನ ಪಾಶ್ಚಾತ್ಯ ನಾಗರಿಕತೆಯನ್ನು ಸೃಜಿಸಿ ಮುನ್ನಡೆಸಲು ಅಪಾರ ಶಾಶ್ವತ ಮೌಲ್ಯವನ್ನು ಸಾಧಿಸಿದ ಚಿಂತನೆಯ ಅತ್ಯಂತ ಪರಿಗಣನೀಯ ವ್ಯಕ್ತಿಯೆಂದರೆ ಪ್ಲೇಟೋ. ಈ ಬೃಹತ್ ಯಶಸ್ಸನ್ನು ಸಾಧಿಸಲು ಆತನ ಶಾಲೆಯು ಅತ್ಯಂತ ಸಾಧಕ ಪಾತ್ರವನ್ನು ವಹಿಸಿತು. ✡



✻ ವಾ. ರಾ. ಮುರಳೀಹಳ್ಳಿ

# ಉಸಿರಾಟವೆಂದರೆ ಆಟವಲ್ಲ

ಕಸ್ತೂರಿಯ ೧೯೮೬ ರ ಆಗಸ್ಟ್ ಸಂಚಿಕೆಯಲ್ಲಿ ಡಾ. ಪೈಯವರು ತಮ್ಮ ಲೇಖನದಲ್ಲಿ ನಮ್ಮ ಅನೈಸರ್ಗಿಕ ಉಸಿರಾಟವನ್ನು ಸರಿಪಡಿಸಲು ಕೆಲವು ಉಪಾಯಗಳನ್ನು ಸೂಚಿಸಿರುವರು. ಅದರಲ್ಲಿ ಸೂಚಿತವಾಗಬಹುದಾದ ಕೆಲವು ಪ್ರಶ್ನೆಗಳನ್ನೆತ್ತಿಕೊಂಡು ಈ ಲೇಖನವನ್ನು ಬರೆದಿದ್ದೇನೆ. ಆ ಪ್ರಶ್ನೆಗಳೆಂದರೆ ಇವು:

೧) ಮೇಲ್ಮೈ ಉಸಿರಾಟವೆಂದರೇನು? ಅದರ ದುಷ್ಪರಿಣಾಮಗಳಾವವು?

೨) ಆಳವಾದ ಉಸಿರಾಟದಿಂದ ಪರಿಹಾರವುಂಟೇ?

೩) ನೈಸರ್ಗಿಕ ಉಸಿರಾಟವೆಂದರೇನು? ಅದನ್ನು ಹೇಗೆ ಸಾಧಿಸಬೇಕು?

ಇದಕ್ಕೆ ಮೊದಲು ಉಸಿರನ್ನು ಶ್ವಾಸಕೋಶಗಳ ಏಳೂವರೆ ಕೋಟಿ ಸಣ್ಣ ಚೀಲಗಳಲ್ಲೆಲ್ಲ ತುಂಬುವಂತೆ ಹಂಚಬೇಕೆನ್ನುವುದನ್ನು ಗಮನಿಸಬೇಕು. ಈ ಶ್ವಾಸಕೋಶಗಳು ಎರಡಿದ್ದು ಒಂದೊಂದೂ ಸೀಳಿದ ಗಂಟೆಯಾಕಾರದಲ್ಲಿವೆ. ಸಣ್ಣ ಚೀಲಗಳು ಆಕಾರಕ್ಕೆ ಅನುಸರಿಸಿ ಹಂಚಿಹೋಗಿವೆ. ಬಹಳಷ್ಟು ಕೆಳಭಾಗದಲ್ಲಿವೆ. ಅಶುದ್ಧ ರಕ್ತವು ಈ ಎಲ್ಲ ಚೀಲಗಳಿಗೂ ಬಂದು ಉಸಿರಿನ ಕಾರಣ ಶುದ್ಧವಾಗಿ ಶುದ್ಧ ರಕ್ತವಾಹಿನಿಗಳಲ್ಲಿ ಹರಿದು ಹೋಗುತ್ತದೆ.

ಮೇಲ್ಮೈ ಉಸಿರಾಟವೆಂದರೆ ಎದೆ ತುಂಬುವಂತೆ ಸಾವಕಾಶವಾಗಿ ಉಸಿರೆಳೆದುಕೊಳ್ಳದೆ, ಅವಸರದಲ್ಲಿ ಸ್ವಲ್ಪವೇ ಹವೆಯನ್ನು ಒಳಗೆ ತೆಗೆದುಕೊಳ್ಳುವುದು. ಅದರಿಂದ ಶ್ವಾಸಕೋಶಗಳ ಮೇಲ್ಭಾಗ ಮಾತ್ರ ಹವೆಯಿಂದ ತುಂಬಲು ಸಾಧ್ಯವಾಗುವುದು. ಉಸಿರು ಇಡೀ ಶ್ವಾಸಕೋಶವನ್ನು ತಲುಪದ್ದರಿಂದ ಪ್ರಾಣವಾಯುವು ಎಲ್ಲ ಚೀಲಗಳಿಗೂ ತಲುಪುವುದಿಲ್ಲ. ಹೀಗಾಗಿ ಅಶುದ್ಧ ರಕ್ತವು ಶುದ್ಧವಾಗದೇ ಶುದ್ಧ ರಕ್ತವಾಹಿನಿಗಳಲ್ಲಿ ಹರಿಯುವುದು.

ಕ್ಷಿಪ್ರವಾಗಿ ಆಳವಾಗಿ ಅಥವಾ ದೀರ್ಘವಾಗಿ ಉಸಿರನ್ನು ಒಳಗೆ ತೆಗೆದುಕೊಳ್ಳುವುದೆಂದರೆ ಕಿಬ್ಬೊಟ್ಟೆಯನ್ನು ಚಲಿಸದೆ ಕೇವಲ ದೀರ್ಘವಾಗಿ ಉಸಿರನ್ನು ಒಳಗೆ ತೆಗೆದುಕೊಳ್ಳುವುದು. ಇದು ಮೇಲ್ಮೈ ಉಸಿರಾಟಕ್ಕಿಂತ ಹೆಚ್ಚು ಉಪಯುಕ್ತವೇನೋ ನಿಜ. ಆದರೆ ಇದು ಕೂಡ ಮುಂದೆ ವಿವರಿಸಿದ ಕಾರಣದಿಂದಾಗಿ ಅಷ್ಟು ಹಿತಕರವಲ್ಲ.

ನೈಸರ್ಗಿಕ ಉಸಿರಾಟವನ್ನು ಸರಿಯಾಗಿ ತಿಳಿಯಲು ಸೊಂಟ ಕುತ್ತಿಗೆಗಳ ನಡುವಿನ ಅನೈಚ್ಛಿಕ ಕ್ರಿಯಾಶೀಲವಾದ (Involuntary) ಭಾಗಗಳನ್ನು ತಿಳಿಯಬೇಕು. ಅಲ್ಲಿ (೧) ರಕ್ತ ಮತ್ತು ಹವೆಯ ಭಾಗ (ಎದೆ) ಮತ್ತು (೨) ಆಹಾರ ಮತ್ತು ಅದರ-ಅದರಲ್ಲಿಂದ ಹೊರಹೋಗುವ ಕಲ್ಮಶಗಳ ಭಾಗ (ಹೊಟ್ಟೆ) ಹೀಗೆ ಎರಡು ಮುಖ್ಯ ವಿಭಾಗಗಳಿವೆ. ಇವುಗಳ ನಡುವೆ ಒಂದು ನೇಪಥ್ಯವಿದೆ. ಇದು ಹೊಟ್ಟೆಯ ಭಾಗದಲ್ಲಿ ನಿಬಿಡವಾಗಿ ತುಂಬಿಕೊಂಡ ಜಠರ, ಕರುಳು ಇತ್ಯಾದಿಗಳ ಕಾರಣ ಮೇಲೆ ಒತ್ತಲ್ಪಡುತ್ತದೆ.

ವಾತಾವರಣದ ಒತ್ತಡದ ನಿಯಮದಂತೆ ಹೊರಗಿನ ಹವೆಯ ಒತ್ತಡವು ಎದೆ ಭಾಗದ ಪೊಳ್ಳಿನಲ್ಲಿರುವ ಒತ್ತಡಕ್ಕಿಂತ ಹೆಚ್ಚಿರಬೇಕು. ಎಂದರೆನೇ ಉಸಿರು ಒಳಗೆ ಹೋಗಲು ಸಹಾಯವಾಗುವುದು. ನಿಃಶ್ವಾಸದ ನಂತರ ಎದೆ ಭಾಗ ಪೊಳ್ಳಿರುವುದೇನೋ ನಿಜ. ಉಸಿರನ್ನು ಒಳಗೆ ಎಳೆದುಕೊಳ್ಳುತ್ತಿದ್ದಂತೆಯೇ ಕಿಬ್ಬೊಟ್ಟೆಯನ್ನು (ಹೊಕ್ಕಳ ಕೆಳಗಿನ ಭಾಗ) ಉಬ್ಬಿಸಿದರೆ ಕರುಳು ಜಠರಾದಿ ಭಾಗಗಳಿಗೆ ಹೆಚ್ಚು ಅವಕಾಶವಿರುವುದರಿಂದ ಕೆಳಗೆ ಸರಿಯುತ್ತವೆ. ಪರದೆಯೂ (ನೇಪಥ್ಯ) ಕೆಳಗೆ ಬಂದು ಹವೆಗೆ ಹೆಚ್ಚು ಜಾಗೆ ಸಿಗುವಂತೆ ಅನುವಾಗುತ್ತದೆ. ಉಸಿರೆಳೆದುಕೊಳ್ಳುತ್ತಿದ್ದಂತೆಯೇ ಕಿಬ್ಬೊಟ್ಟೆಯನ್ನು ಒಳಗೆ ದಬ್ಬಬೇಕು (ಆಕಳಿಸಬೇಕು). ಆಗ ಪರದೆಯು ಸಮೀಪದ, ಅಂದರೆ ಎದೆಯ ಕೆಳ ಭಾಗದಲ್ಲಿದ್ದ ಹವೆಯು ಬೇರೆ ದಾರಿ ಕಾಣದೆ ಶ್ವಾಸಕೋಶದ ಕೆಳ ಭಾಗದಲ್ಲಿರುವ ಸಣ್ಣ ಚೀಲಗಳಲ್ಲಿ ಪ್ರವೇಶಿಸುವುದು.

ಈ ಕೆಲಸ ಸಕ್ರಮವಾಗಿ ಆದಾಗ ಎದೆಯ ಕೆಳ ಭಾಗ(ಮೊಲೆಗಳ ನಡುವಿನ ಭಾಗ)ದಲ್ಲಿ ತಂಪೆನಿಸಿ ಉಲ್ಲಾಸ-ಆಹ್ಲಾದದಾಯಕವೆನಿಸುವುದು. ಇದು ಕೆಳ ಕೋಶಗಳಲ್ಲಿನ ರಕ್ತ ಶುದ್ಧವಾಗುತ್ತಿರುವುದರ ಲಕ್ಷಣ.

ಕಿಬ್ಬೊಟ್ಟೆಯ ಚಲನವಲನವಿಲ್ಲದೆ ಕೇವಲ ದೀರ್ಘವಾಗಿ ಉಸಿರೆಳೆದುಕೊಳ್ಳುವುದು ಅಷ್ಟೊಂದು ಉಪಯೋಗಕರವಲ್ಲ. ಏಕೆಂದರೆ, ಕೆಳಗಿನಿಂದ ದಬ್ಬಲ್ಪಟ್ಟಾಗ ಮಾತ್ರ ತುಂಬಬಹುದಾದ ಸಣ್ಣ ಚೀಲಗಳು ಹವಾರಹಿತವಾಗಿ ಉಳಿಯುವ ಸಂಭವವಿರುವ ಕಾರಣ ಅದು ಅನೈಸರ್ಗಿಕವಾದುದು. ನೈಸರ್ಗಿಕ ಉಸಿರನ್ನು ಕಿಬ್ಬೊಟ್ಟೆ ಹಾಗೂ ಪರದೆಗಳ ಚಲನವಲನದಿಂದಲೇ ಸಾಧಿಸಬೇಕು.

ಅದಕ್ಕಾಗಿ ಈ ಕೆಳಗಿನ ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

೧) ಉಸಿರು ಒಳಗೆ ಬರುತ್ತಿದ್ದಂತೆಯೇ ಕಿಬ್ಬೊಟ್ಟೆಯನ್ನು ಉಬ್ಬಿಸಬೇಕು.

೨) ಉಸಿರು ನಿಲ್ಲಿಸದೇ ಕಿಬ್ಬೊಟ್ಟೆಯನ್ನು ಒಳಗೆ ಸರಿಸಬೇಕು.

೩) ಶ್ವಾಸ ಕ್ರಿಯೆಯು ಸಾವಧಾನವಾಗಿ ಒಂದೇ ವೇಗದಿಂದ ನಡೆಯಬೇಕು.

೪) ಧಡಿಕೆಗಳಿಗೆ (Jerk) ಅವಕಾಶವೀಯಬಾರದು. ಸ್ನಾಯುಗಳಿಗೆ ಅನವಶ್ಯಕವಾದ ಒತ್ತಡ ಬೀಳುತ್ತದೆ.

೫) ಶ್ವಾಸ (ಉಸಿರೆಳೆಯುವದನ್ನು) ಸಾವಕಾಶವಾಗಿ ನಿಲ್ಲಿಸಬೇಕು.

೬) ಹೊಟ್ಟೆ ಬಿರಿಯುವಂತೆ ಉಣ್ಣುವ ಬದಲು ಸ+ಅವಕಾಶವಾಗಿ ಉಣ್ಣಬೇಕು. ಹೆಚ್ಚು ಉಂಡರೆ ಕಿಬ್ಬೊಟ್ಟೆಯ ಚಲನವಲನ ಸಾಧ್ಯವಾಗುವುದಿಲ್ಲ.

ಹೀಗೆ ಮಾಡುವುದರಿಂದ ಉಂಟಾಗುವ ಪರಿಣಾಮಗಳೆಂದರೆ:

೧) ಮುಖ್ಯವಾಗಿ ರಕ್ತಶುದ್ಧಿ — ಇದಕ್ಕೆ ಹೊಂದಿಕೊಂಡೇ.

೨) ಕಿಪ್ಪೊಟ್ಟೆಯ ಚಲನವಲನದಿಂದಾಗಿ ಹೊಟ್ಟೆಯ ಭಾಗದ ಅವಯವಗಳ ಚಲನವಲನದ ಕಾರಣ ಆಹಾರವು ಜೀರ್ಣವಾಗುವುದಕ್ಕೆ ಅನುವಾಗುತ್ತದೆ.

೩) ಕರುಳಿನಲ್ಲಿ ಅಶುದ್ಧ ವಾಯುವಿನ ಸಂಗ್ರಹ ತಪ್ಪುತ್ತದೆ.

೪) ಕರುಳಿನ ಉಳಿಯಬಹುದಾದ ಕ್ರಿಮಿಗಳಿಗೆ "ಖೊ" ಕೊಟ್ಟಂತಾಗುತ್ತದೆ.

೫) ಹೊಟ್ಟೆಯಲ್ಲಿ ಕೂಡಿ ಬೀಳಬಹುದಾದ ಸೆಣವು ಕರಗಿ ಬೊಜ್ಜು ಬರುವುದು ತಪ್ಪುತ್ತದೆ. ತತ್ಪರಿಣಾಮವಾಗಿ,

೬) ಹೆಂಗಸಾಗಲಿ ಗಂಡಸಾಗಲಿ ಸೊಂಟದ ಅಳತೆಯ ಆಕಾರ ಮೀರದೆ ಶಾರೀರಿಕ ಅಂದವು ಕಾಯಲ್ಪಡುತ್ತದೆ.

೭) ಪ್ರಾಣಾಯಾಮದಲ್ಲಿ ವಿಶೇಷ ಸಹಾಯವಾಗುತ್ತದೆ.

ನಿಃಶ್ವಾಸವು ಕಶ್ಮಲಗಳನ್ನು ಹೊರಗೆ ಹಾಕುವ ಕ್ರಿಯೆ ಎಷ್ಟು ಸಾಧ್ಯವೋ ಅಷ್ಟು ಪೂರ್ಣವಾಗಿರಬೇಕು. ಇಲ್ಲವಾದರೆ ಅಶುದ್ಧ ಹವೆ ದೇಹದಲ್ಲಿ ಉಳಿಯುವುದು. ಆದ್ದರಿಂದ ಶ್ವಾಸದಷ್ಟೇ ನೀಃಶ್ವಾಸವೂ ಮಹತ್ವದ್ದು. ಶ್ವಾಸ ನಿಃಶ್ವಾಸಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಡೆಯುವ ಕ್ರಿಯೆಗಳು—ಇವೆರಡರ ಮಧ್ಯೆ ನಿಲುಗಡೆಯಿರಬೇಕು. ಅಂದರೆ ಒಮ್ಮೆ ಉಸಿರಾಡಿಸಿದಾಗ—೧) ಶ್ವಾಸ ೨) ನಿಲುಗಡೆ ೩) ನಿಃಶ್ವಾಸ ೪) ನಿಲುಗಡೆಗಳೆಂಬ ನಾಲ್ಕು ಕ್ರಿಯೆಗಳು ಸಂಭವಿಸುತ್ತವೆ. ಇವನ್ನೇ ಸಂಸ್ಕೃತದಲ್ಲಿ ೧) ಶ್ವಾಸ (ಪೂರಕ) ೨) ಪೂರಕ ಕುಂಭಕ ೩) ನಿಃಶ್ವಾಸ ರೇಚಕ ಮತ್ತು ೪) ರೇಚಕ ಕುಂಭಕವೆಂದು ಕರೆಯುತ್ತಾರೆ. ಈ ಕ್ರಿಯೆಯಲ್ಲಿ ಧಡಿಕೆಯಿರಬಾರದು ಇಲ್ಲವಾದರೆ ದೇಹದಲ್ಲಿ ಸ್ನಾಯುಗಳು ಹೆಚ್ಚು ಒತ್ತಡಕ್ಕೆ ಒಳಗಾಗುವವು.

ನೈಸರ್ಗಿಕ ಉಸಿರು ಆಳವಾಗಿರಬೇಕಾದದ್ದು ಅನಿವಾರ್ಯ. ಬರಿ ಆಳವಷ್ಟೇ ಅಲ್ಲ ಕಿಪ್ಪೊಟ್ಟೆ ಪರದೆಗಳ ಚಲನವಲನಗಳಿಂದ ಕೂಡಿದ ಆಳವಾದ ಉಸಿರು. ನೈಸರ್ಗಿಕ ಉಸಿರಿಗೆ ಕಾರಣವೇನು? ದೈಹಿಕ ಮಾನಸಿಕ ಅಥವಾ ಬೌದ್ಧಿಕ ಕ್ರಿಯೆಗಳಿಗೆ ಶಕ್ತಿ ಬೇಕು. ಈ ಶಕ್ತಿಯು ಪ್ರಾಣ ಅಪಾನಗಳ ಸಂಗಮ ನಾಭಿಯಲ್ಲಿ ಕುಂಭಕದ ವೇಳೆಗೆ ಆದಾಗ ಲಭ್ಯವಾಗುವುದು. ಕುಂಭಕವು ಲಂಬಿಸಿದಾಗ (ದೊಡ್ಡದಾದಾಗ) ಮುಂದಿನ ಉಸಿರು ಅವಸರದಿಂದ ಒಳಗೆ ಬರಬೇಕಾಗುವುದು. ಹೀಗೆ ಉಸಿರಾಟ ತಪ್ಪು ದಾರಿಯನ್ನು ಹಿಡಿಯುವದು. ಅನೇಕ ನೋಟ, ಕೇಳೋಣ ಚಿಂತಿಸುವಿಕೆಗಳ ಜಂಜಾಟದಲ್ಲಿ ಸರಿಯಾದ ಉಸಿರಿನ ಪರಿವೆಯನ್ನು ಕೈ ಬಿಡುವೆವು.

ಪ್ರವಾಸಕ್ಕೆಂದು, ಬಸ್ಸು, ಉಗಿಬಂಡಿ, ಕಾರು, ವಿಮಾನಗಳಲ್ಲಿ ಜೊತೆಗಾರರಿಲ್ಲದೆ ಇರುವಾಗ ಅಥವಾ ವಿಹಾರಕ್ಕೆಂದು ಸಂಜೆ ಮುಂಜಾನೆಗಳ ಅಲೆದಾಟದ ಸಮಯದಲ್ಲಿ ಇಲ್ಲವೆ ವಿಶ್ರಾಂತಿಗೆಂದು ಅಥವಾ ಏನೇ ಕಾರಣದಿಂದ ಒಬ್ಬರೇ ಇರುವಾಗ ಅವಶ್ಯವೂ ಲಾಭದಾಯಕವೂ ಆದ ಸರಿಯಾದ ಉಸಿರಿನ ಕ್ರಮವನ್ನು ನಾವು ರೂಢಿಸಿಕೊಳ್ಳಬೇಕು. ಹೇಗೂ ವೇಳೆ ನಿಮ್ಮದೇ ಆಗಿರುತ್ತದಲ್ಲವೇ? ಅಂಥ ಸಮಯದಲ್ಲಿ ಪ್ರಕೃತಿದತ್ತವಾದ ಉಸಿರಾಟದ ಕ್ರಮವನ್ನು ಮತ್ತೆ ರೂಢಿಸಿಕೊಳ್ಳಬೇಕು. ✡



# ನೆಹರೂ ಆಲೋಚನೆಯ ರೀತಿ

ಭಾರತದ ಕೋಟಿ ಸಂಖ್ಯೆಯ ಜನತೆಯ ಕಣ್ಮಣಿ, ಭಾರತದ ಚೆಂಗುಲಾಬಿ ಎನಿಸಿದ್ದ ಪಂಡಿತ ಜವಾಹರಲಾಲ ನೆಹರೂರ ವ್ಯಕ್ತಿತ್ವವು ಅಸದೃಶವಾದದ್ದು. ಉತ್ಕಟ ದೇಶಾಭಿಮಾನಿ, ನಿರುಪಮ ಸ್ವಾತಂತ್ರ್ಯಪ್ರೇಮಿ, ಅಪ್ಪಟ ಪ್ರಜಾ ಪ್ರಭುತ್ವವಾದಿ, ಪ್ರತಿಭಾನ್ವಿತ ಲೇಖಕ, ಅನುಪಮ ಮಾನವತಾವಾದಿ, ರಸಿಕ ಜೀವಿ ಹೀಗೆಯೇ ಅವರ ವ್ಯಕ್ತಿತ್ವದ ಅನೇಕ ಮುಖಗಳನ್ನು ಕೊನೆಯಿಲ್ಲದೆ ಎಣಿಸುತ್ತ ಹೋಗಬಹುದು. ಅವರಂಥ ನಾಯಕ ದೊರೆತದ್ದು ಭಾರತದ ಪುಣ್ಯವೆಂದೇ ಹೇಳಬೇಕು. ಅವರ ಜೀವನವು ಸಮಗ್ರ ರಾಷ್ಟ್ರದ ಜೀವನದೊಂದಿಗೆ ಬಿಡಿಸಲಾರದಷ್ಟು ಹಾಸುಹೊಕ್ಕಾಗಿ ಬೆರೆತು ಹೋಗಿತ್ತು. ಸಮರ್ಪಿತವಾದ ಅವರ ಜೀವನವು ಒಂದು ಮಹಾಕಾವ್ಯದಂತೆಯೆ ಇದ್ದಿತು. ಸ್ವಾತಂತ್ರ್ಯ ಹೋರಾಟ, ಆಮೇಲೆ ಭಾರತದ ಪ್ರಥಮ ಪ್ರಧಾನಿಯಾಗಿ ಬಿಡುವಿಲ್ಲದೆ ಅವರು ಶ್ರಮಿಸಿದರು. ಆಗರ್ಭ ಶ್ರೀಮಂತ ಮನೆತನದಲ್ಲಿ ಜನಿಸಿದರೂ ಸ್ವಯಂಪ್ರೇರಣೆಯಿಂದ ಕಷ್ಟನಷ್ಟ, ಜೇಲುವಾಸಗಳನ್ನು ಅನುಭವಿಸಿದರು. ಇಷ್ಟೆಲ್ಲ ಕೋಲಾಹಲದ ಜೀವನದಲ್ಲಿ ಅವರು ಜೀವನದ ಅನೇಕ ಮೌಲ್ಯಗಳ ಬಗೆಗೆ ಆಳವಾಗಿ ವಿಚಾರ ಮಾಡಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಹುಶಃ ಯಾವ ರಾಜಕಾರಣಿಯಲ್ಲಿಯೂ ಇಲ್ಲದಷ್ಟು ವಿಚಾರದ ಆಳ, ಸಮತೂಕ, ವ್ಯಕ್ತ ಮಾಡುವ ಭಾಷಾ ಪ್ರಭುತ್ವ ಅವರಲ್ಲಿ ಇದ್ದುವು ಎಂಬುದು ಅಚ್ಚರಿಯ ಮಾತೇ ಸರಿ.

'ಡಿಸ್ಕವರಿ ಆಫ್ ಇಂಡಿಯಾ' ಮುಂತಾದ ಗ್ರಂಥಗಳಲ್ಲಿ ಅವರು ಪ್ರಾಚೀನ ಕಾಲದ ಇತಿಹಾಸ – ಸಂಸ್ಕೃತಿಗಳನ್ನು ಶೋಧಿಸಿದಂತೆ, ತಮ್ಮ ಇತರ ಬರೆಹ – ಭಾಷಣಗಳಲ್ಲಿ ಭವಿಷ್ಯ ಕಾಲದ ಪ್ರಗತಿಯ ಬಗೆಗೂ ಆಳವಾಗಿ ವಿಚಾರ ಮಾಡಿದ್ದಾರೆ. ಗತಕಾಲದ ಅನುಭವ ಪಡೆದುಕೊಂಡು ವರ್ತಮಾನ ಕಾಲದ ಸಮಸ್ಯೆಗಳನ್ನು ಎದುರಿಸುತ್ತ ಭವ್ಯ ಭವಿಷ್ಯ ಕಾಲದ ಕನಸುಗಳನ್ನು ನನಸಾಗಿಸುವ ರೀತಿಯಲ್ಲಿ ಅವರ ಜೀವನವಿತ್ತು. ಸಾಮಾನ್ಯವಾಗಿ ರಾಜಕಾರಣಿಗೆ ತತ್ಕಾಲೀನ ಸಮಸ್ಯೆಗಳನ್ನು ಬಿಡಿಸುವಷ್ಟರ ಮಟ್ಟಿಗೆ ವಿಚಾರ ಮಾಡುವ ಪ್ರವೃತ್ತಿ ಇರುವುದುಂಟು! ಶಾಶ್ವತ ಸತ್ಯ, ಸಾರ್ವಕಾಲಿಕ ಮೌಲ್ಯಗಳ ಬಗೆಗೆ ಸಾಮಾನ್ಯ ರಾಜಕಾರಣಿ ತಲೆ

---

**ಪ್ರೊ. ಜಿ. ಡಿ ನಾಡಕರ್ಣಿ**

---

ಕೆಡಿಸಿಕೊಳ್ಳುವುದು ಅಪರೂಪ. ಇದಕ್ಕೊಂದು ಅಪವಾದ ರೂಪವಾಗಿದ್ದರು ಪಂಡಿತ ಜವಾಹರಲಾಲ ನೆಹರು. ವಿಶ್ವವಿದ್ಯಾಲಯದ ಹಿರಿಯ, ಮೇಧಾವಿ ಪ್ರಾಧ್ಯಾಪಕನೊಬ್ಬ ಏಕಾಂತದಲ್ಲಿ ಗ್ರಂಥಗಳ ಸಹಾಯದಿಂದ ವಿಚಾರ ಮಾಡಿದರೆ ಯಾವ ಎತ್ತರಕ್ಕೆ ಮುಟ್ಟಬಹುದೋ, ವೈಚಾರಿಕವಾಗಿ ಆ ಎತ್ತರವನ್ನು ಅವರು ಮುಟ್ಟಿದ್ದರು ಎಂಬುದು ಕುತೂಹಲದ ಸಂಗತಿಯಾಗಿದೆ.

ಇದೆಲ್ಲದರ ಮಧ್ಯದಲ್ಲಿ ಅವರು ಸದಾ ಹಸನ್ಮುಖಿಯಾಗಿದ್ದು, ವಿನೋದ ಸ್ವಭಾವದವರಾಗಿದ್ದರು. ಅವರಿಗೆ ಶೀರ್ಷಾಸನದ ಮೇಲೆ

ಪ್ರೀತಿ ಬಹಳ. "ಅದೇಕೆ?" ಎಂದು ಕೆಲವರು ಕೇಳಿದಾಗ, ನೆಹರೂ ಉತ್ತರಿಸಿದರಂತೆ—"ಜಗತ್ತಿನ ವ್ಯವಹಾರವೆಲ್ಲ ತಿರುವು-ಮುರುವಾಗಿ ನಡೆಯುವಂತೆ ಕಾಣಿಸುವಾಗ, ನಾನು ತಲೆ ಕೆಳಗಾಗಿ ನಿಂತು, ಅವನ್ನು ಸರಿಯಾಗಿ ನೋಡಲು ಪ್ರಯತ್ನಿಸುವೆ" ಎಂದು! "ನಿಜವಾಗಿ ನಾನು ಯಾರು?" ಎಂದು ತಮ್ಮನ್ನೇ ಪ್ರಶ್ನಿಸಿಕೊಂಡು ಅದಕ್ಕೆ ವಿನೋದ ಪೂರ್ಣವಾಗಿ ಅವರು ಒಂದೆಡೆ ಉತ್ತರ ಕೊಟ್ಟಿದ್ದಾರೆ—"ಸಾಹಿತ್ಯ, ಇತಿಹಾಸ, ವಿಜ್ಞಾನ, ಕಾಯಿದೆ ಕ್ಷೇತ್ರಗಳಲ್ಲಿ ಆಸಕ್ತಿ ತೋರಿಸಿ ನಾನು ಅಭ್ಯಾಸ ಮಾಡಿದೆ. ನಂತರ, ನಾನು ಮಾಡಿದ್ದೇನು ಎಂದರೆ – ಭಾರತದಲ್ಲಿ ಬಹಳ ಜನಪ್ರಿಯವಾದ ಮತ್ತು ಬಹಳಷ್ಟು ಜನರು ಕೈಕೊಂಡ ಜೇಲಿಗೆ ಹೋಗುವ 'ಧಂಧೆ' ಯನ್ನು!"

ಅವರ ವಿಚಾರಶೀಲತೆಯನ್ನು ಕುರಿತು ಯೋಚಿಸುವಾಗ, ಅವರು ಇತಿಹಾಸ ಪ್ರಿಯರಾಗಿದ್ದರೂ ಸಂಪ್ರದಾಯಶರಣರೇನೂ ಆಗಿರಲಿಲ್ಲ ಎಂಬುದು ತಿಳಿದುಬರುತ್ತದೆ. ಸಂಪ್ರದಾಯದ ಬಿಗಿ ಸಂಕೋಲೆಗಳು ಅವರ ವ್ಯಕ್ತಿತ್ವವನ್ನು ಎಂದೂ ಬಂಧಿಸಲಿಲ್ಲ! ಸಂಕುಚಿತ ದೃಷ್ಟಿಯನ್ನು ಮೀರಿದ ವಿಶ್ವವಿಶಾಲ, ಉದಾರ ರೀತಿಯು ಅವರ ವಿಚಾರ ಪದ್ಧತಿಯಲ್ಲಿ ಇದ್ದಿತು. ಅಂಧಶ್ರದ್ಧೆಗೆ ಎಡೆಯೇ ಇಲ್ಲದ, ವಸ್ತುನಿಷ್ಠ ವೈಜ್ಞಾನಿಕ ದೃಷ್ಟಿಯು ಅವರ ಎಲ್ಲ ವಿಚಾರಗಳಲ್ಲಿ ಒಡೆದು ಕಾಣುವುದು ಒಂದು ಹಿರಿಯ ವೈಶಿಷ್ಟ್ಯ. ಆ ವಿಚಾರಗಳನ್ನು ವ್ಯಕ್ತಪಡಿಸುವಾಗ ಅವರ ಭಾಷೆಯು ಜಾಳುತನವನ್ನು ತೊರೆದು, ಖಚಿತವಾದ ನಿಷ್ಕೃಷ್ಟವಾದ ರೀತಿಯನ್ನು ಅನುಸರಿಸುತ್ತದೆ. ಎಷ್ಟೋ ಸಾರೆ ಅವರ ವಾಕ್ಯಗಳು ಒಂದು ಶಬ್ದವನ್ನು ಕೂಡ ಕಡಿಮೆ ಮಾಡಲು ಸಾಧ್ಯವಿಲ್ಲದಷ್ಟು ಸಾಂದ್ರವಾಗಿಬಿಟ್ಟು ಸೂತ್ರ ರೂಪವಾಗಿವೆ. ಕರ್ತವ್ಯ ಪ್ರಜ್ಞೆಯನ್ನು ಸದಾ ಜಾಗೃತವಾಗಿ ಇರಿಸಿಕೊಂಡಿದ್ದ ನೆಹರೂ – ೧೯೪೮ ರಲ್ಲಿಯೇ ಜನತೆಯನ್ನು ಎಚ್ಚರಿಸಿದ್ದಾರೆ— "ನಾವು ವ್ಯಕ್ತಿಯ ಮತ್ತು ರಾಷ್ಟ್ರದ ಹಕ್ಕುಗಳ ಬಗೆಗೆ ಬಹಳ ಮಾತನಾಡುತ್ತೇವೆ. ಆದರೆ-ನೆನೆಪಿರಲಿ! ಪ್ರತಿಯೊಂದು ಹಕ್ಕಿನ ಜೊತೆಗೂ ಕರ್ತವ್ಯದ ಹೊಣೆ ಇದ್ದೇ ಇದೆ! ಕರ್ತವ್ಯವನ್ನು ಕಡೆಗಣಿಸಿ ಹಕ್ಕುಗಳ ಸಲುವಾಗಿ ಹುಯಿಲೆಬ್ಬಿಸುವುದು ಈಗ ರೂಢಿಯಾಗಿದೆ. ನಮ್ಮ ಕರ್ತವ್ಯವನ್ನು ಸರಿಯಾಗಿ ನಿಭಾಯಿಸಿದರೆ, ಅದರ ಮೂಲಕ ಹಕ್ಕುಗಳು ತಾವಾಗಿಯೇ ಹರಿದು ಬರುತ್ತವೆ." ಮತ್ತೊಂದೆಡೆಗೆ ನೆಹರೂ– "ನಮ್ಮದು ವಿಶಾಲವಾದ ದೇಶ; ಅದರಲ್ಲಿ ನಾವೆಲ್ಲರೂ ತುಂಬಾ ಶ್ರಮಿಸಬೇಕಾಗಿದೆ. ಭಾರತದ ಪ್ರತಿಯೊಬ್ಬ ಸ್ತ್ರೀ ಮತ್ತು ಪುರುಷನು ತನ್ನ ಅಲ್ಪ ಕಾಣಿಕೆ ಸಲ್ಲಿಸಿದರೆ, ಅದೆಲ್ಲ ಒಟ್ಟುಗೂಡಿ ಬೃಹದಾಕಾರವಾಗಿ ದೇಶವನ್ನು ಸಮೃದ್ಧಗೊಳಿಸಿ ಪ್ರಗತಿ ಪಥದಲ್ಲಿ ಮುಂದುವರಿಸುತ್ತದೆ," ಎಂದು ಹಿತವಚನ ನುಡಿದಿದ್ದಾರೆ.

ಶಿಕ್ಷಣದ ಬಗೆಗೂ ನೆಹರೂರ ವಿಚಾರಗಳು ಮೌಲಿಕವಾಗಿವೆ. "ವಿದ್ಯಾರ್ಥಿಯ ನಿತ್ಯಜೀವನದಿಂದ ಬೇರ್ಪಡಿಸಿದ ಮತ್ತು ಭಾವೀ ನಾಗರಿಕನ ಜವಾಬ್ದಾರಿಯುಕ್ತ ಜೀವನದಿಂದ ಬೇರೆಯೇ ಆದ ಶಿಕ್ಷಣವು ಸಮರ್ಪಕವಾಗಲಾರದು. ಶಿಕ್ಷಣವು ಗಾಳಿಯಲ್ಲಿ ಜೀವಿಸಲಾರದು. ಮಗುವಿನ ಪರಿಸರ, ಸಹಜ ಅನುಭವಗಳನ್ನು ಶಿಕ್ಷಣವು ಗಣನೆಗೆ ತೆಗೆದುಕೊಳ್ಳಲೇಬೇಕು. ಅಲ್ಲದೆ, ದೊಡ್ಡವನಾದ ಮೇಲೆ ಅವನು ನಿಭಾಯಿಸಬೇಕಾದ ಕರ್ತವ್ಯಕ್ಕೆ ಶಿಕ್ಷಣವು ಅವನನ್ನು ಅಣಿಗೊಳಿಸಬೇಕು" (೧೯೨೮). ಮಗುವಿನ ಶಿಕ್ಷಣವು ಕೇವಲ ಭಾವನೆ ಮತ್ತು ವಿಚಾರ-ಶಕ್ತಿಗಳನ್ನು ಅಭಿವೃದ್ಧಿಪಡಿಸುವಲ್ಲಿ ಮುಕ್ತಾಯವಾಗಬಾರದು; ಒಂದಿಲ್ಲೊಂದು ಬಗೆಯ ಕೈಗಾರಿಕೆ ಇಲ್ಲವೆ ಕರಕುಶಲದ ತರಬೇತಿಯು ಶಿಕ್ಷಣದ ಅವಿಭಾಜ್ಯ ಅಂಗವಾಗಿ ಇರುವುದು ಅವಶ್ಯ. ಇದರಿಂದ ಮಗುವಿನ ಮನಸ್ಸು ಪ್ರಚೋದಿತವಾಗಿ, ಮಗುವಿನ ಮನಸ್ಸಿನ ಮತ್ತು ಹಸ್ತಗಳ ಚಟುವಟಿಕೆಯಲ್ಲಿ ಹೊಂದಾಣಿಕೆ ಆಗುತ್ತದೆ. ೧೯೫೫ ರಲ್ಲಿ ನೆಹರೂ ಮದ್ರಾಸಿನಲ್ಲಿಯ ಮಹಿಳಾ ಕಾಲೇಜೊಂದರಲ್ಲಿ ಮಾತನಾಡುತ್ತ, ಮಹಿಳೆಯರ ಶಿಕ್ಷಣದ ಸ್ವರೂಪ, ಅವಶ್ಯಕತೆಗಳನ್ನು ವಿವರಿಸಿದರು: "ಪುರುಷರ ಶಿಕ್ಷಣಕ್ಕಿಂತ, ಮಹಿಳೆಯರಿಗೆ ಶಿಕ್ಷಣ ನೀಡುವುದು ಹೆಚ್ಚು

ಮಹತ್ವದ್ದಾಗಿದೆ. ಸುಶಿಕ್ಷಿತ ಮಹಿಳೆಯಿಂದ ಪುರುಷನೂ ಪ್ರಭಾವಿತನಾಗಬಹುದು; ಮನೆಯಲ್ಲಿಯ ಮಕ್ಕಳು ಖಂಡಿತವಾಗಿ ಸುಶಿಕ್ಷಿತ ತಾಯಿಯಿಂದ ಒಳ್ಳೆಯ ಪ್ರಭಾವ ಪಡೆಯುವರು. ಶಾಲೆ, ಕಾಲೇಜುಗಳಲ್ಲಿಯ ಶಿಕ್ಷಣದ ಬಗೆಗೆ ನಾವೆಲ್ಲರೂ ಮಾತಾಡುತ್ತೇವೆ. ಅದು ಮಹತ್ವದ್ದೆಂಬುದೂ ನಿಜ. ಆದರೆ ಬೆಳೆಯುವ ಮಗುವಿನ ಮೊದಲ ಎಂಟು-ಹತ್ತು ವರ್ಷಗಳ ಶಿಕ್ಷಣವು ತಾಯಿಯಿಂದಲೇ ದೊರೆಯುವುದೆಂಬುದನ್ನು ನಾವು ನೆನಪಿನಲ್ಲಿಡಬೇಕು. ಆದ್ದರಿಂದ ಮಹಿಳೆಗೆ ಯೋಗ್ಯ ಶಿಕ್ಷಣವು ದೊರೆಯುವುದು ಅತ್ಯವಶ್ಯ." ಕೇವಲ ಪುಸ್ತಕಗಳ ವಾಚನವು ಮಾತ್ರ ಶಿಕ್ಷಣದ ಸಂಪೂರ್ಣ ಸ್ವರೂಪವಲ್ಲ; ವಿದ್ಯಾರ್ಥಿಯ ದೇಹ ಮತ್ತು ಮನಸ್ಸು ಎರಡರ ಬೆಳವಣಿಗೆಗೂ ಶಿಕ್ಷಣದಲ್ಲಿ ಅವಕಾಶವಿರಬೇಕು.

ವೇಷ-ಭೂಷಣಗಳ ಬಗೆಗೆ ನೆಹರೂರ ವಿಚಾರಗಳು ಮಾರ್ಮಿಕವಾಗಿವೆ— "ನಮ್ಮ ದೇಶದಲ್ಲಿ ಉದ್ದನ್ನ ಗಡ್ಡ ಬಿಟ್ಟ, ಜಟಾಧಾರಿಯಾದ, ಕಾವೀ ಬಟ್ಟೆ ಧರಿಸಿದ ಯಾವುದೇ ವ್ಯಕ್ತಿಯು ಆಧ್ಯಾತ್ಮಿಕ ವ್ಯಕ್ತಿಯೆಂದು ಸಾಮಾನ್ಯವಾಗಿ ಭಾವಿಸಲ್ಪಡುತ್ತಾನೆ. ಅಂಥವನು ತಾನು ದೇವರ ಏಜೆಂಟನೆಂದು ನಟಿಸುತ್ತ ಜನಸಾಮಾನ್ಯರನ್ನು ಸುಲಭವಾಗಿ ಸುಲಿಯುತ್ತಾನೆ. ತಲೆಯ ಮೇಲೆ ಯಾವ ವೇಷಭೂಷಣವಿದೆ ಎನ್ನುವುದಕ್ಕಿಂತ ತಲೆಯೊಳಗೆ ಏನಿದೆ ಎನ್ನುವುದು ಹೆಚ್ಚು ಮಹತ್ವದ್ದಲ್ಲವೆ?" ಆದರೆ ಖಾದಿಯ ಬಗ್ಗೆ ನೆಹರೂ ಬಹಳ ಗೌರವವಾದ ಭಾವನೆ ಇರಿಸಿಕೊಂಡಿದ್ದರು. ಮಧ್ಯಮ ವರ್ಗದ ಜನರು ಸಾದಾ ಶುಭ್ರ ಖಾದೀ ಧರಿಸಲಾರಂಭಿಸಿದಾಗಿನಿಂದ, ಜೀವನದಲ್ಲಿ ನಿರಾಡಂಬರ, ಬಡವರ ಜೊತೆಗೆ ಸಹಜೀವನಗಳು ಬೆಳೆದು ಬಂದವು. ಖಾದಿಯಿಂದ ಕಾಂಗ್ರೆಸ್ಸು ಜನಸಾಮಾನ್ಯರ ವರೆಗೆ ಹೋಗಿ ಮುಟ್ಟುವುದು ಸಾಧ್ಯವಾಯಿತು. ಅದು ದೇಶದ ಸ್ವಾತಂತ್ರ್ಯದ ಯುನಿಫಾರ್ಮ್ ಆಗಿ ಪರಿಣಮಿಸಿತು!

ಭಾರತದ ಇತಿಹಾಸ ಮತ್ತು ಪ್ರಾಚೀನ ಸಂಸ್ಕೃತಿಗಳ ಬಗೆಗೆ ಆಳವಾದ ಅಭ್ಯಾಸ ಮಾಡಿದ ನೆಹರೂ, ಪ್ರಾಚೀನ ಕಾಲದ ಭಾರತೀಯರು ಹೇಗಿದ್ದರು ಎಂಬ ಬಗ್ಗೆ ಹೀಗೆ ಊಹಿಸಿದ್ದಾರೆ- ಅವರು ಒಂದು ಉತ್ಸಾಹಿ ಜನಾಂಗವಾಗಿದ್ದರು; ತಮ್ಮ ಸಂಪ್ರದಾಯಗಳ ಬಗ್ಗೆ ಅಭಿಮಾನವುಳ್ಳವರೂ ಪ್ರಪಂಚದ ರಹಸ್ಯವನ್ನು ತಿಳಿಯುವಲ್ಲಿ ಜಿಜ್ಞಾಸುಗಳೂ ನಿಸರ್ಗ ಮತ್ತು ಮಾನವ ಜೀವನವನ್ನು ಪ್ರಶ್ನಿಸುವವರೂ ಜೀವನ ಮೌಲ್ಯಗಳಿಗೆ ಬಹಳ ಬೆಲೆ ಕೊಡುವವರೂ ಸಂತೋಷದಿಂದ ಬಾಳುವವರೂ ಧೈರ್ಯದಿಂದ ಮರಣವನ್ನು ಎದುರಿಸುವವರೂ ಆಗಿದ್ದರು."

ಪುಸ್ತಕಗಳ ಬಗೆಗೆ ನೆಹರೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತ— "ಈಗ ನಾವು ಬಹಳ ಪುಸ್ತಕಗಳನ್ನೋದುತ್ತೇವೆ; ಆದರೆ. ಪ್ರಾಚೀನ ಕಾಲದಲ್ಲಿ ಜನರು ಕೆಲವೇ ಗ್ರಂಥಗಳನ್ನೋದುತ್ತಿದ್ದರು. ಆದರೆ ಅವೆಲ್ಲ ಉತ್ತಮ ಗ್ರಂಥಗಳಾಗಿರುತ್ತಿದ್ದವು; ಮತ್ತು ಅವುಗಳನ್ನು ಅವರು ಆಳವಾಗಿ ಅಧ್ಯಯನ ಮಾಡುತ್ತಿದ್ದರು. ಯುರೋಪದ ತತ್ವಜ್ಞಾನಿಗಳಲ್ಲಿ ಸ್ಪಿನೋಜಾ ತುಂಬಾ ಪ್ರಸಿದ್ಧ; ಅವನು ೧೭ ನೆಯ ಶತಮಾನದಲ್ಲಿ ಜೀವಿಸಿದ್ದ, ತುಂಬಾ ವಿಚಾರವಂತನಾಗಿದ್ದನು; ಆದರೆ ಅವನ ಗ್ರಂಥಾಲಯದಲ್ಲಿ ಅರವತ್ತಕ್ಕಿಂತ ಕಡಿಮೆ ಗ್ರಂಥಗಳಿದ್ದವು ಎಂದು ಹೇಳಲಾಗುತ್ತಿದೆ." ✡



ಭವಿಷ್ಯವು ಎಷ್ಟೇ ಆನಂದಮಯವಿದ್ದರೂ ಅದನ್ನು ನಂಬಬೇಡ. ನಿನ್ನೆ ಎಂಬುದು ಸತ್ತು ಹೋಗಿದೆ. ಜೀವಂತವಿರುವ ವರ್ತಮಾನ ಕಾಲದಲ್ಲಿ ಕರ್ತವ್ಯಪರಾಯಣನಾಗು; ದೇವನನ್ನು ಸ್ಮರಿಸಿ ನಿನ್ನ ಮನಸ್ಸಿಗೆ ಒಪ್ಪುವ ಕಾರ್ಯದಲ್ಲಿ ಪ್ರವೃತ್ತನಾಗು.

(ಜವಾಹರಲಾಲ ನೆಹರು ಭಾಷಣದಿಂದ)

-ಸಂಗ್ರಹ: ವಿಜಯಾ ಕೇಶಗೊಂಡ

ಒಂದು ಧೀರ ಪ್ರಯೋಗ

# ಉಸ್ಮಾನಿಯಾ ವಿಶ್ವವಿದ್ಯಾಲಯ



ವಿ. ಎಚ್. ದೇಸಾಯಿ

# ಉಸ್ಮಾನಿಯಾ ವಿಶ್ವವಿದ್ಯಾಲಯ

ಆಧುನಿಕ ಭಾರತದ ಶೈಕ್ಷಣಿಕ ಇತಿಹಾಸದಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಅಪೂರ್ವ ಸ್ಥಾನವಿದೆ. ಉಳಿದೆಲ್ಲ ವಿಶ್ವವಿದ್ಯಾಲಯಗಳೂ ಆಂಗ್ಲರ ಕೃಪಾಛತ್ರದಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಮೆರೆಯುತ್ತಿದ್ದಾಗ ದೇಶೀ ಭಾಷೆಯಾದ ಉರ್ದು ಮಾಧ್ಯಮವನ್ನು ಸ್ವೀಕರಿಸಿ ಈ ಶತಮಾನದ ಪ್ರಾರಂಭ ಕಾಲದಲ್ಲೇ ಸಾಂಸ್ಕೃತಿಕ ಕ್ರಾಂತಿಯನ್ನು ಸಾಧಿಸಿತು. ಆದರೆ ಅದು ಬೆಳೆದುಬಂದ ರೀತಿಯಲ್ಲಿ ಅನೇಕ ಪರಿಮಿತಿಗಳಿದ್ದವು. ಅದೆಲ್ಲವನ್ನೂ ನಿವಾರಿಸಿಕೊಂಡು ಈ ಸಂಸ್ಥೆ ಇಂದಿನ ಉನ್ನತ ಅವಸ್ಥೆಯನ್ನು ತಲಪಿದ್ದೇ ಒಂದು ರೋಮಾಂಚಕ ಕಥೆ.

ಲೇಖಕ ಶ್ರೀ ವಿ. ಎಚ್. ದೇಸಾಯಿ ವಯೋವೃದ್ಧ ಸ್ವಾತಂತ್ರ್ಯಯೋಧರು, ನಿಷ್ಣಾತ ಪತ್ರಕರ್ತರು. ಒಂದು ಕಾಲಕ್ಕೆ ಅವರು ಹೈದರಾಬಾದಿನಲ್ಲಿ ಸಂಯುಕ್ತ ಕರ್ನಾಟಕವನ್ನು ಪ್ರತಿನಿಧಿಸುತ್ತಿದ್ದರು. ಸದ್ಯ ಅವರು ಹೈದರಾಬಾದಿನಲ್ಲಿ ಭಾರತೀಯ ವಿದ್ಯಾಭವನದ ಸಮೂಹ ಸಂಪರ್ಕ ವಿದ್ಯಾಲಯದ ಗೌರವ ಪ್ರಾಚಾರ್ಯರು.

ಹೈದರಾಬಾದಿನ ಏಳನೇ ನಿಜಾಮ ನವಾಬ ಮೀರ ಉಸ್ಮಾನ ಅಲಿಖಾನ ಬಹಾದೂರ ಸ್ಥಾಪಿಸಿದ ಉಸ್ಮಾನಿಯಾ ವಿಶ್ವವಿದ್ಯಾಲಯ, ತನ್ನದೇ ಆದ ವೈವಿಧ್ಯಮಯ ಇತಿಹಾಸವುಳ್ಳದ್ದಾಗಿದೆ. ೧೯೧೭ ರಲ್ಲಿ ಆರಂಭವಾದ ಈ ವಿಶ್ವವಿದ್ಯಾಲಯಕ್ಕೆ ಸಂಸ್ಥಾಪಕನ ಹೆಸರನ್ನೇ ಇಡಲಾಗಿದೆ. ವಿಶ್ವವಿದ್ಯಾಲಯದ ಈಗಿನ ಅಧಿಕಾರಿಗಳು 'ಉಸ್ಮಾನಿಯಾ ದರ್ಶನ' ಎಂಬ ಪ್ರದರ್ಶನವೊಂದನ್ನು ಶಾಶ್ವತವಾಗಿ ಏರ್ಪಡಿಸಲು ನಿರ್ಧರಿಸಿದ್ದು ಶ್ಲಾಘನೀಯ. ಜ್ಞಾನ ಸಂಪಾದನೆಯಲ್ಲಿ ಅಪಾರ ಆಸಕ್ತಿಯಿದ್ದ ನಿಜಾಮರ ಬಗ್ಗೆ ಮುಂದಿನ ತಲೆಮಾರಿನವರಲ್ಲಿ ಸಂಪೂರ್ಣ ಅರಿವು ಮೂಡಿಸುವುದೇ ಈ ಪ್ರದರ್ಶನದ ಉದ್ದೇಶ.

ಪ್ರಾರಂಭದಲ್ಲಿ ಈ ವಿಶ್ವವಿದ್ಯಾಲಯದ ರಚನೆ ಮಧ್ಯಯುಗೀನ ಪಾಳೆಯವನ್ನು ಹೋಲುತ್ತಿದ್ದರೂ ಡಾ. ರವೀಂದ್ರನಾಥ ಟಾಗೋರ, ಸಿ. ರಾಜಗೋಪಾಲಾಚಾರಿಯಂಥವರ ಮೆಚ್ಚುಗೆಗೆ ಪಾತ್ರವಾತ್ತು. "ಉಸ್ಮಾನಿಯಾ ವಿಶ್ವವಿದ್ಯಾಲಯದ ಸ್ಥಾಪನೆ ಒಂದು ಐತಿಹಾಸಿಕ ಘಟನೆ. ಅದರ ಮೂಲಕ ಆಧುನಿಕ ಭಾರತದಲ್ಲಿ ಪ್ರಥಮ ಬಾರಿಗೆ ಭಾರತೀಯ ಭಾಷೆಯೊಂದರ ಮೂಲಕ ಉನ್ನತ ಶಿಕ್ಷಣ ಪಡೆಯುವದು ಸಾಧ್ಯವಾಯಿತು. ದೇಶದಲ್ಲೆಲ್ಲ ಇಂಗ್ಲಿಷ್ ಭಾಷೆಯ ಮೂಲಕವೇ ವಿಶ್ವವಿದ್ಯಾಲಯ ಶಿಕ್ಷಣ ಮುಂದುವರಿದಿದ್ದಕ್ಕೆ ಎಷ್ಟೋ ವರ್ಷಗಳಿಂದ ವ್ಯಕ್ತಪಡಿಸಲಾಗುತ್ತಿದ್ದ ಪ್ರತಿಕ್ರಿಯೆಗಳ ಪ್ರತೀಕ

ಇವಾಗಿದೆ" ಎಂದು ಪ್ರೊ. ಎಚ್. ಕೆ. ಶೇರವಾನಿ ಎವರ ಹೆಮ್ಮೆಯಿಂದ ಬರೆದಿದ್ದರು.

ಹೈದರಾಬಾದ ರಾಜ್ಯಕ್ಕೆ ವಿಶ್ವವಿದ್ಯಾಲಯದ ಜರೂರ ಅಗತ್ಯವಿದೆಯೆಂಬುದನ್ನು ರಾಜ್ಯದ ವಿಚಾರವಂತ ಜನ ಬಹಳ ಹಿಂದೆಯೇ ಕಂಡುಕೊಂಡಿದ್ದರು. ಆದರೆ ಈ ದಿಶೆಯಲ್ಲಿ ಕಾರ್ಯ ಆರಂಭವಾದುದು ೧೯೧೧ ರಲ್ಲಿ ಮೀರ ಉಸ್ಮಾನ ಅಲಿಖಾನರು ನಿಜಾಮರಾದ ನಂತರ.

ಅರ್ಧ ಶತಮಾನಕ್ಕೂ ಹೆಚ್ಚು ಕಾಲ ರಾಜ್ಯದ ಉನ್ನತ ಶಿಕ್ಷಣ, ಮದ್ರಾಸ ವಿಶ್ವವಿದ್ಯಾಲಯದ ನಿಯಂತ್ರಣದಲ್ಲಿತ್ತು. ಆದರೆ ಕಾಲಾಂತರದಲ್ಲಿ ಪರಿಸ್ಥಿತಿ ಬಹಳ ಹದಗೆಟ್ಟಿತ್ತು. ಆದ್ದರಿಂದ ೧೯೧೭ ರಲ್ಲಿ ಆಗ ರಾಜ್ಯದ ಶಿಕ್ಷಣ ವಿಭಾಗದ ಕಾರ್ಯದರ್ಶಿಯಾಗಿದ್ದ ಸರ್ ಅಕಬರ ಹೈದರಿ, ಪ್ರಚಲಿತ ಪರಿಸ್ಥಿತಿ ಮತ್ತು ವಿದೇಶಿ ಭಾಷೆಯ ಮೂಲಕ ಶಿಕ್ಷಣ ನೀಡುವ ಪದ್ಧತಿಯ ಲಾಭ-ನಷ್ಟಗಳ ಬಗ್ಗೆ ವಿಚಾರವಾಡಿ ನಿಜಾಮರಿಗೊಂದು ಪತ್ರ ಬರೆದರು. ಅದರಲ್ಲಿ ರಾಜ್ಯದ ಅಧಿಕೃತ ಭಾಷೆಯಾದ ಉರ್ದು ಮೂಲಕ ಶಿಕ್ಷಣ ನೀಡುವ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸುವಂತೆ ಶಿಫಾರಸು ಮಾಡಿದ್ದರು. ಈ ವಿ. ವಿ. ಉರ್ದು ಭಾಷೆಯ ಪುಸ್ತಕಗಳನ್ನು ಸಂಗ್ರಹಿಸಬೇಕು ಅಥವಾ ಉರ್ದು ಭಾಷೆಗೆ ಪುಸ್ತಕಗಳನ್ನು ಅನುವಾದಿಸಬೇಕು. ಅಲ್ಲದೆ ಕಡ್ಡಾಯವಾಗಿ ಇಂಗ್ಲಿಷಿನ ಮಟ್ಟ ಇತರ ವಿಶ್ವವಿದ್ಯಾಲಯಗಳಷ್ಟೇ ಇರಬೇಕೆಂಬುದು ಹೈದರಿಯವರ ಅಭಿಪ್ರಾಯವಾಗಿತ್ತು.

ಈ ಕ್ರಾಂತಿಕಾರಿ ಪ್ರಯೋಗದ ಮೊದಲ ಹಂತವಾಗಿ ೧೯೧೭ ರ ಅಗಸ್ಟ ೧೪ರಂದು ಸಂಗ್ರಹಣಾ ಮತ್ತು ಅನುವಾದ ವಿಭಾಗವನ್ನು ಸ್ಥಾಪಿಸಲಾಯಿತು. ಮೌಲ್ವಿ ಅಬ್ದುಲ್ ಹಕ್ ಇದರ ಮೇಲ್ವಿಚಾರಕರಾಗಿದ್ದರು. ಅಲ್ಪ ಸಮಯದಲ್ಲಿ ವಿವರವಾದ ಪಠ್ಯಕ್ರಮವೊಂದನ್ನು ಸಿದ್ಧಪಡಿಸಿ, ಅನೇಕ ಜನ ಖ್ಯಾತ ಶಿಕ್ಷಣ ತಜ್ಞರ ಅವಗಾಹನೆಗೆ ಕಳುಹಿಸಲಾಯಿತು. ಈ ಗಣ್ಯರ ಪೈಕಿ ರವೀಂದ್ರನಾಥ ಟಾಗೋರ ಮತ್ತು ಸರ್ ಮೈಕೆಲ್ ಸ್ಯಾಡ್ಲರ್ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಇಲ್ಲಿ ಹೇಳದಿದ್ದರೆ ತಪ್ಪಾದೀತು. ರವೀಂದ್ರನಾಥ ಟಾಗೋರರ ಈ ರೀತಿ ಬರೆದರು— "ಬಹಳ ದಿನಗಳಿಂದ ನಾನು, ನಮ್ಮ ಶಿಕ್ಷಣ ವಿದೇಶಿ ಭಾಷೆಯ ಬಂಧನದಿಂದ ಬಿಡುಗಡೆ ಹೊಂದಿ, ಪ್ರತಿಯೊಬ್ಬರಿಗೂ ಸುಲಭವಾಗಿ ಶಿಕ್ಷಣ ದೊರಕುವ ಕನಸು ಕಾಣುತ್ತಿದ್ದೆ. ಈ ಸಮಸ್ಯೆಗೆ ಆಯಾ ರಾಜ್ಯಗಳೇ ಪರಿಹಾರ ಕಂಡುಹಿಡಿಯಬೇಕು. ಈ ದಿಶೆಯಲ್ಲಿ ನಿಮ್ಮ ರಾಜ್ಯ ಉರ್ದು ಭಾಷೆಯ ಮೂಲಕ ಶಿಕ್ಷಣ ನೀಡುವ ವಿ. ವಿ. ಸ್ಥಾಪಿಸಲು ನಿರ್ಧರಿಸಿರುವದು ನನಗೆ ಬಹಳ ಸಂತೋಷವಾಗಿದೆ. ನಿಮ್ಮ ಈ ಯೋಜನೆಗೆ ನನ್ನ ಸಂಪೂರ್ಣ ಬೆಂಬಲ ಇದೆ."

ಕಲಕತ್ತಾ ವಿಶ್ವವಿದ್ಯಾಲಯ ಆಯೋಗದ ಅಧ್ಯಕ್ಷ ಸರ್ ಮೈಕೆಲ್ ಸ್ಯಾಡ್ಲರ್ "ದೇಶಿ ಭಾಷೆಯ ಮೂಲಕ ಶಿಕ್ಷಣ ನೀಡುವದು ಮತ್ತು ಅದರ ಜೊತೆಗೆ ಇಂಗ್ಲೀಷ್ ಭಾಷೆಯ ಮೇಲೂ ಸಾಕಷ್ಟು ನಿಯಂತ್ರಣ ಹೊಂದಬೇಕೆಂಬ ಉಸ್ಮಾನಿಯಾ ವಿ. ವಿ. ಯ ಯೋಜನೆ ಸಮಯೋಚಿತವಾಗಿದೆ. ಈ ಯೋಜನೆಯ ಯಶಸ್ಸಿನ ಮೇಲೆ ಬಹಳಷ್ಟು ಅವಲಂಬಿಸಿದೆ..." ಎಂದು ಅಭಿಪ್ರಾಯಪಟ್ಟರು.

೧೯೧೮, ಸಪ್ಟಂಬರ್ ೨೮ ರಂದು ನಿಜಾಮ ಹೊರಡಿಸಿದ ಆಜ್ಞೆಯ ಮೂಲಕ ಅವರೇ ವಿಶ್ವವಿದ್ಯಾಲಯದ ಪೋಷಕರಾದರು. ಕುಲಪತಿಯಾಗಿ ಪ್ರಧಾನಮಂತ್ರಿ ಮತ್ತು ಕಾರ್ಯದರ್ಶಿಯಾಗಿ ಗೃಹ ಕಾರ್ಯದರ್ಶಿ ನೇಮಕಗೊಂಡರು. ಕೌನ್ಸಿಲ್, ವಿಶ್ವವಿದ್ಯಾಲಯದ ಪ್ರಮುಖ ಆಡಳಿತ ಮಂಡಳಿಯಾಯಿತು. ಕೌನ್ಸಿಲ್ ನಂತರ ಸಿನೇಟ್ ಮತ್ತು ಸಿಂಡಿಕೇಟ್ ಅತ್ಯಂತ ಪ್ರಮುಖ ಸ್ಥಾನದಲ್ಲಿದ್ದವು. ೧೯೧೯ ರ ಜೂನ್ ೧೯ ರಂದು ಪ್ರಥಮ ಬಾರಿಗೆ ವಿವಿಧ ವಿಭಾಗಗಳಲ್ಲಿ ಶಿಕ್ಷಕರನ್ನು ನೇಮಿಸಲಾಯಿತು. ಅದೇ ವರ್ಷ ಅಗಸ್ಟ ೨೮ ರಂದು ಯೂನಿವರ್ಸಿಟಿ ಕಾಲೇಜನ್ನು ಆರಂಭಿಸಲಾಯಿತು. ಮೌಲಾನಾ ಹಬೀಬ ಉರ್ ರಹಮಾನಖಾನ ಶೇರವಾನಿ (ನವಾಬ ಸದ್ರ ಯಾರ್‌ಜಂಗ್) ಪ್ರಥಮ ಉಪಕುಲಪತಿಯಾದರು. ಶೇರವಾನಿ ೧೯೩೪ ರ ವರೆಗೆ ಅಧಿಕಾರದಲ್ಲಿದ್ದರು. ಯೂನಿವರ್ಸಿಟಿ

ಕಾಲೇಜು, ಸಂಗ್ರಹ ಮತ್ತು ಅನುವಾದ ವಿಭಾಗ, ವಿದ್ಯಾರ್ಥಿನಿಲಯ ಮುಂತಾದವುಗಳಿಗಾಗಿ ಸಾವಿರಾರು ರೂಪಾಯಿಗಳನ್ನು ವಿನಿಯೋಗ ಮಾಡಿ ಪಬ್ಲಿಕ್ ಗಾರ್ಡನ್ಸಿನಿಂದ ಕಿಂಗ್ ಕೋಠಿಯವರೆಗೆ ಹಲವಾರು ಕಟ್ಟಡಗಳನ್ನು ಬಾಡಿಗೆಗೆ ಪಡೆಯಲಾಯಿತು. ೧೯೧೯ರಲ್ಲೇ ಇಂಟರ್‌ಮೀಡಿಯೇಟ್ ಕಾಲೇಜು ಸ್ಥಾಪನೆಯಾಯಿತು. ಎಂ. ಎ. ತರಗತಿಗಳು ೧೯೨೩ರಲ್ಲಿ ಎಲ್‌ಎಲ್. ಬಿ. ತರಗತಿಗಳು ೧೯೨೪ರಲ್ಲಿ ಆರಂಭವಾದವು. ವೈದ್ಯಕೀಯ ಮತ್ತು ತಾಂತ್ರಿಕ ಶಾಲೆಗಳನ್ನು ಕಾಲೇಜು ಮಟ್ಟಕ್ಕೇರಿಸಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಅಧೀನಕ್ಕೊಳಪಡಿಸಲಾಯಿತು. ಔರಂಗಾಬಾದ, ಕಲಬುರ್ಗಿ ಮತ್ತು ವರಂಗಲ್ಲುಗಳಲ್ಲೂ ಇಂಟರ್‌ಮೀಡಿಯೇಟ್ ಕಾಲೇಜುಗಳನ್ನು ಸ್ಥಾಪಿಸಲಾಯಿತು. ಮಹಿಳೆಯರ ಇಂಟರ್‌ಮೀಡಿಯೇಟ್ ತರಗತಿಗಳು ೧೯೨೪ರಲ್ಲಿ ನಾಮಪಲ್ಲಿ ವಿದ್ಯಾರ್ಥಿನಿಯರ ಹೈಸ್ಕೂಲಿನಲ್ಲಿ ಆರಂಭವಾದವು. ಇದೇ ಮುಂದೆ ಮಹಿಳೆಯರ ಪ್ರತ್ಯೇಕ ಕಾಲೇಜ್ ಸ್ಥಾಪನೆಗೆ ನಾಂದಿಯಾಯಿತು.

೧೯೩೪ ರಲ್ಲಿ ವಿಶ್ವವಿದ್ಯಾಲಯವನ್ನು ಅದಿಕ್‌ಮೆಟ್ (ತೆಲುಗಿನಲ್ಲಿ ಇದನ್ನು 'ಅತ್ಯಂತ ಎತ್ತರದಲ್ಲಿರುವ' ಎಂಬ ಅರ್ಥ ಬರುವಂತೆ 'ಅಧಿಕ ಮೆಟ್ಟು' ಎಂದು ಕರೆಯುತ್ತಾರೆ)ಗೆ ಸ್ಥಳಾಂತರಿಸಲಾಯಿತು ಸ್ಥಳಾಭಾವವಿದ್ದುದರಿಂದ ಹಲವಾರು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ತಾತ್ಕಾಲಿಕವಾಗಿ ಕೆಲ ಕಟ್ಟಡಗಳನ್ನು ನಿರ್ಮಿಸಲಾಯಿತು. ನಂತರ ವಿಶ್ವವಿದ್ಯಾಲಯ ನಿರ್ಮಾಣಕ್ಕಾಗಿ ಅದಿಕ್‌ಮೆಂಟ್‌ನಲ್ಲಿ ೧೫೦೦ ಎಕರೆ ಸಮತಟ್ಟಾದ ಪ್ರದೇಶವನ್ನು ಆಯ್ಕೆ

ಪಡೆದಂತಾಯಿತು. ನಾಲ್ಕು ನೂರು ವರ್ಷಗಳ ಹಿಂದೆ ಈ ಸ್ಥಳ, ಕುತುಬ್‌ಶಾಹಿ ಕಾಲದಲ್ಲಿ ರಾಜ್ಯದ ಪ್ರಧಾನಮಂತ್ರಿಯಾಗಿದ್ದ ಮೀರ ಜುಮ್ಲಾನ ಒಡೆತನದಲ್ಲಿತ್ತು. ನಂತರ ಎರಡನೇ ನಿಜಾಮನಾದ ನವಾಬ ನಿಜಾಮ ಅಲಿಖಾನನ ಆಳಿಕೆಯಲ್ಲಿ ಇದು, ಹೈದರಾಬಾದಿನ ಸಾಂಸ್ಕೃತಿಕ ರಂಗದಲ್ಲಿ ಬಹಳ ಮಹತ್ವದ ಪಾತ್ರ ವಹಿಸಿದ್ದ ಸುಂದರಿ, ಮೆಹಲಾಖಾ ಬಾಯಿ ಚಂದಾಳ ಜಾಗೀರಾಗಿತ್ತು. ಸ್ಥಳ ಆಯ್ಕೆಯಾದ ನಂತರ ವಾಸ್ತುಶಿಲ್ಪಿಗಳಾದ ಬೆಲ್ಜಿಯಂನ ಇ. ಜಾಸ್ಪರ್, ನವಾಬ ರೆಹ್ಮಾನ ಯಾರ ಜಂಗ್ ಮತ್ತು ಸಯ್ಯದ ಅಲಿ ರಾಜಾ ವಿಶ್ವವಿದ್ಯಾಲಯ ನಿರ್ಮಾಣದ

ಯೋಜನೆಯನ್ನು ರೂಪಿಸಿದರು.

ವಿಶ್ವವಿದ್ಯಾಲಯದ ಪ್ರಮುಖ ಆಡಳಿತ ಮಂಡಳಿಯಾಗಿದ್ದ ಕಾರ್ಯಕಾರಿ ಮಂಡಳಿಗೆ ವಿ.ವಿ.ಯ ಅಧೀನಕ್ಕೊಳಪಟ್ಟ ಕಾಲೇಜುಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣದ ಹೊಣೆಯನ್ನು ಒಪ್ಪಿಸಲಾಗಿತ್ತು. ಈ ಮಂಡಳಿ ರಾಜ್ಯ ಕಾರ್ಯಕಾರಿ ಮಂಡಳಿಯ ಅಧ್ಯಕ್ಷರು, ಶಿಕ್ಷಣ ಮತ್ತು ಹಣಕಾಸು ವಿಭಾಗಗಳ ಮೇಲ್ವಿಚಾರಣೆಯ ಹೊಣೆ ಹೊತ್ತಿದ್ದ ಕೌನ್ಸಿಲ್‌ನ ಸದಸ್ಯರು, ಅನುಕುಲಾಧಿಪತಿ, ರಾಜ್ಯ ಶಿಕ್ಷಣ ವಿಭಾಗದ ಕಾರ್ಯದರ್ಶಿ, ಸಾರ್ವಜನಿಕ ಶಿಕ್ಷಣ ವಿಭಾಗದ ನಿರ್ದೇಶಕ, ವಿ. ವಿ. ಯ ಅಧೀನಕ್ಕೊಳಪಟ್ಟ ಕಾಲೇಜುಗಳ ಪ್ರಿನ್ಸಿಪಾಲರು ಮತ್ತು ಸರಕಾರ ನೇಮಿಸಿದ ಐವರು ಸದಸ್ಯರನ್ನೊಳಗೊಂಡಿತ್ತು.

ನಿಜಾಮರೇ ವಿಶ್ವವಿದ್ಯಾಲಯದ ಪೋಷಕರಾಗಿದ್ದರು. ರಾಜ್ಯಕಾರ್ಯಕಾರಿ ಮಂಡಳಿಯ ಅಧ್ಯಕ್ಷರು ಕುಲಪತಿ ಮತ್ತು ಶಿಕ್ಷಣ ವಿಭಾಗದ ಸದಸ್ಯರು ಉಪಕುಲಪತಿಯಾಗಿದ್ದರು. ವಿಶ್ವ-ವಿದ್ಯಾಲಯದ ಅಧೀನದಲ್ಲಿದ್ದ ಎಲ್ಲ ಶಿಕ್ಷಣ ಸಂಸ್ಥೆಗಳ ಆಡಳಿತ ನಿಯಂತ್ರಣಕ್ಕಾಗಿ ಅನುಕುಲಾಧಿಪತಿಯೊಬ್ಬರನ್ನು ಸಂಬಳ ಕೊಟ್ಟು ನೇಮಿಸಲಾಗಿತ್ತು.

ಶೈಕ್ಷಣಿಕ ವಿಷಯಗಳಲ್ಲಿ ನಿರ್ಣಯಗಳನ್ನು ಕೈಗೊಳ್ಳುತ್ತಿದ್ದ ಸಿನೇಟ್ ಕನಿಷ್ಟ ೪೦ ಮತ್ತು ಗರಿಷ್ಟ ೭೦ ಜನ ಸದಸ್ಯರುಳ್ಳದ್ದಾಗಿರಬೇಕೆಂದು ನಿರ್ಧರಿಸಲಾಗಿತ್ತು. ಅದರಂತೆ, ಸಿಂಡಿಕೇಟ್ ಕನಿಷ್ಠ ಐದು, ಗರಿಷ್ಟ ಏಳು ಜನ ಸಿನೇಟ್ ಸದಸ್ಯರನ್ನು ಹೊಂದಿರುತ್ತಿತ್ತು. ಮುಖ್ಯವಾಗಿ ವೃತ್ತಿನಿರತ ಶಿಕ್ಷಕರನ್ನೊಳಗೊಂಡ ವಿವಿಧ ಫ್ಯಾಕಲ್ಟಿ ಸಿನೇಟಿನ ಶೈಕ್ಷಣಿಕ ಅಂಗಗಳಾಗಿದ್ದವು. ಪಠ್ಯಕ್ರಮ ತಯಾರಿಸುವದು, ಪರೀಕ್ಷೆಗಳನ್ನು ನಡೆಸುವದು ಮತ್ತು ಇತರ ಭಾಷಾ ವಿಷಯಗಳನ್ನು ನೋಡಿಕೊಳ್ಳುವುದು ಈ ಸಮಿತಿಗಳ ಹೊಣೆ.

ಉಸ್ಮಾನಿಯ ವಿ. ವಿ. ಯಲ್ಲಿ ವಿಶ್ವವಿದ್ಯಾಲಯ ಮಟ್ಟದ ಎಲ್ಲ ವಿಷಯಗಳನ್ನೂ ಕಲಿಸಲಾಗುತ್ತಿತ್ತು. ದೇವತಾಶಾಸ್ತ್ರ, ಕಲೆ, ವಿಜ್ಞಾನ, ಕಾಯ್ದೆ ಮತ್ತು ಎಂಜನಿಯರಿಂಗ್ ವಿಭಾಗಗಳು ಆದಿಕ್‌ಮೆಂಟ್ ಪ್ರದೇಶವಲ್ಲಿದ್ದವು, ವೈದ್ಯಕೀಯ ಮತ್ತು ತರಬೇತಿ ಕಾಲೇಜುಗಳನ್ನು ಸೌಕರ್ಯಗಳ ಅಭಾವದಿಂದ ನಗರದಲ್ಲಿ ನಿರ್ಮಿಸಲಾಗಿತ್ತು. ಇಂಟರ್‌ಮಿಡಿಯೇಟ್, ಬಿ. ಎ., ಬಿ. ಎಸ್ಸಿ. ಮತ್ತು ಎಂ. ಎಸ್ಸಿ. ತರಗತಿಗಳುಳ್ಳ ಮಹಿಳಾ ಕಾಲೇಜನ್ನು ಸಹ ನಗರದಲ್ಲಿ ನಿರ್ಮಿಸಲಾಗಿತ್ತು. ಔರಂಗಾಬಾದ, ವರಂಗಲ್, ಕಲಬುರ್ಗಿ ಮತ್ತು ಹೈದರಾಬಾದ ನಗರಗಳಲ್ಲಿಯ ಇಂಟರ್‌ಮೀಡಿಯೇಟ್ ಕಾಲೇಜುಗಳೂ ಉಸ್ಮಾನಿಯಾದ ಅಧೀನಕ್ಕೆ ಒಳಪಟ್ಟವು.

ವಿಶ್ವವಿದ್ಯಾಲಯ ಕಾರ್ಯಾರಂಭ ಮಾಡಲು ಪಠ್ಯಪುಸ್ತಕಗಳು ಅತ್ಯಗತ್ಯವಿದ್ದುದರಿಂದ ಸೂಕ್ತ ಪುಸ್ತಕಗಳನ್ನು ಆಯ್ಕೆ ಮಾಡಲು ೧೯೧೮ರಲ್ಲಿ ಸಂಗ್ರಹಣಾ ಮತ್ತು ಅನುವಾದ ವಿಭಾಗವೊಂದನ್ನು ಸ್ಥಾಪಿಸಲಾಯಿತು. ಉರ್ದು ಭಾಷೆಯ ಅಭಿವೃದ್ಧಿಯಲ್ಲಿ ಬಹಳ ಮಹತ್ವದ ಪಾತ್ರ ವಹಿಸಿದ ಈ ವಿಭಾಗ ೧೯೪೦ರ ವೇಳೆಗೆ ಕಲೆ ಮತ್ತು ವಿಜ್ಞಾನ ವಿಷಯಗಳಲ್ಲಿ ೩೫೪ ಪುಸ್ತಕಗಳನ್ನು ಪ್ರಕಟಿಸಿತು. ಅಲ್ಲದೆ, ೬೩ ಪುಸ್ತಕಗಳ ಸಂಗ್ರಹಣೆ, ಅನುವಾದ ಅಥವಾ ಪುನರ್ವಿಮರ್ಶೆ ಮಾಡಿತು.

೧೯೪೦ರ ವೇಳೆಗೆ ವಿಶ್ವವಿದ್ಯಾಲಯ ೩೩ ಜನ ಪ್ರಾಧ್ಯಾಪಕರನ್ನು, ೪೨ ಜನ ರೀಡರ್‌ರನ್ನು ಮತ್ತು ೮೫ ಜನ ಅಧ್ಯಾಪಕರನ್ನು ಒಳಗೊಂಡಿತ್ತು. ಇವರ ಪೈಕಿ ೨೩ ಜನ ಪ್ರಾಧ್ಯಾಪಕರು, ೨೯ ಜನ ರೀಡರರು ಮತ್ತು ೩೫ ಜನ ಅಧ್ಯಾಪಕರು ವಿಶ್ವವಿದ್ಯಾಲಯ ಕಾಲೇಜಿನಲ್ಲಿ ಬೋಧಿಸುತ್ತಿದ್ದರು. ೧೯೪೦-೪೧ರ ಶೈಕ್ಷಣಿಕ ವರ್ಷದ ಆರಂಭಕ್ಕೆ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ೨,೨೫೬ ರಷ್ಟಿತ್ತು. ಅವರ ಪೈಕಿ ೧,೭೮೯ ಜನ ಕಲೆ ಮತ್ತು ವಿಜ್ಞಾನ ವಿಭಾಗಗಳಲ್ಲಿ, ೭೯ ಜನ ಕಾಯ್ದೆ ವಿಭಾಗದಲ್ಲಿ, ೧೫೯ ಜನ ವೈದ್ಯಕೀಯ ವಿಭಾಗದಲ್ಲಿ, ೬೧ ಜನ ಎಂಜಿನಿಯರಿಂಗ್‌ನಲ್ಲಿ ಮತ್ತು ೩೯ ಜನ ಶಿಕ್ಷಣ ವಿಷಯದಲ್ಲಿ ಅಭ್ಯಸಿಸುತ್ತಿದ್ದರು.

ವಿಶ್ವವಿದ್ಯಾಲಯದ ಗ್ರಂಥಾಲಯಕ್ಕಾಗಿ ಸುಮಾರು ೪೫,೦೦೦ ಪುಸ್ತಕಗಳನ್ನು ಪ್ರಾರಂಭದಲ್ಲೆ ಸಂಗ್ರಹಿಸಲಾಗಿತ್ತು. ಈ ಸಂಗ್ರಹ ಕೂಡ ಜ್ಞಾನಾರ್ಜನೆಯ ದೃಷ್ಟಿಯಿಂದ ಸಮತೂಕ

ವಾಗಿತ್ತು. ಪೌರ್ವಾತ್ಯ, ಪಾಶ್ಚಾತ್ಯ ವಿಷಯಗಳೆರಡಕ್ಕೂ ಸಂಬಂಧಿಸಿದ ಗ್ರಂಥಗಳು ಸರಿ-ಸುಮಾರು ಅಷ್ಟೇ ಸಂಖ್ಯೆಯಲ್ಲಿದ್ದವು. ಅವುಗಳನ್ನು ಡೆವಿ ದಶಮಾನ ಪದ್ಧತಿಯ ಪ್ರಕಾರ ವಿಂಗಡಿಸಲಾಗಿತ್ತು. ಅರೇಬಿಕ್, ಪರ್ಷಿಯನ್, ಉರ್ದು, ಸಂಸ್ಕೃತ, ತೆಲಗು ಮತ್ತು ಕನ್ನಡದ ಅಪೂರ್ವ ಹಸ್ತ ಪ್ರತಿಗಳೂ ಸಾಕಷ್ಟಿದ್ದವು. ನಂತರ ಸ್ಥಳೀಯ ಭಾಷೆಯಲ್ಲಿರುವ ಕೆಲ ಅಮೂಲ್ಯ ತಾಳೆಗರಿಗಳನ್ನೂ ಸಂಗ್ರಹಿಸಿಡಲಾಯಿತು.

ಇಂದಿನ ಎನ್. ಸಿ. ಸಿ. ರೀತಿಯಲ್ಲಿ ತನ್ನ ವಿದ್ಯಾರ್ಥಿಗಳಿಗೆ ಅರೆ ಸೈನಿಕ ಶಿಕ್ಷಣವೀಯುವ ವ್ಯವಸ್ಥೆಯು ವಿಶ್ವವಿದ್ಯಾಲಯದಲ್ಲಿ ೧೯೩೭ ರಿಂದಲೇ ಇತ್ತು, ವಿಶ್ವವಿದ್ಯಾಲಯದ ಶಿಕ್ಷಕರೊಬ್ಬರು ಈ ವ್ಯವಸ್ಥೆಯ ಮೇಲ್ವಿಚಾರಕರಾಗಿರುತ್ತಿದ್ದರೆ, ನಿಜಾಮ್ ಸೈನ್ಯದ ಇಬ್ಬರು ಅಧಿಕಾರಿಗಳು ತರಬೇತಿ ನೀಡುತ್ತಿದ್ದರು.

ಇನ್ನು ಉಸ್ಮಾನಿಯಾದ ಕಟ್ಟಡ ನಿರ್ಮಾಣದ ಬಗ್ಗೆ ಹೇಳುವುದಾದರೆ, ವಿ. ವಿ. ಯ ಮುಖ್ಯ ಕಟ್ಟಡವಾದ ಕಲಾ ಮತ್ತು ವಾಣಿಜ್ಯ ಕಾಲೇಜಿನ ವಾಸ್ತುಶಿಲ್ಪ ರಚನೆ ಬಹಳ ಸುಂದರವಾಗಿದೆ. ಆಗಿನ ಕಾಲದಲ್ಲಿ ೩೫ ಲಕ್ಷ ರೂಪಾಯಿ ವೆಚ್ಚ ಮಾಡಿ ನಿರ್ಮಿಸಲಾಗಿದ್ದ ಈ ಕಟ್ಟಡ, ಪ್ರಾಚೀನ ಹಿಂದು ಮತ್ತು ಮಧ್ಯಯುಗೀನ ಮುಸ್ಲಿಂ ಶೈಲಿಗಳ ಮಿಶ್ರಣವಾಗಿದ್ದು, ಮನ ಸೆಳೆಯುವಂತಿದೆ. ಈ ಕಟ್ಟಡವನ್ನು ನಿಜಾಮ ೧೯೩೯ರಲ್ಲಿ ಉದ್ಘಾಟಿಸಿದರು. ಅವರ ೨೨ ವರ್ಷಗಳ ಕನಸು ನನಸಾಗಿತ್ತು. ವಿಶ್ವವಿದ್ಯಾಲಯದ ಪ್ರಥಮ ಶಾಶ್ವತ ಕಟ್ಟಡ ಇದಾಗಿತ್ತು.

ಉಸ್ಮಾನಿಯಾ ವಿಶ್ವವಿದ್ಯಾಲಯ ವಿಸ್ತೀರ್ಣವಾದ ಮುಲ್ಲಂಗಾವಲಿನಲ್ಲಿ ನೆಲೆನಿಂತಿದೆ. ಸಮುದ್ರ ಮಟ್ಟದಿಂದ ೧೭೨೫ ಅಡಿ ಎತ್ತರದಲ್ಲಿರುವ ಈ ಆವರಣ ದೊಡ್ಡ ಸಂಖ್ಯೆಯಲ್ಲಿ ಪ್ರವಾಸಿಗರನ್ನಾಕರ್ಷಿಸುತ್ತದೆ.

೧೯೩೯ರ ನಂತರದ ಕೆಲ ವರ್ಷಗಳಲ್ಲಿ ವಿವಿಧ ವಿಜ್ಞಾನ ವಿಭಾಗಗಳಿಗಾಗಿ ಅಂದವಾದ, ಆಧುನಿಕ ವಿನ್ಯಾಸದ ಕಟ್ಟಡಗಳನ್ನು ನಿರ್ಮಿಸಲಾಯಿತು. ಈ ಕಟ್ಟಡಗಳು ಉಸ್ಮಾನಿಯಾದ ಸೌಂದರ್ಯ

ವನ್ನು ಇನ್ನಷ್ಟು ಹೆಚ್ಚಿಸಿವೆ. ಈ ಕಟ್ಟಡಗಳನ್ನು ನಿರ್ಮಿಸಿದ ನಂತರ ಕೆಲ ಹಳೆಯ ಕಟ್ಟಡಗಳನ್ನು ವಿದ್ಯಾರ್ಥಿನಿಲಯಗಳನ್ನಾಗಿ ಪರಿವರ್ತಿಸಲಾಯಿತು. ಇನ್ನುಳಿದವುಗಳನ್ನು ಪಶುವೈದ್ಯಕೀಯಶಾಸ್ತ್ರದಂಥ ಕೆಲ ಸಣ್ಣ ವಿಭಾಗಗಳಿಗೆ ಹಸ್ತಾಂತರಿಸಲಾಯಿತು.

ಇದೇ ಕಾಲಕ್ಕೆ ಉಪಕುಲಪತಿಯ ವಾಸಸ್ಥಾನ, ಎರಡು ಹೊಸ ವಿದ್ಯಾರ್ಥಿನಿಲಯಗಳು ವಿಶ್ವವಿದ್ಯಾಲಯದ ಸಿಬ್ಬಂದಿಗಾಗಿ ವಸತಿ ನಿರ್ಮಾಣ, ಮತ್ತು ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರ ಹಾಗೂ ಎಂಜಿನಿಯರಿಂಗ್ ಕಾಲೇಜುಗಳಿಗಾಗಿ ಮೂರು ಪ್ರತ್ಯೇಕ ಕಟ್ಟಡಗಳನ್ನೂ ನಿರ್ಮಿಸಲಾಯಿತು. ಆಗ ಉಪಕುಲಪತಿಯಾಗಿದ್ದ ನವಾಬ ಅಲಿ ಯವರ ಜಂಗ್‌ರ ಪ್ರಯತ್ನಗಳಿಂದಾಗಿ, ಮಹಿಳೆಯರ ಕಾಲೇಜಿಗಾಗಿ ರೆಸಿಡೆನ್ಸಿ, ಬ್ರಿಟಿಶರ ದೊಡ್ಡ ಬಂಗಲೆಗಳು ಮತ್ತು ಸೈಫಾಬಾದ ವಿಜ್ಞಾನ ಕಾಲೇಜಿಗಾಗಿ ಸೈಫಾಬಾದ ಬರಾಕ್‌ಗಳೂ ದೊರೆತವು. ಮೊದಲು ಮದ್ರಾಸ್ ವಿ. ವಿ. ಯ ಆಧೀನದಲ್ಲಿದ್ದ ನಿಜಾಮ ಕಾಲೇಜನ್ನು ೧೯೪೭ರಲ್ಲಿ ಉಸ್ಮಾನಿಯಾದ ಅಧೀನಕ್ಕೊಳಪಡಿಸಲಾಯಿತು.

ಇದಲ್ಲದೆ ಮುಂಬರುವ ವರ್ಷಗಳಲ್ಲಿ ಗ್ರಂಥಾಲಯ, ಮ್ಯೂಸಿಯಂ, ತರಬೇತಿ, ಕಾಯ್ದೆ, ಕೃಷಿ, ವೈದ್ಯಕೀಯ ಕಾಲೇಜು, ಆಸ್ಪತ್ರೆಗಳಿಗಾಗಿ ಕಟ್ಟಡಗಳನ್ನು ನಿರ್ಮಿಸಲಾಯಿಂತು. ಕ್ರೀಡಾಂಗಣ, ಈಜುಗೊಳ ಮುಂತಾದವುಗಳ ನಿರ್ಮಾಣ ಕಾರ್ಯ ಸಹ ಪೂರ್ಣಗೊಂಡಿತು. ಈ ಎಲ್ಲ ಕಟ್ಟಡಗಳ ನೀಲನಕ್ಷೆ ತಯಾರಿಸುವ ಮುನ್ನ ವಾಸ್ತುಶಿಲ್ಪ ತಜ್ಞರ ತಂಡವೊಂದು ಜಗತ್ತಿನ ಖ್ಯಾತ ವಿಶ್ವವಿದ್ಯಾಲಯಗಳಿರುವ ನಗರಗಳಿಗೆ ಭೆಟ್ಟಿ ಕೊಟ್ಟು ಅಲ್ಲಿನ ಕಟ್ಟಡ ರಚನೆ ವಿನ್ಯಾಸವನ್ನು ಅಭ್ಯಸಿಸಿತ್ತು.

ಉಸ್ಮಾನಿಯಾ ಅಧೀನಕ್ಕೊಳಪಟ್ಟ ಸಂಸ್ಥೆಗಳಲ್ಲಿ ನಿಜಾಮಿಯಾ ಖಗೋಳ ಸಮೀಕ್ಷಾ ಕೇಂದ್ರವೂ ಒಂದು. ೧೯೦೮ರಲ್ಲಿ ಸ್ಥಾಪಿಸಲಾದ ಈ ಕೇಂದ್ರದ ಮುಖ್ಯ ಯಂತ್ರೋಪಕರಣಗಳೆಂದರೆ ಎರಡು ವಿಷುವದ್ ದೂರದರ್ಶಕಗಳು. ಎಂಟು ಇಂಚಿನ ಫೋಟೋಗ್ರಾಫಿಕ್ ಮತ್ತು ೧೫ ಇಂಚಿನ ದೃಗ್ಗೋಚರ ದೂರದರ್ಶಕ, ಒಂದು ಸಣ್ಣ ಕ್ಷಿತಿಜ ಕೋನಮಾಪಕ ಮತ್ತು ಒಂದು ಸೂಕ್ಷ್ಮ ಕಾಲಸೂಚಿ. ಇದಲ್ಲದೆ ಇತರ ಕೆಲ ಯಂತ್ರೋಪಕರಣಗಳೂ ಇದ್ದವು. ಈ ಕೇಂದ್ರವನ್ನು ೧೯೧೯ರಲ್ಲಿ ಉಸ್ಮಾನಿಯಾದ ಅಧೀನಕ್ಕೊಳಪಡಿಸಲಾಯಿತು. ನಂತರ ಈ ಕೇಂದ್ರ ಖ್ಯಾತ 'ಕಾರ್ಟೆ-ಡಿ-ಸೀಲ್ ಇಂಟರ್‌ನ್ಯಾಶನಲ್' ಯೋಜನೆಯಲ್ಲಿ ಪಾಲ್ಗೊಂಡಿತ್ತು. ಪ್ರಾರಂಭದಲ್ಲೇ ನಿರ್ಮಿಸಲಾಗಿದ್ದ ೧೫ ಇಂಚಿನ ದೂರದರ್ಶಕವನ್ನು ನಕ್ಷತ್ರಗಳ ದೃಗ್ಗೋಚರ ಪರೀಕ್ಷಣೆಗಾಗಿ ಉಪಯೋಗಿಸಲಾಗುತ್ತಿತ್ತು. ನಿಜಾಮಿಯಾ ಕೇಂದ್ರದ ಮುಖ್ಯ ಪ್ರಕಟಣೆಗಳೆಂದರೆ ಹೈದರಾಬಾದ ಆ್ಯಸ್ಟ್ರೋಗ್ರಾಫಿಕ್ ಕೆಟಲಾಗ್‌ನ ಎಂಟು ಆವೃತ್ತಿಗಳು ಮತ್ತು ಕೆಲ ಮುಖ್ಯ ಖಗೋಳವಿಜ್ಞಾನ ನಿಯತಕಾಲಿಕಗಳಲ್ಲಿ ಲೇಖನಗಳ ಪ್ರಕಟಣೆ. ೧೯೪೧ರಲ್ಲಿ ವೇಳೆಗೆ ಈ ಕೇಂದ್ರ ಎರಡು ಮಿಲ್ನ್-ಶಾ ಭೂಕಂಪ ಮಾಪಕಗಳನ್ನೂ ಹೊಂದಿತ್ತು. ಇವುಗಳ ಮೂಲಕ ದಾಖಲು ಮಾಡಿಕೊಳ್ಳಲಾದ ಭೂಕಂಪದ ವಿವರಗಳನ್ನು 'ಅಂತಾರಾಷ್ಟ್ರೀಯ ಭೂಕಂಪ ವಿವರ'ಗಳಲ್ಲಿ ಸೇರಿಸಲು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯಕ್ಕೆ ಕಳುಹಿಸಲಾಗಿದೆ. ಇದಲ್ಲದೆ ಉಸ್ಮಾನಿಯಾ ಹವಾಮಾನ ನಿರೀಕ್ಷಣಾ ಕೇಂದ್ರ ಮತ್ತು ಪೈಲಟ್ ಬಲೂನ್ ಸ್ಟೇಶನ್‌ಗಳನ್ನು ಸ್ಥಾಪಿಸಿದೆ.

೧೮೮೮ರಲ್ಲಿ ಅಪೂರ್ವ ಅರೇಬಿಕ್ ಕೃತಿಗಳನ್ನು ಪ್ರಕಟಿಸಲು ಸ್ಥಾಪಿಸಲಾದ ದಾಯಿರತ್ ಉಲ್-ಮಾರಿಫ್‌ನ್ನು, ೧೯೨೬ರಲ್ಲಿ ಉಸ್ಮಾನಿಯಾ ವಿ. ವಿ. ಯ ಅಧೀನಕ್ಕೊಳಪಡಿಸಲಾಯಿತು. ಐದು ಲಕ್ಷ ರೂ. ಆಸ್ತಿ ಹೊಂದಿರುವ ಇದರ ವಾರ್ಷಿಕ ಆದಾಯ ೩೦,೦೦೦, ರೂ.ಗಳು. ಮಾರಿಫ್‌ನ ಸಂಸ್ಥಾಪಕ ನವಾಬ ಇಮಾದುಲ್ ಮುಲ್ಕ ಬಹಾದೂರ್ ಮರಣ ಹೊಂದಿದ ನಂತರ ಓಸ್ಮಾನಿಯಾ ಅದರ ಹೊಣೆ ವಹಿಸಿಕೊಂಡಿತು. ರಾಜ್ಯ ಕಾರ್ಯಕಾರಿ ಮಂಡಳಿಯ ಅಧ್ಯಕ್ಷ ಈ ಸಂಸ್ಥೆಯ ಚೇರಮನ್‌ರಾದರೆ, ಶಿಕ್ಷಣ ವಿಭಾಗದ ಸದಸ್ಯ ಮತ್ತು ಉಪಕುಲಪತಿ ನವಾಬ ಮೇಹಿದಿ ಯಾರ್ ಜಂಗ್ ಬಹಾದೂರ ಕಾರ್ಯದರ್ಶಿ

ಯಾಗಿದ್ದರು. ಈ ಸಂಸ್ಥೆ ಒಟ್ಟು ೧೧೪ ಅರೇಬಿಕ್ ಪುಸ್ತಕಗಳನ್ನು ಪ್ರಕಟಿಸಿತು. ಕೆಲ ಪುಸ್ತಕಗಳು ಹಾಲ್ಕರಿಂದ ಹನ್ನೆರಡು ಆವೃತ್ತಿಗಳನ್ನು ಕಂಡವು. ಈ ಸಂಸ್ಥೆಯ ಪ್ರಕಟಣೆಗಳಿಗೆ, ಭಾರತದಷ್ಟೇ ಅಲ್ಲ, ಇಜಿಪ್ತ, ಅರೇಬಿಯಾ, ಅಫಘಾನಿಸ್ತಾನ ಮತ್ತು ಯುರೋಪ್‌ಗಳಲ್ಲೂ ಭಾರಿ ಬೇಡಿಕೆಯಿತ್ತು.

ಸುಸಜ್ಜಿತವಾಗಿದ್ದ ವಿಶ್ವವಿದ್ಯಾಲಯದ ಗ್ರಂಥಾಲಯ ಮತ್ತು ಪ್ರಯೋಗಾಲಯಗಳಲ್ಲಿ ಇತಿಹಾಸ, ತತ್ವಜ್ಞಾನ, ಪರ್ಶಿಯನ್, ಅರೇಬಿಕ್, ಉರ್ದು, ತೆಲುಗು, ಕನ್ನಡ, ಮರಾಠಿ, ಸಂಸ್ಕೃತ, ದೇವತಾಶಾಸ್ತ್ರ, ರಸಾಯನಶಾಸ್ತ್ರ, ಭೌತಶಾಸ್ತ್ರ, ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರ ಮುಂತಾದ ವಿಷಯಗಳಲ್ಲಿ ಮೂಲ ಕೃತಿ ರಚನೆಗೆ ಸಾಕಷ್ಟು ಸೌಲಭ್ಯಗಳಿದ್ದವು. ಎಂ. ಎ. ಅಥವಾ ಎಂ. ಎಸ್ಸಿ. ಪದವಿಗಾಗಿ ವಿದ್ಯಾರ್ಥಿಗಳು ಪ್ರಬಂಧಗಳನ್ನು ಸಲ್ಲಿಸಬೇಕಾಗುತ್ತಿತ್ತು. ಕಲೆ, ವಿಜ್ಞಾನ ಮತ್ತು ದೇವತಾಶಾಸ್ತ್ರದಲ್ಲಿ ಪಿಯೆಚ್. ಡಿ. ಪಡೆಯಲು ಅವಕಾಶವಿತ್ತು. ಈ ದಿಶೆಯಲ್ಲಿ ಕಾರ್ಯಮಗ್ನರಾಗಿದ್ದ ಅರ್ಹ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳು ಐವತ್ತು ರೂಪಾಯಿ ವಿದ್ಯಾರ್ಥಿವೇತನ ನೀಡಲಾಗುತ್ತಿತ್ತು. ತೆಲುಗು, ಮರಾಠಿ ಮತ್ತು ಕನ್ನಡ ಭಾಷೆಗಳಲ್ಲಿ ಸಂಶೋಧನೆಗಳಿಗಾಗಿ ವಿಶೇಷ ವಿದ್ಯಾರ್ಥಿವೇತನ ನೀಡಲಾಗುತ್ತಿತ್ತು. ಪ್ರತಿವರ್ಷ ಹೊರಡಿಸಲಾಗುತ್ತಿದ್ದ ವಿ. ವಿ. ಯ ರಿಸರ್ಚ್ ಜರ್ನಲ್‌ನಲ್ಲಿ ಸಿಬ್ಬಂದಿ ವರ್ಗ ಮತ್ತು ಸಂಶೋಧನಾ ವಿದ್ಯಾರ್ಥಿಗಳಿಂದ ರಚಿಸಲ್ಪಟ್ಟ ಮೂಲ ಕೃತಿಗಳನ್ನು ಪ್ರಕಟಿಸಲಾಗುತ್ತಿತ್ತು.

ವಿಶ್ವವಿದ್ಯಾಲಯದ ಕಟ್ಟಡ ನಿರ್ಮಾಣ ಅತಿ ಶೀಘ್ರ ಗತಿಯಲ್ಲಿ ಸಾಗಿದ್ದ ೧೯೪೦-೪೧ ರಲ್ಲಿ ೧೪,೧೪,೪೧೬ ರೂ. ಗಳ ಮುಂಗಡಪತ್ರ ಸಿದ್ಧಪಡಿಸಲಾಗಿತ್ತು. ಅದರ ಪೈಕಿ ರೂ. ಏಳು

ಲಕ್ಷಕ್ಕಿಂತ ಹೆಚ್ಚು ವಿ. ವಿ. ಯ ಕಾಲೇಜಿಗೆ ಒದಗಿಸಲಾಗಿತ್ತು. ಮಹಿಳಾ ಕಾಲೇಜಿಗೆ ಒಂದು ಲಕ್ಷ ರೂ., ವೈದ್ಯಕೀಯ ಕಾಲೇಜಿಗೆ ಎರಡು ಲಕ್ಷ ಮತ್ತು ಎಂಜಿನಿಯರಿಂಗ್ ಕಾಲೇಜಿಗೆ ಮೂರು ಲಕ್ಷ ರೂ. ಒದಗಿಸಲಾಗಿತ್ತು.

ಇದೇ ಸಮಯಕ್ಕೆ, ಸೂಕ್ತವಾದ ಶಿಕ್ಷಣ ಪದ್ಧತಿಯ ಮೂಲಕ ಜನರ ಶಿಕ್ಷಣ ಪ್ರಜ್ಞೆ ಬೆಳೆಸದೇ ಸುಧಾರಣೆಗಳನ್ನು ಮಾಡಲು ಸಾಧ್ಯವಿಲ್ಲವೆಂಬುದನ್ನು ನಿಜಾಮ ಅರಿತಿದ್ದರು. ಆದ್ದರಿಂದ ಅವರು ಶಿಕ್ಷಣ ಎಲ್ಲರಿಗೂ ದೊರೆಯುವಂತೆ ಮಾಡುವತ್ತ ಹೆಚ್ಚು ಲಕ್ಷ್ಯ ವಹಿಸಿದರು. ಅವರ ಆಳಿಕೆಯ ಕಾಲಕ್ಕೆ, ಸರ್ ಅಕಬರ ಹೈದರಿಯವರ ಸಲಹೆಯ ಮೇರೆಗೆ ಶಿಕ್ಷಣ ಪದ್ಧತಿಯಲ್ಲಿ ಆಮೂಲಾಗ್ರ ಬದಲಾವಣೆ ಮಾಡಲಾಯಿತು. ಪರಿಣಾಮವಾಗಿ ನಿಜಾಮರ ಮೊದಲ ೩೭ ವರ್ಷಗಳ ಆಳಿಕೆಯಲ್ಲಿ ರಾಜ್ಯದಲ್ಲಿ ಶಾಲೆಗಳ ಸಂಖ್ಯೆ ೧೦೫೨ ರಿಂದ ೫,೨೨೪ಕ್ಕೆ, ವಿದ್ಯಾವಂತರ ಸಂಖ್ಯೆ ೬೫೧೦೪ ರಿಂದ ೩,೯೫,೬೯೬ಕ್ಕೇರಿತು. ಒಟ್ಟು ವಾರ್ಷಿಕ ವೆಚ್ಚ ಒಂಬತ್ತೂವರೆ ಲಕ್ಷ ರೂಪಾಯಿ ಗಳಿಂದ ಒಂದು ಕೋಟಿ ರೂಪಾಯಿಗಳಿಗಿಂತ ಹೆಚ್ಚಾಯಿತು. ಅಂದರೆ ರಾಜ್ಯದ ಒಟ್ಟು ಆದಾಯದ ಪ್ರತಿಶತ ಹನ್ನೆರಡೂವರೆಯಷ್ಟಕ್ಕೇರಿತು. ಎಲ್ಲ ಲೋಕಲ್ ಫಂಡ್ ಶಾಲೆಗಳನ್ನು ಸರಕಾರಿ ಶಾಲೆಗಳನ್ನಾಗಿ ಪರಿವರ್ತಿಸುವ ಮತ್ತು ಪ್ರಾಥಮಿಕ ಶಿಕ್ಷಣವನ್ನು ಪಂಚವಾರ್ಷಿಕ ಯೋಜನೆಯಡಿ ಅಭಿವೃದ್ಧಿಪಡಿಸುವ ಯೋಜನೆಯನ್ನು ಸರಕಾರ ಜಾರಿಗೊಳಿಸಿತು. ಬಾಲಕಿಯರ ವಿದ್ಯಾಭ್ಯಾಸದತ್ತ ಸಹ ಹೆಚ್ಚು ಲಕ್ಷ್ಯ ವಹಿಸಲಾಯಿತು. ಇವರೊಂದಿಗೆ ವಿದ್ಯಾರ್ಥಿನಿಯರ ಸಂಖ್ಯೆ ಆರು ಸಾವಿರದಿಂದ ೫೭,೫೯೨ಕ್ಕೇರಿತು. ವಿದ್ಯಾರ್ಥಿನಿಯರ ಶಾಲೆಗಳ ಸಂಖ್ಯೆ ೭೮೩ ಕ್ಕೇರಿತು. ಇದೇ ಕಾರಣದಿಂದ ಮುಂದೆ ಉಸ್ಮಾನಿಯಾ ವಿ. ವಿ. ಯ ಮಹಿಳಾ ಕಾಲೇಜು ರಾಜ್ಯದಲ್ಲಿನ ಮಹಿಳಾ ಶಿಕ್ಷಣದ ಅತ್ಯುನ್ನತ ಸಂಸ್ಥೆಯಾಯಿತು. ಈ ಕಾಲೇಜಿನಲ್ಲಿ ಎಂ. ಎ., ಎಂ. ಎಸ್ಸಿ.ವರೆಗಿನ ವ್ಯಾಸಂಗಕ್ಕೆ ಅವಕಾಶವಿತ್ತು. ಇತ್ತೀಚೆಗೆ ಬಿ. ಎ. ಪದವಿಯವರೆಗೆ ಯಾವುದಾದರೊಂದು ವಿಷಯಕ್ಕೆ ಬದಲಾಗಿ ಸಮುದಾಯ ಗೃಹವಿಜ್ಞಾನ ವಿಷಯ ಅಭ್ಯಸಿಸಲು ಉಸ್ಮಾನಿಯಾ ಅವಕಾಶ ನೀಡಿದೆ.

ವಿಶ್ವವಿದ್ಯಾಲಯ, ಕೃಷಿ ಮತ್ತು ತಾಂತ್ರಿಕ ತರಬೇತಿಗಾಗಿ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸುವತ್ತ ರಾಜ್ಯದ ಶಾಲೆಗಳು ಹೆಚ್ಚು ಗಮನ ಹರಿಸಿದ್ದವು. ಹೊಸ ಶಿಕ್ಷಣ ಪದ್ಧತಿಯ ಪ್ರಕಾರ ವಿಶ್ವವಿದ್ಯಾಲಯ ಶಿಕ್ಷಣವನ್ನು ಮೂರು ವರ್ಷಗಳಲ್ಲಿ ಪೂರೈಸುವ ಯೋಜನೆಯನ್ನು ರೂಪಿಸಲಾಯಿತು.

ಉಸ್ಮಾನಿಯಾ ವಿಶ್ವವಿದ್ಯಾಲಯ ಅಂದಿನ ಭಾರತದಲ್ಲಿದ್ದ ಇತರ ವಿಶ್ವವಿದ್ಯಾಲಯಗಳಿಗಿಂತ ಭಿನ್ನವಾದ ವೈಶಿಷ್ಟ್ಯಪೂರ್ಣ ರೂಪ ತಳೆಯಲು ಕಾರಣ ಸರ್ ಅಕಬರ್ ಹೈದರಿಯವರ ಅಪೂರ್ವ ಸೃಜನಶೀಲತೆ. ಅವರ ಕಲಾಪ್ರೇಮ ಮತ್ತು ಕಲಾವಸ್ತುಗಳ ಸಂರಕ್ಷಣೆಯಲ್ಲಿ ಅವರಿಗಿದ್ದ ತೀವ್ರ ಆಸಕ್ತಿಯೇ ಅಂದಿನ ಹೈದರಾಬಾದ ರಾಜ್ಯ ಈ ವಿಷಯದಲ್ಲಿ ಧೀರ ಹೆಜ್ಜೆಗಳನ್ನಿಡುವುದಕ್ಕೆ ಕಾರಣವಾಯಿತು. ಆದರ್ಶ ಮುಸಲ್ಮಾನನ ಅವರ ಪ್ರಕಲ್ಪನೆಯೂ ವಿಶಿಷ್ಟವಾದುದೇ ಆಗಿತ್ತು. ಅವರ ಮಾತಿನಲ್ಲೇ ಹೇಳುವುದಾದರೆ, ಹಿಂದೂ ಅರಸರ ಘನತೆಯನ್ನು ಗುರುತಿಸಿ ಅದರಲ್ಲಿ ನ್ಯಾಯವಾದ ಹೆಮ್ಮೆ ತಳೆಯಬಲ್ಲವನೇ ಆದರ್ಶ ಮುಸಲ್ಮಾನ. ೧೯೨೧ ರಲ್ಲಿ ಅವರು ನಿಜಾಮ ರಾಜ್ಯದ ಅರ್ಥಮಂತ್ರಿತ್ವ ಸ್ಥಾನಕ್ಕೆ ಒಬ್ಬ ಯೂರೋಪಿಯನ್ ಐ. ಸಿ. ಎಸ್. ಅಧಿಕಾರಿಯ ಸ್ಥಾನದಲ್ಲಿ ನೇಮಕ ಹೊಂದಿದರು; ಮುಂದೆ ಈ ಕಾರ್ಯಕಾರಿ ಸಮಿತಿ(ಮಂತ್ರಿಮಂಡಲ)ಯ ಅಧ್ಯಕ್ಷರೂ ಆದರು. ಇದೆಲ್ಲ ಆಗಲು ಅವರಿಗೆ ಸಾಧ್ಯವಾದದ್ದು ನಿಜಾಮರ ಮರ್ಜಿ ಅಥವಾ ಅಪೇಕ್ಷೆಯಂತೆ ಅಲ್ಲ, ತುಸು ಮಟ್ಟಿಗೆ 'ಸಮಸ್ಯಾ ಪುರುಷ'ನೆನಿಸಿದ್ದ ನಿಜಾಮರೆದುರು ಸರಿಯಾಗಿ ತಲೆಯೆತ್ತಿ ನಿಲ್ಲಬಲ್ಲ ವ್ಯಕ್ತಿಯೆಂದು ಬ್ರಿಟಿಶರು ಬಗೆದದ್ದು.

ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿದ್ದರು. ದೇಶದ ಉಳಿದೆಲ್ಲ ಭಾಗಗಳಲ್ಲಿ ಬಹಳ ಮೊದಲೇ ಆರಂಭವಾಗಿದ್ದ ಸ್ವಾತಂತ್ರ್ಯ ಹೋರಾಟ ಹೈದರಾಬಾದಿನಲ್ಲಿ ಪ್ರಾರಂಭವಾದುದು ೧೯೩೮

ಸ್ಥಿ. ಆ ವರ್ಷ ದಸರಾ ಹಬ್ಬದ ಆರಂಭಕ್ಕೆ ಮುನ್ನ ಉಸ್ಮಾನಿಯಾದ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಪ್ರಾರ್ಥನಾ ಮಂದಿರದಲ್ಲಿ 'ವಂದೇ ಮಾತರಂ' ಪಠಿಸಲಾರಂಭಿಸಿದರು. ಆದರೆ ಬ್ರಿಟಿಶ್ ರೆಸಿಡೆಂಟನ ಆಜ್ಞೆಯ ಪ್ರಕಾರ ವಿದ್ಯಾರ್ಥಿನಿಲಯದ ಅಧಿಕಾರಿಗಳು ಅದಕ್ಕೆ ತಡೆಯಾಜ್ಞೆ ವಿಧಿಸಿದರಲ್ಲದೆ, ಪ್ರಾರ್ಥನಾ ಮಂದಿರವನ್ನು ಮುಚ್ಚಿಬಿಟ್ಟರು. ಇದನ್ನೊಂದು ಸವಾಲೆಂದು ಸ್ವೀಕರಿಸಿದ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಕಾರಿಡಾರ್‌ನಲ್ಲಿ 'ವಂದೇ-ಮಾತರಂ' ಪಠಣ ಆರಂಭಿಸಿದರು. ಆಗ ವಿಶ್ವವಿದ್ಯಾಲಯದ ಅಧಿಕಾರಿಗಳು ವಿ. ವಿ. ಯ ಆವರಣದಲ್ಲಿ 'ವಂದೇ ಮಾತರಂ' ಹಾಡಬಾರದೆಂದು ತಡೆಯಾಜ್ಞೆ ವಿಧಿಸಿದರು. ಈ ತಡೆಯಾಜ್ಞೆಯನ್ನು ಹಿಂತೆಗೆದುಕೊಳ್ಳುವಂತೆ ವಿದ್ಯಾರ್ಥಿಗಳು ಮಾಡಿಕೊಂಡ ಮನವಿ ತಿರಸ್ಕೃತವಾಯಿತು.

೧೯೩೮ರ ನವೆಂಬರ್ ೨೯ ರಂದು ವಿ. ವಿ. ಯ ಅನುಕುಲಾಧಿಪತಿ, ಓಂವೂ ವಿದ್ಯಾರ್ಥಿಗಳನ್ನು ಕಾಲೇಜಿನಿಂದ ಅವಮಾನತ್ತುಗೊಳಿಸಿ, ಸಂಜೆಯೊಳಗಾಗಿ ವಿದ್ಯಾರ್ಥಿನಿಲಯ ಬಿಟ್ಟುಹೋಗುವಂತೆ ಸೂಚಿಸಿದರು. ಇನ್ನೂ ಅನೇಕ ಕಠಿಣ ಕ್ರಮಗಳನ್ನು ಕೈಗೊಳ್ಳಲಾಯಿತು. ಆದರೆ ಇದಕ್ಕೆ ಬಗ್ಗದ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿ ಚಳವಳಿ ಆರಂಭಿಸಿದರು.

ಡಿಸೆಂಬರ್ ಹತ್ತರವರೆಗೆ ಈ ಚಳವಳಿ ಮುಂದುವರಿಯಿತು. ಈ ಚಳವಳಿ ಎಷ್ಟು ಪ್ರಭಾವ ಬೀರಿತ್ತೆಂದರೆ, ಜಿಲ್ಲೆ ಜಿಲ್ಲೆಗಳ ವಿದ್ಯಾರ್ಥಿಗಳು ಇದರಲ್ಲಿ ಪಾಲ್ಗೊಂಡರು. ಕೊನೆಗೆ ಡಿಸೆಂಬರ್ ಹತ್ತರಂದು ವಿಶ್ವವಿದ್ಯಾಲಯ, ವಿದ್ಯಾರ್ಥಿಗಳು ಚಳವಳಿ ಹಿಂತೆಗೆದುಕೊಂಡು, ಕ್ಷಮೆ ಕೇಳಿ, ತಮ್ಮ ತರಗತಿಗಳಿಗೆ ಹಾಜರಾಗದಿದ್ದಲ್ಲಿ ಅವರ ಹೆಸರುಗಳನ್ನು ಹಾಜರಿಯಿಂದ ಕಿತ್ತೊಗೆಯುವದಾಗಿ ಬೆದರಿಸಿತು. ವಿದ್ಯಾರ್ಥಿಗಳು ಇದಕ್ಕೆ ಕಿವಿಗೊಡದಿದ್ದಾಗ ವಿ. ವಿ. ಕಾಲೇಜಿನ ೩೫೦ ಜನ ವಿದ್ಯಾರ್ಥಿಗಳನ್ನು, ಸಿಟಿ ಕಾಲೇಜಿನ ೭೦, ಕಲಬುರ್ಗಿ ಶಾಲಾ-ಕಾಲೇಜುಗಳ ೩೦೦ ಮತ್ತು ಮೆಹಬೂಬನಗರ ಹೈಸ್ಕೂಲಿನ ೧೨೦ ಜನ ವಿದ್ಯಾರ್ಥಿಗಳನ್ನು ಹೊರಗೆ ಹಾಕಲಾಯಿತು. ಇದೇ ಸಮಯಕ್ಕೆ ಔರಂಗಾಬಾದ, ಬೀದರ, ನಾಂದೇಡ ಮತ್ತು ಪರಭಣಿ ಜಿಲ್ಲೆಗಳಲ್ಲಿ ವಿದ್ಯಾರ್ಥಿಗಳ ಚಳವಳಿ ಸತತವಾಗಿ ನಡೆದಿತ್ತು. ಉಸ್ಮಾನಿಯಾ ತಾನು ಹೊರಹಾಕಿದ ವಿದ್ಯಾರ್ಥಿಗಳಿಗೆ ಬೇರೆ ಯಾವ ವಿಶ್ವವಿದ್ಯಾಲಯಗಳಲ್ಲೂ ಪ್ರವೇಶ ಸಿಗವಂತೆ ಎಚ್ಚರಿಕೆ ವಹಿಸಿತು. ಆದರೆ ನಾಗಪುರ ವಿಶ್ವವಿದ್ಯಾಲಯ ಈ ವಿದ್ಯಾರ್ಥಿಗಳಿಗೆ ಸಹಾಯ ನೀಡಲು ನಿರ್ಧರಿಸಿ ಅವರಿಗೆ ಪ್ರವೇಶ ನೀಡಿತು. ಹೀಗೆ ನಾಗಪುರ ವಿ. ವಿ. ಸೇರಿದವರಲ್ಲಿ ಈಗ ಕೇಂದ್ರ ಸಚಿವ ಸಂಪುಟದಲ್ಲಿರುವ ಪಿ. ವಿ. ನರಸಿಂಹರಾವ್ ಸಹ ಒಬ್ಬರು. ಉಸ್ಮಾನಿಯಾದಿಂದ ಹೊರಹಾಕಲ್ಪಟ್ಟ ಇತರ ಕೆಲ ಪ್ರಮುಖರೆಂದರೆ ಮಾಜಿ ಸಚಿವರಾದ ದಿವಂಗತ ಎನ್. ರಾಮಚಂದ್ರ ರೆಡ್ಡಿ ಮತ್ತು ದಿ. ಕೆ. ಅಚ್ಯುತ ರೆಡ್ಡಿ.

ನಂತರ ೧೯೩೯ರಿಂದ ೧೯೪೮ರವರೆಗೆ ಉಸ್ಮಾನಿಯಾ ದೇಶಿ ಭಾಷೆಯಲ್ಲಿ ಶಿಕ್ಷಣ ನೀಡುವ ಮತ್ತು ಶಿಕ್ಷಣ ಸಂಸ್ಥೆಗಳಿಗೆ ಮಾನ್ಯತೆ ನೀಡುವತ್ತ ಹೆಚ್ಚು ಗಮನ ಹರಿಸಿತು. ೧೯೪೩ ರಲ್ಲಿ ಶ್ರೀ ಸಿ. ರಾಜಗೋಪಾಲಾಚಾರ್ಯರು ಉಸ್ಮಾನಿಯಾದ ಪದವೀದಾನ ಸಮಾರಂಭದಲ್ಲಿ ಭಾಷಣ ಮಾಡುತ್ತ ಉಸ್ಮಾನಿಯಾ ಭಾರತದ "ಸ್ವದೇಶಿ" ವಿಶ್ವವಿದ್ಯಾಲಯವೆಂದು ಬಣ್ಣಿಸಿದರು. ಇದನ್ನೇ ಆಧಾರವಾಗಿಟ್ಟುಕೊಂಡು ಸ್ವಾತಂತ್ರ್ಯಾನಂತರ ಉಸ್ಮಾನಿಯಾವನ್ನು ಕೇಂದ್ರೀಯ ವಿಶ್ವವಿದ್ಯಾಲಯವನ್ನಾಗಿ ಪರಿವರ್ತಿಸಬೇಕೆಂದು ಸೂಚಿಸಲಾಗಿತ್ತು. ಆದರೆ ಐತಿಹಾಸಿಕ ಕಾರಣಗಳಿಂದಾಗಿ ಅದನ್ನು ಕೈ ಬಿಡಲಾಯಿತು.

ನಂತರ ಅಗಸ್ಟ ೧೯೫೯ರಲ್ಲಿ ಇಂಗ್ಲಿಷಿನೊಂದಿಗೆ ಇತರ ಕೆಲ ಭಾಷೆಗಳ ಕಡ್ಡಾಯ ಅಭ್ಯಾಸವನ್ನು ಜಾರಿಗೊಳಿಸಲು ಉಸ್ಮಾನಿಯಾ ನಿರ್ಧರಿಸಿತು. ಕೆಲ ನೀತಿಶಾಸ್ತ್ರ ವಿಷಯಗಳಿಗೆ ಬದಲಾಗಿ ಇವುಗಳನ್ನು ಅಭ್ಯಸಿಸಬೇಕಿತ್ತು. ಇದರೊಂದಿಗೆ ಕಲಾ ವಿಭಾಗದ ವಿದ್ಯಾರ್ಥಿಗಳು "ಸಾಮಾನ್ಯ ವಿಜ್ಞಾನ" ಮತ್ತು ವಿಜ್ಞಾನ ವಿಭಾಗದ ವಿದ್ಯಾರ್ಥಿಗಳು "ನಾಗರಿಕತೆಯ ಇತಿಹಾಸ" ವಿಷಯಗಳನ್ನು ಅಭ್ಯಸಿಸಬೇಕೆಂದು ನಿರ್ಧರಿಸಲಾಯಿತು. ಪಠ್ಯಕ್ರಮ ತಯಾರಿಸಿ ತರಗತಿಗಳನ್ನು ಆರಂಭಿಸಲಾಯಿತು. ಹೊಸ ಅಧ್ಯಾಪಕರನ್ನು ನೇಮಿಸಲಾಯಿತು. ಆದರೆ ೧೯೫೯ರ ಡಿಸೆಂಬರಿನಲ್ಲಿ ಅಕೆಡಮಿಕ್ ಕೌನ್ಸಿಲ್ಲು ಒಮ್ಮೆಲೆ ಈ ಎರಡೂ ವಿಷಯಗಳಲ್ಲಿ ಪರೀಕ್ಷೆ ನಡೆಸದಿರಲು ನಿರ್ಧರಿಸಿತು. ದೀರ್ಘ ಚರ್ಚೆಯ ನಂತರ ಕಡ್ಡಾಯ ಭಾಷೆಗಳ ಪರೀಕ್ಷೆ ನಡೆಸಲು ತೀರ್ಮಾನಿಸಲಾಯಿತು. ರಾಷ್ಟ್ರೀಯ ಆಶೋತ್ತರಗಳು ಹೆಚ್ಚೆಚ್ಚು ಪ್ರಾಮುಖ್ಯ ಪಡೆಯುತ್ತಿದ್ದ ಈ ಕಾಲದಲ್ಲಿ ವಿಶ್ವವಿದ್ಯಾಲಯದಂತಹ ಸಂಸ್ಥೆಯು ತನ್ನ ಮಧ್ಯಯುಗೀನ ಲಕ್ಷಣಗಳನ್ನು ಕಳಚಿ ಪ್ರಜಾತಂತ್ರವನ್ನು ರೂಢಿಸಿಕೊಳ್ಳಬೇಕೆಂಬುದನ್ನು ಅಕೆಡಮಿಕ್ ಕೌನ್ಸಿಲ್ ಅರ್ಥಮಾಡಿಕೊಳ್ಳಲಿಲ್ಲ. ಇದೇ ಹಂತದಲ್ಲಿಯೇ ಅದು ವಿಭಿನ್ನ ಭಾಷೆಗಳಿಗಾಗಿ ಇದ್ದ ಪ್ರತ್ಯೇಕ ಪ್ರಾಧ್ಯಾಪಕರ ಸ್ಥಾನಗಳನ್ನೆಲ್ಲ ತೆಗೆದುಹಾಕಿಬಿಟ್ಟಿತು – ಮಿತ

ವ್ಯಾಪದ ಸೇವೆ ಮಾಡಿವೆ. ಆದರೆ ಇವಾವೂ ಜನತೆಯ ಆಶೋತ್ತರಗಳಿಗೆ ಅನುಗುಣವಾಗಿರಲಿಲ್ಲ ಮಾತ್ರವೇ ಅಲ್ಲ, ಅವುಗಳನ್ನು ಕಡೆಗಣಿಸುವಂಥವೂ ಆಗಿದ್ದವು.

ಮುಂದೆ ರಾಧಾಕೃಷ್ಣನ್ ವಿಶ್ವವಿದ್ಯಾಲಯ ಆಯೋಗ, ವಿಶ್ವವಿದ್ಯಾಲಯ ಸ್ವಾಯತ್ತ ಸಂಸ್ಥೆಯಾಗಿರಬೇಕೆಂದು ಶಿಫಾರಸು ಮಾಡಿತು. "ವಿಶ್ವವಿದ್ಯಾಲಯಗಳು ಸಾರ್ವಜನಿಕ ಅಭಿಪ್ರಾಯಕ್ಕೆ ಸಂವೇದಿಯಾಗಿರಬೇಕು; ಆದರೆ ಬಾಹ್ಯ ಒತ್ತಡಗಳಿಗೋ, ಭ್ರಷ್ಟಾಚಾರಕ್ಕೋ ಬಲಿಯಾಗಿ, ಶಿಕ್ಷಣ ನೀತಿಗೆ ವಿರುದ್ಧವಾದ ಕಾರ್ಯಗಳಲ್ಲಿ ಅವು ತೊಡಗಬಾರದು. ವಿಶ್ವವಿದ್ಯಾಲಯದ ಆಡಳಿತ ವ್ಯವಸ್ಥೆ ಹಸ್ತಕ್ಷೇಪಗಳಿಂದ ಮುಕ್ತವಿರಬೇಕು. ವಿ. ವಿ. ಯ ಸಿಂಡಿಕೇಟ್ ಕನಿಷ್ಟ ೧೫ ಮತ್ತು ಗರಿಷ್ಠ ೨೦ ಜನ ಸದಸ್ಯರನ್ನು ಹೊಂದಿರಬೇಕು. ಇದರಲ್ಲಿ ಸುಮಾರು ಅರ್ಧದಷ್ಟು ಸದಸ್ಯರು ವಿಶ್ವವಿದ್ಯಾಲಯ ಯಂತ್ರದ ಹೊರಗಿನಿಂದ ಆಯ್ದವರಿರಬೇಕು. ಸಮತೋಲದಲ್ಲಿ ಒಲವು ಮಸು ಮಟ್ಟಿಗೆ ಆಂತರಿಕ ಸ್ವಾಯತ್ತತೆ ಇರಬೇಕೆಂದು ಈ ಸಮಿತಿ ಸೂಚಿಸಿತು.

ಐತಿಹಾಸಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಉಸ್ಮಾನಿಯಾ ವಿಶ್ವವಿದ್ಯಾಲಯ ಮುಸ್ಲಿಂ ಪ್ರಾಬಲ್ಯದ ಕೇಂದ್ರ ಬಿಂದುವಾಗಿಯೇ ಬೆಳೆದು ನಿಂತಿತು. ಅಂತೆಯೇ ಅದು ಸಾರ್ವಜನಿಕರ ಟೀಕೆಗೆ ಕಿವುಡಾಗಿಯೇ ಉಳಿಯಿತು. ವಂದೇ ಮಾತರಂ ಪ್ರಕರಣ ಇದಕ್ಕೊಂದು ಉದಾಹರಣೆ. ವೆಂಕಟ ಸುಬ್ಬರಾವ್ ವರದಿಗೆ ಹಾಗೂ ಅಯ್ಯಂಗಾರ್ – ಅಜ್ಮಿಮ್‌ಯಾರ್ ಜಂಗ್ ವರದಿಗೆ ಕಾರಣವಾದಂತಹ ಘಟನೆಗಳು, ರಜಾಕಾರ್ ಆಂದೋಲನದಲ್ಲಿ ಜನಸಾಮಾನ್ಯರು ಎದುರಿಸಬೇಕಾಗಿ ಬಂದ ಗಂಭೀರ ಸಮಸ್ಯೆಗಳು, ಇದಾವವೂ ಜನತೆಯ ಮನದಿಂದ ಮರೆಯಾಗಿರಲಿಲ್ಲ. ಆದ್ದರಿಂದಲೇ, ನಿಜಾಮ ಸಂಸ್ಥಾನ ಭಾರತದಲ್ಲಿ ವಿಲೀನವಾಗಿ ಒಂದು ತಲೆಮಾರಿನ

ನಂತರ ಉಸ್ಮಾನಿಯಾ ವಿಶ್ವವಿದ್ಯಾಲಯ ಉರ್ದುವಿನ ಬದಲಾಗಿ ಇಂಗ್ಲಿಷನ್ನು ಮಾಧ್ಯಮವಾಗಿ ಸ್ವೀಕರಿಸಿತು. ಹೈದರಾಬಾದಿನ ಪ್ರಾದೇಶಿಕ ಭಾಷೆಗಳಾಗಿದ್ದ ತೆಲುಗು, ಮರಾಠಿ, ಕನ್ನಡಗಳನ್ನು ಮಾಧ್ಯಮಿಕ ಹಂತದಲ್ಲಿ ಕೂಡ ಶಿಕ್ಷಣ ಮಾಧ್ಯಮವೆಂದು ಸ್ವೀಕರಿಸಲಾಗಿರಲಿಲ್ಲ, ಆದರೂ ಎಚ್. ಎಸ್. ಸಿ. ಪರೀಕ್ಷೆಯಲ್ಲಿ ಮಾತ್ರ ಮಾತೃಭಾಷೆಯಲ್ಲಿ ಅಭ್ಯರ್ಥಿಗಳಿಗೆ ಉತ್ತರ ಬರೆಯಲು ಅವಕಾಶವಿತ್ತು. ಅದು ಸಹ ೧೯೪೬-೪೭ ರಿಂದಲೇ. ಆದರೆ ವಿಶ್ವವಿದ್ಯಾಲಯದ ಧೋರಣೆ ಅನಿಶ್ಚಿತವಾದುದಾಗಿದ್ದರಿಂದ ಜನ ಮಾತೃಭಾಷಾ ಮಾಧ್ಯಮದೆಡೆಗೆ ಹೊರಳಲು ಹಿಂಜರಿಯುತ್ತಿದ್ದರೆ; ಶಿಕ್ಷಣ ಇಲಾಖೆಯ ಅಧಿಕಾರಿಗಳು ಉರ್ದುವಿಗೆ ಇನ್ನೂ ದೀರ್ಘ ಜೀವನದಾನ ಮಾಡಲು ಯತ್ನಿಸುತ್ತಿದ್ದರು.

ಕೊನೆಗೆ ೧೯೫೦ ರಲ್ಲಿ ರಾಧಾಕೃಷ್ಣನ್ ಆಯೋಗದ ವರದಿಯ ಆಧಾರದ ಮೇಲೆ ವಿಶ್ವವಿದ್ಯಾಲಯದ ಚಾರ್ಟರನಲ್ಲಿ ಸೂಕ್ತ ತಿದ್ದುಪಡಿ ಮಾಡಲು ಸಿನೇಟ್‌ನ ಸಮಿತಿಯೊಂದನ್ನು ನೇಮಿಸಲಾಯಿತು. ಅಲ್ಲದೆ, ೧೯೫೦ರಲ್ಲಿ ಬಿಡುಗಡೆಯಾದ ಗೋರವಾಲಾ ಆರ್ಥಿಕ ಸಮಿತಿಯ ವರದಿ ಹೈದರಾಬಾದ ರಾಜ್ಯದ ಆಡಳಿತ ದೋಷಗಳನ್ನು ಎತ್ತಿ ತೋರಿಸಿತು. ಹೈದರಾಬಾದು, 'ಸ್ವತಂತ್ರ ರಾಜ್ಯ' ಎಂಬುದನ್ನು ಜಗತ್ತಿಗೆ ತೋರಿಸುವ ಹುಚ್ಚು, ರಾಜ್ಯದ ಬೊಕ್ಕಸವನ್ನು ಬರಿದಾಗಿಸಿದೆ ಎಂದು ವರದಿಯಲ್ಲಿ ಸ್ಪಷ್ಟಪಡಿಸಲಾಗಿತು.

ಅದಕ್ಕನುಗುಣವಾಗಿ ಉಸ್ಮಾನಿಯಾ ಕೆಲ ಕ್ರಾಂತಿಕಾರಿ ಬದಲಾವಣೆಗಳನ್ನು ಮಾಡಿತು. ಈ ಬದಲಾವಣೆಯ ಸಮಯದಲ್ಲಿ, ಉಸ್ಮಾನಿಯಾ ವಿ. ವಿ. ದೇಶದ ಇತರ ವಿಶ್ವವಿದ್ಯಾಲಯಗಳಂತೆ ಮೊದಲ ೧೦-೧೩ ವರ್ಷಗಳ ಕಾಲ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ನೀಡಿ ನಂತರ ಹಿಂದಿ ಅಥವಾ ಇತರ ಪ್ರಾದೇಶಿಕ ಭಾಷೆಗಳ ಮೂಲಕ ಶಿಕ್ಷಣ ನೀಡಬೇಕೆ ಅಥವಾ ಬೇಡವೇ ಎಂಬ ವಿಷಯದ ಬಗ್ಗೆ ದೀರ್ಘ ಚರ್ಚೆ ನಡೆಯಿತು. ಅಲ್ಲದೆ ಹದಿಮೂರು ವರ್ಷಗಳ ನಂತರವೂ ಇಂಗ್ಲಿಷ್ ಭಾಷೆಯಲ್ಲಿ ಶಿಕ್ಷಣ ನೀಡುವುದನ್ನು ಮುಂದುವರಿಸಲು ಅವಕಾಶವಿದೆಯೇ ಎಂಬುದರ ಬಗ್ಗೆ ಕೇಂದ್ರ ಸರಕಾರ ಖಚಿತ ನಿಲುವು ತಳೆದಿರಲಿಲ್ಲ. ಇನ್ನೂ ಕೆಲವರು, ಈ ವಿಷಯದಲ್ಲಿ ಉಸ್ಮಾನಿಯಾ ಇತರ ವಿ. ವಿ.ಗಳನ್ನೇ ಅನುಸರಿಸುವದರ ಬದಲು, ದೇಶಭಾಷೆಗಳಲ್ಲೇ ಶಿಕ್ಷಣ ನೀಡಬೇಕೆಂದು ಅಭಿಪ್ರಾಯಪಟ್ಟರು. ಕಲಾ ವಿಭಾಗದಲ್ಲಿ ದೇಶಭಾಷೆಯಲ್ಲೇ ಶಿಕ್ಷಣ ನೀಡುತ್ತಿದ್ದ ನಾಗಪುರ ವಿ. ವಿ. ಯನ್ನು ಅವರು ಉದಾಹರಿಸಿದರು. ಆದರೆ ದೇಶದ ಇತರ ವಿ.ವಿ.ಗಳ ಮಾರ್ಗವನ್ನೇ ಉಸ್ಮಾನಿಯಾ ಅನುಸರಿಸಬೇಕು. ಇಲ್ಲದಿದ್ದರೆ ಒಂದು ದಶಕದಲ್ಲಿಯೇ ಹೊರ ರಾಜ್ಯಗಳ ಜನ ಉಸ್ಮಾನಿಯಾವನ್ನು ಸಂಪೂರ್ಣವಾಗಿ ತಮ್ಮ ಹತೋಟಿಗೆ ತೆಗೆದುಕೊಳ್ಳುತ್ತಾರೆ ಎಂಬುದು ಸಾಮಾನ್ಯ ಅಭಿಪ್ರಾಯವಾಗಿತ್ತು. "ಹಿಂದೀ ಬೆಂಬಲಿಗರು ಮುಸ್ಲಿಂ ಜಾತಿವಾದಿಗಳೊಡಗೂಡಿ ಉರ್ದು ಮಾಧ್ಯಮವನ್ನು ಉಳಿಸಿಕೊಳ್ಳಲು ಅವಕಾಶ ನೀಡಬಾರದು. ನಾವೂ ಸಹ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ನೀಡಲು ಆರಂಭಿಸಿ ಬೇರೆ ರಾಜ್ಯಗಳ ಜನರೊಡನೆ ಸೇರಿಕೊಳ್ಳೋಣ" ಎಂಬುದು ಹೆಚ್ಚಿನವರ ವಾದವಾಗಿತ್ತು.

೧೯೫೬ರ ನವೆಂಬರ್ ಒಂದರಂದು ರಾಜ್ಯಗಳ ಪುನರ್ರಚನೆಯಾದಾಗ ಹೈದರಾಬಾದ ರಾಜ್ಯದಲ್ಲಿ ಪ್ರತಿಶತ ೧೧.೬ ರಷ್ಟು ಜನ ಮಾತ್ರ ಉರ್ದು ಭಾಷಿಕರಾಗಿದ್ದರು. ಇದು ಮೇಲಿನ ವಾದಕ್ಕೆ ಪುಷ್ಟಿ ನೀಡಿತು. (ಉಸ್ಮಾನಿಯಾದ ಇನ್ನೊಂದು ವೈಶಿಷ್ಟ್ಯವೆಂದರೆ ರಾಜ್ಯಗಳ ಪುನರ್ರಚನೆಯ ನಂತರ ಉಸ್ಮಾನಿಯಾದ ಮೂವರು ಹಿಂದಿನ ವಿದ್ಯಾರ್ಥಿಗಳು ಬೇರೆ ಬೇರೆ ಅವಧಿಯಲ್ಲಿ ಮೂರು ರಾಜ್ಯಗಳ ಮುಖ್ಯಮಂತ್ರಿಗಳಾದುದು. ಅವರೆಂದರೆ ಮಹಾರಾಷ್ಟ್ರದ ಎಸ್. ಬಿ. ಚವ್ಹಾಣ, ಆಂಧ್ರದ ಪಿ. ವಿ. ನರಸಿಂಹರಾವ್ ಮತ್ತು ಕರ್ನಾಟಕದ ವೀರೇಂದ್ರ ಪಾಟೀಲ.

೧೯೪೮ ರಿಂದ ೧೯೫೬ ರವರೆಗಿನ ಅವಧಿಯಲ್ಲಿ ಉಸ್ಮಾನಿಯಾ ಸಾಕಷ್ಟು ಅಭಿವೃದ್ಧಿ ಗೊಂಡಿತು. ಹಿಂದಿನಂತೆ ತನ್ನ ಪ್ರತ್ಯೇಕತಾ ಧೋರಣೆಯನ್ನು ತ್ಯಜಿಸಿ ತನ್ನ ಏಕಾಕಿತನಕ್ಕೆ ವಿದಾಯ ಹೇಳಿತು. ಮುಂಬಯಿ ವಿಶ್ವವಿದ್ಯಾಲಯವೊಂದನ್ನುಳಿದು ಇತರ ಎಲ್ಲ ವಿಶ್ವವಿದ್ಯಾಲಯಗಳೊಂದಿಗೆಯೂ

ಸಹಕಾರ ಮನ್ನಣೆ ನೀಡುವ ಹಾಗೂ ವಿದ್ಯಾರ್ಥಿಗಳಿಗೆ ಶೌಚ್ಯ ಒದಗಿಸುವ ಕುರಿತು ಒಪ್ಪಂದ ಮಾಡಿಕೊಂಡಿತು. ಔರಂಗಾಬಾದ, ವರಂಗಲ್ ಮತ್ತು ಕಲಬುರ್ಗಿ ಇಂಟರ್‌ಮೀಡಿಯೆಟ್ ಕಾಲೇಜುಗಳ ಮಟ್ಟವನ್ನು ಹೆಚ್ಚಿಸಲಾಯಿತು. ಕಲಾ, ವಿಜ್ಞಾನ, ವಾಣಿಜ್ಯ ಮತ್ತು ಧರ್ಮ ಹಾಗೂ ಸಂಸ್ಕೃತಿ ವಿಭಾಗಗಳಲ್ಲಿ ಪೂರ್ವಪದವಿ ಮತ್ತು ಮೂರು ವರ್ಷಗಳ ಪದವಿ ಕೋರ್ಸುಗಳಿಗಾಗಿ ಅಧ್ಯಯನ ಮಂಡಳಿ ವಿವರವಾದ ಪಠ್ಯಕ್ರಮ ತಯಾರಿಸಿತು. ೧೯೫೫–೫೬ರಲ್ಲಿ ಉಸ್ಮಾನಿಯಾ ವಿ. ವಿ. ಯು ಕಾಲೇಜುಗಳು ಭಾರತ ಸರಕಾರದಿಂದ ೨೨ ೫೨,೦೯೫ ರೂ. ಗಳನ್ನು ಅನುದಾನವಾಗಿ ಪಡೆದವು. ಅಲ್ಲದೆ ವಿಶ್ವವಿದ್ಯಾಲಯ ಅನುದಾನ ಸಮಿತಿ, ಭಾರತೀಯ ಕೃಷಿ ಸಂಶೋಧನಾ ಮಂಡಳಿ ಮತ್ತು ವಿಶ್ವವಿದ್ಯಾಲಯ ಶಿಕ್ಷಣ ಅಭಿವೃದ್ಧಿ ಯೋಜನಾ ಆಯೋಗಗಳು ೩,೫೫,೭೦೫ ರೂಪಾಯಿಗಳ ಅನುದಾನ ನೀಡಿದವು.

ಈ ಅವಧಿಯಲ್ಲಿ ಹೈದರಾಬಾದ ರಾಜ್ಯದ ಉನ್ನತ ಶಿಕ್ಷಣದ ಇನ್ನೊಂದು ವೈಶಿಷ್ಟ್ಯವೆಂದರೆ ೧೯೫೬ರಲ್ಲಿ ಹತ್ತು ಹೊಸ ಕಾಲೇಜುಗಳು ಆರಂಭವಾದುದು. ಈ ಹತ್ತೂ ಕಾಲೇಜುಗಳಿಗೂ ಸರಕಾರ ರೂ. ೫೦,೦೦೦ ಮೂಲ ಬಂಡವಾಳವನ್ನು ಅನುದಾನ ರೂಪದಲ್ಲಿ ನೀಡಿತು. ಅಲ್ಲದೆ ಈ ಶಿಕ್ಷಣ ಸಂಸ್ಥೆಗಳಿಗೆ ಜನತೆ ನೀಡಿದ ಪ್ರೋತ್ಸಾಹ, ಹೈದರಾಬಾದ ರಾಜ್ಯಕ್ಕೊಂದು ಹೆಮ್ಮೆಯ ವಿಷಯವಾಗಿತ್ತು.

ಇದಕ್ಕೂ ಮುನ್ನ ೧೯೫೦ರಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಚಾರ್ಟರನ್ನು ಬದಲಾಯಿಸಿ ವಿ. ವಿ. ಯದ ಆಡಳಿತ ಮತ್ತು ಕಾರ್ಯಕಲಾಪಗಳಲ್ಲಿ ಪ್ರಜಾಪ್ರಭುತ್ವ ಪದ್ಧತಿಯನ್ನು ಜಾರಿಗೊಳಿಸಲಾಗಿತ್ತು. ಇದರಿಂದ ಉಸ್ಮಾನಿಯಾ ವಿ. ವಿ. ಸ್ವಾಯತ್ತ ಸಂಸ್ಥೆಯ ರೂಪ ತಳೆದಿತ್ತು. ವಾರ್ಷಿಕ ಅನುದಾನಕ್ಕಾಗಿ ಮಾತ್ರ ಅದು ಸರಕಾರ

ಅವಕಾಶವಿದೆ.

ರಾಧಾಕೃಷ್ಣನ್ ಸಮಿತಿಯ ಪ್ರಮುಖ ಶಿಫಾರಸುಗಳನ್ನು ಪೂರ್ತಿಯಾಗಿ ಸ್ವೀಕರಿಸಿ ಕೃತಿಗಿಳಿಸಿದ ದೇಶದ ಕೆಲವೇ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಉಸ್ಮಾನಿಯಾ ಒಂದು. ಉಸ್ಮಾನಿಯಾದ ಈ ಅಪಾರ ಪ್ರಗತಿಯ ಕೀರ್ತಿ ಉಪಕುಲಪತಿ ಡಿ. ಎಸ್. ರೆಡ್ಡಿಯವರಿಗೆ ಸಲ್ಲುತ್ತದೆ. ಸದ್ಯ ಈ ವಿಶ್ವವಿದ್ಯಾಲಯದ ಅಧೀನದಲ್ಲಿರುವ ಕಾಲೇಜುಗಳ ಸಂಖ್ಯೆ ೧೭೮ಕ್ಕೂ ಹೆಚ್ಚು. ಅಲ್ಲದೆ ವಿಶ್ವವಿದ್ಯಾಲಯದ ಆವರಣದಲ್ಲಿ ನಿರ್ಮಿಸಲಾಗಿರುವ ಪ್ರಾದೇಶಿಕ ಸಂಶೋಧನಾ ಪ್ರಯೋಗಾಲಯ, ಇಂಗ್ಲಿಷ್ ಮತ್ತು ವಿದೇಶಿ ಭಾಷೆಗಳ ಕೇಂದ್ರೀಯ ಸಂಸ್ಥೆ, ರಾಜ್ಯ ಪತ್ರಾಗಾರ ವಿಭಾಗ, ಮುಂತಾದ ಸಂಸ್ಥೆಗಳ ಸ್ಥಾಪನೆ ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ಕಳೆ ನೀಡಿದೆ. ವಿಶ್ವವಿದ್ಯಾಲಯದ ಸುಂದರವಾದ ಉದ್ಯಾನವನ ದಣಿದ ವಿದ್ಯಾರ್ಥಿಗಳಿಗೆ ಉತ್ತಮ ವಿಶ್ರಾಂತಿಧಾಮವಾಗಿದೆ.

ಟಾಗೋರ ಸಭಾಂಗಣ ಮತ್ತು ಹತ್ತಿರದಲ್ಲೇ ಇರುವ ಅಮೇರಿಕನ್ ಅಧ್ಯಯನ ಸಂಶೋಧನಾ ಕೇಂದ್ರ ಉಸ್ಮಾನಿಯದ ಹೆಮ್ಮೆಯ 'ಆಸ್ತಿ'ಗಳಾಗಿವೆ.

ಇಂತಹ ಐತಿಹಾಸಿಕ ವಿಶ್ವವಿದ್ಯಾಲಯದ ಶಾಶ್ವತ ಪ್ರದರ್ಶನವನ್ನು ೧೯೮೫ರ ಏಪ್ರಿಲ್‌ನಲ್ಲಿ ಆಗ ಆಂಧ್ರದ ರಾಜ್ಯಪಾಲರಾಗಿದ್ದ ಡಾ. ಶಂಕರ ದಯಾಳ ಶರ್ಮಾ ಉದ್ಘಾಟಿಸಿದ್ದರು. ಈ ಪ್ರದರ್ಶನವನ್ನು ವಿಶ್ವವಿದ್ಯಾಲಯದ ಗ್ರಂಥಾಲಯದ ಆವರಣದಲ್ಲಿ ಏರ್ಪಡಿಸಲಾಗಿದೆ. ಈ ಪ್ರದರ್ಶನ ಪ್ರೇಕ್ಷಕರಿಗೆ ಉಸ್ಮಾನಿಯದ ಅಭಿವೃದ್ಧಿಯನ್ನು ಮೂರು ಹಂತಗಳಲ್ಲಿ ತೋರಿಸುತ್ತದೆ. ಮೊದಲ ಹಂತವೆಂದರೆ ಉಸ್ಮಾನಿಯದ ಸ್ಥಾಪನೆ ನಂತರ ಅದರ ಕಟ್ಟಡದ ಅಭಿವೃದ್ಧಿ ಕೊನೆಗೆ ಅದರ ರಜತ ಮಹೋತ್ಸವ, ಸ್ವರ್ಣ ಮಹೋತ್ಸವ ಹಾಗೂ ವಜ್ರ ಮಹೋತ್ಸವಗಳನ್ನು ಈ ಪ್ರದರ್ಶನ ಚಿತ್ರಿಸಿದೆ. ಗ್ಯಾಲರಿಯಲ್ಲಿ ಅಮೂಲ್ಯ ದಾಖಲೆಗಳು ಮತ್ತು ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದೆ. ನಿಜಾಮ ವಿಶ್ವವಿದ್ಯಾಲಯ ಸ್ಥಾಪನೆಗೆ ಅನು






# ಮೀನುಗಾರರಿಗೆ ಸಾಮೂಹಿಕ ವಿಮಾಯೋಜನೆಯ ಪ್ರೀಮಿಯಂ ವಿನಾಯಿತಿ

## ಕಡಲಾಳದಿಂದ ಮತ್ಸ್ಯ ಸಂಪತ್ತನ್ನು ಅರಸಿ ತರುವ ಧೀರರಿಗೆ ಕರ್ನಾಟಕ ಸರ್ಕಾರದ ಸಹಾಯಹಸ್ತ

ರಾತ್ರಿ ಹಗಲು ಪ್ರಕೃತಿಯ ಶಕ್ತಿಗಳನ್ನೆದುರಿಸಿ ಸಮುದ್ರಾಚೆಗೆ ಹೋಗಿ, ತೆರೆಗಳೊಡನೆ ಹೋರಾಡಿ ಜೀವನ ನಡೆಸುವ ಮೀನುಗಾರರ ಬಗ್ಗೆ ಕರ್ನಾಟಕ ಸರಕಾರ ತನ್ನ ಕಾಳಜಿಯನ್ನು ವ್ಯಕ್ತ ಪಡಿಸುತ್ತಿದೆ. ೧೯೮೩-೮೪ ರಿಂದ ಜಾರಿಗೆ ತರಲಾಗಿರುವ ಒಳನಾಡು ಹಾಗೂ ಕರಾವಳಿ ಮೀನುಗಾರರ ಸಾಮೂಹಿಕ ವಿಮಾಯೋಜನೆಯ ಪ್ರಿಮಿಯಂ ಹಣದಿಂದ ಈ ವರ್ಷದಲ್ಲಿ, ಅಂದರೆ ೧-೫-೮೬ ರಿಂದ ೩೦-೪-೮೭ರ ವರೆಗೆ, ಮೀನುಗಾರರನ್ನು ಸಂಪೂರ್ಣ ವಾಗಿ ಮುಕ್ತಗೊಳಿಸುತ್ತಿದೆ.

ಈ ವರ್ಷದಲ್ಲಿ ೫೭,೭೬೮ ಮೀನುಗಾರರ ಪರವಾಗಿ ಕೇಂದ್ರ ಸರಕಾರ ಮತ್ತು ಕರ್ನಾಟಕ ಸರಕಾರದ ಸಹಭಾಗಿತ್ವದಲ್ಲಿ ವಿಮಾ ಕಂಪನಿಗೆ ತಲಾ ರೂ. ೯ ರಂತೆ ಪ್ರೀಮಿಯಂ ಹಣ ತುಂಬಲಾಗಿದೆ.

ಈ ಸಾಮೂಹಿಕ ವಿಮಾಯೋಜನೆಯಲ್ಲಿ ಆಕಸ್ಮಿಕ ಅಪಘಾತಕ್ಕೀಡಾಗಿ ಅಂಗವಿಕಲರಾದ ಮೀನುಗಾರರಿಗೆ ಅಥವಾ ಮೃತರಾದ ಮೀನುಗಾರರ ಅವಲಂಬಿಗಳಿಗೆ ರೂ. ೧೫,೦೦೦ ವಿಮಾಹಣವನ್ನು ನೀಡಲಾಗುವುದು; ಅಪೂರ್ಣ ಅಂಗವಿಕಲರಾದಲ್ಲಿ ಮೀನುಗಾರರಿಗೆ ರೂ. ೭,೫೦೦ ವಿಮಾಹಣ ನೀಡಲಾಗುವುದು. ಈಗ ಮೀನುಗಾರರು ನಿಶ್ಚಿಂತರಾಗಿ ಮೀನು ಹಿಡಿಯಲು ಹೋಗಬಹುದು. ಆಕಸ್ಮಾತ್ ಏನಾದರೂ ಅನಾಹುತವಾದಲ್ಲಿ ಅವರ ಕುಟುಂಬ ಗಳು ದಾರಿಪಾಲಾಗಬೇಕಾಗಿಲ್ಲ. ಅವರ ಕಷ್ಟಕಾಲದಲ್ಲಿ ಈ ವಿಮಾಹಣ ಅವರಿಗೆ ಸಹಾಯ ನೀಡುತ್ತದೆ.

ಒಳನಾಡು ಹಾಗೂ ಕರಾವಳಿ ಮೀನುಗಾರಿಕಾ ಸಹಕಾರಿ ಸಂಘಗಳ ಸದಸ್ಯರಾಗಿರುವ ಎಲ್ಲ ಮೀನುಗಾರರು ಈ ಸಾಮೂಹಿಕ ವಿಮಾಯೋಜನೆಯಡಿಯಲ್ಲಿ ಪ್ರಯೋಜನ ಪಡೆ ಯುವರು. ಹೆಚ್ಚು ಹೆಚ್ಚು ಮೀನುಗಾರರು ಈ ಸಹಕಾರಿ ಸಂಘಗಳ ಸದಸ್ಯರಾಗಬೇಕೆಂದು ಕೋರಲಾಗಿದೆ. ಸ್ಥಳೀಯ ಮೀನುಗಾರಿಕಾ ಅಧಿಕಾರಿಗಳಿಂದ ಈ ಬಗ್ಗೆ ಹೆಚ್ಚಿನ ವಿವರ ಗಳನ್ನು ಪಡೆಯಬಹುದು.

ಬನ್ನಿ, ಮೀನುಗಾರಿಕಾ ಸಹಕಾರಿ ಸಂಘದ ಸದಸ್ಯರಾಗಿ
ವಿಮಾ ಯೋಜನೆಯ ಪ್ರಯೋಜನ ಪಡೆಯಿರಿ.

'ಕರ್ನಾಟಕ ವಾರ್ತೆ'

ಮತಿ ನೀಡಿದ ದಾಖಲೆ ಪತ್ರವೂ ಇಲ್ಲಿದೆ. ಅಲ್ಲದೆ ನಿಜಾಮರ ಮತ್ತು ಸರ್ ಅಕಬರ ಹೈದರಿಯವರ ತೈಲವರ್ಣ ಚಿತ್ರಗಳನ್ನೂ ಪ್ರದರ್ಶಿಸಲಾಗಿದೆ.

ದೇಶಿ ಭಾಷೆಯ ಮೂಲಕ ಶಿಕ್ಷಣ ನೀಡುವ ಉಸ್ಮಾನಿಯ ವಿ. ವಿ. ಯ ಉದ್ದೇಶವನ್ನು ಹೊಗಳಿ ೧೯೧೮ರ ಜನೆವರಿಯಲ್ಲಿ ಡಾ. ರವೀಂದ್ರನಾಥ ಟಾಗೋರ ಬರೆದ ಪತ್ರವನ್ನೂ ಪ್ರದರ್ಶನದಲ್ಲಿ ಕಾಣಬಹುದಾಗಿದೆ. ವಿ. ವಿ. ನಿರ್ಮಾಣದ ಮೂಲ ಯೋಜನೆ, ವಿ. ವಿ. ಯ ಆವರಣದ ಅಭಿವೃದ್ಧಿಯನ್ನು ಬಿಂಬಿಸುವ ಛಾಯಾಚಿತ್ರಗಳು, ಏಳನೇ ನಿಜಾಮರ ವಿಚಾರಗಳನ್ನು ಬಿಂಬಿಸುವ ಗಾಜಿನ ಫಲಕಗಳು ಮತ್ತು ಹೈದರಾಬಾದ ರಾಜ್ಯದ ವೈಭವವನ್ನು ಸಾರುವ ಚಿತ್ರಗಳೂ ಪ್ರದರ್ಶನದಲ್ಲಿವೆ. ಅಲಂಕಾರಿಕ ಶೈಲಿಯಲ್ಲಿ ಬರೆಯಲ್ಪಟ್ಟ ನಿಜಾಮನ ಹಿತವಚನಗಳ ಫಲಕಗಳು, ವಿ. ವಿ. ಯ ಕಲಾ ಕಾಲೇಜು ನಿರ್ಮಾಣವಾಗುವದಕ್ಕೆ ಮುನ್ನ ತಯಾರಿಸಲಾದ ಅದರ ಕಟ್ಟಿಗೆಯ ಪ್ರತಿಕೃತಿಗಳನ್ನೂ ನೋಡಬಹುದಾಗಿದೆ.

ಜನರಲ್ಲಿ ನಿಜಾಮರ ನೆನಪು ಸದಾಕಾಲ ಉಳಿಯುವಂತಾಗಲು ವಿಶ್ವವಿದ್ಯಾಲಯ ೧೯೮೪ರ ಮೇ ತಿಂಗಳಿನಲ್ಲಿ ಅವರ ಸ್ಮಾರಕವೊಂದನ್ನು ನಿರ್ಮಿಸಲು ನಿರ್ಧರಿಸಿತು. ನಿಜಾಮರ ಚಾರಿಟೇಬಲ್ ಟ್ರಸ್ಟ್‌ನ ಸಹಾಯದಿಂದ ಈ ಕಾರ್ಯವನ್ನು ಪೂರ್ಣಗೊಳಿಸಲಾಗಿದೆ.

ಉಸ್ಮಾನಿಯಾ ವಿಶ್ವವಿದ್ಯಾಲಯದ ಹುಟ್ಟು ಮತ್ತು ಬೆಳವಣಿಗೆ ಬಗ್ಗೆ ಸರಿಯಾದ ರೀತಿಯಲ್ಲಿ ವಿವರಣೆ ನೀಡುವದೇ ಈ ಪ್ರದರ್ಶನದ ಉದ್ದೇಶ ಎಂದು ವಿ. ವಿ. ಯ ಅಧಿಕಾರಿಯೊಬ್ಬರು ಹೇಳಿದ್ದಾರೆ.

೧೯೧೭ರಲ್ಲಿ ಸ್ಥಾಪನೆಯಾದಾಗಿನಿಂದ ಉಸ್ಮಾನಿಯಾ ವಿ. ವಿ. ಬಹಳ ಅಭಿವೃದ್ಧಿ ಹೊಂದಿದೆ. ಇನ್ನೂ ಬಹಳ ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತಿರುವ ಇದರ ಅವಶ್ಯಕತೆಗಳನ್ನು ಪೂರೈಸುವದು ರಾಜ್ಯ ಸರಕಾರಕ್ಕೆ ಸಾಧ್ಯವಾಗುತ್ತಿಲ್ಲ. ಆದರೂ ವಿಶ್ವವಿದ್ಯಾಲಯ ತನ್ನ ದಿನನಿತ್ಯದ ಕಾರ್ಯ ನಿರ್ವಹಣೆಗೆ ಸರಕಾರವನ್ನೇ ಅವಲಂಬಿಸಬೇಕಾಗಿದೆ. ಈ ಹಣಕಾಸಿನ ಮುಗ್ಗಟ್ಟನ್ನು ಬಗೆಹರಿಸಲು 'ಉಸ್ಮಾನಿಯಾ ವಿಶ್ವವಿದ್ಯಾಲಯ ಕ್ಷೇಮಾಭಿವೃದ್ಧಿ ಫಂಡ'ನ್ನು ಸ್ಥಾಪಿಸಲಾಗಿದ್ದು, ನೆರವು ನೀಡುವಂತೆ ಖಾಸಗಿ ಸಂಸ್ಥೆಗಳಿಗೆ, ಜನಸಾಮಾನ್ಯರಿಗೆ ಕೇಳಿಕೊಳ್ಳಲಾಗಿದೆ.

ದೇಶದ ಉತ್ತರ ಮತ್ತು ದಕ್ಷಿಣ ಭಾಗಗಳ ನಡುವಣ ಕೊಂಡಿಯಂತಿರುವ ಉಸ್ಮಾನಿಯಾ ಮುಂಬರುವ ವರ್ಷಗಳಲ್ಲಿ ದೇಶದ ಅತಿ ದೊಡ್ಡ ವಿಶ್ವವಿದ್ಯಾಲಯವಾಗುವತ್ತ ದೃಢವಾದ ಹೆಜ್ಜೆ ಇಡುತ್ತಲಿದೆ.





---

Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli–580 020 Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46–42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Registrar of Newspapers for India under No. 3539/57*

Cover Printed at. Bharat Photo Offset Works, Dharwad-580 001 Ph. 8